# ದಕ್ಷಿಣ ಕನ್ನಡ ಜಿಲ್ಲೆಯ ಮರಾಟಿಗರ ಜಾನಪದ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ
ಸಲ್ಲಿಸಿದ ಮಹಾಪ್ರಬಂಧ



ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೭

# ದಕ್ಷಿಣ ಕನ್ನಡ ಜಿಲ್ಲೆಯ ಮರಾಟಿಗರ ಜಾನಪದ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ
ಸಲ್ಲಿಸಿದ ಮಹಾಪ್ರಬಂಧ



ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೭

* * * * *

# ಅಧ್ಯಾಯ - ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

### ಪೀಠಿಕೆ

ಮಾನವ ಸಂಘಜೀವಿ, ಸಮಾಜಜೀವಿ, ಜಗತ್ತಿನ ಜೀವ ಸಂಕುಲಗಳಲ್ಲೆಲ್ಲಾ ಅತ್ಯುನ್ನತ ಸ್ಥಾನ ಮಾನವನದು. ಆತನು ತನ್ನ ಭೌತಿಕ ಮತ್ತು ಸಾಮಾಜಿಕ ಜ್ಞಾನವನ್ನು ವಿಕಸಿಸುತ್ತಾ ರೂಢಿಸಿಕೊಂಡಿರುವುದೇ ಸಂಸ್ಕೃತಿ. ಸರಳವಾಗಿ ಹೇಳುವುದಾದರೆ ವ್ಯವಸ್ಥಿತವಾಗಿರುವ ಜನರ ಗುಂಪೇ ಸಮಾಜ. ಆ ಸಮಾಜದ ಜನರು ವರ್ತಿಸುವ, ಬದುಕುವ ರೀತಿಯೇ ಸಂಸ್ಕೃತಿ. ಜಗತ್ತಿನ ಎಂತಹ ಕಗ್ಗಂಟಾದ ಪ್ರದೇಶದಲ್ಲಿದ್ದರೂ ಮಾನವ ಜನಾಂಗದ ತನ್ನದೇ ಆದ ಸಂಸ್ಕೃತಿಯನ್ನು ಹೊಂದಿರುವುದು ದಿಟವಾಗಿದೆ. ಅದು ಹೊರ ನೋಟಕ್ಕೆ ಪ್ರತ್ಯಕ್ಷವಾಗಿ ಕಾಣದಿದ್ದರೂ ಪರೋಕ್ಷವಾಗಿ ಜೀವನದಲ್ಲಿ ಅಡಗಿರುತ್ತದೆ. ಜಗತ್ತಿನ ಕೋಟ್ಯಾಂತರ ಜೀವವೈವಿಧ್ಯದಲ್ಲಿ ಮನುಷ್ಯ ಪ್ರತ್ಯೇಕವಾಗಿ, ವಿಶಿಷ್ಟವಾಗಿ ಕಾಣಲು ಈ ಸಂಸ್ಕೃತಿಯೇ ಕಾರಣವಾಗಿದೆ. ಇತರೆ ಜೀವಿಗಳು ಜೈವಿಕ ಆಧಾರದಲ್ಲಿ ಸಾಮಾಜಿಕ ಸ್ವರೂಪವಿದ್ದರೆ ಮಾನವನಲ್ಲಿ ಸಮಾಜ ಜೈವಿಕಗಿಂತ ಹೆಚ್ಚಾಗಿ ಸಾಂಸ್ಕೃತಿಕವಾಗಿ ಗುರುತಿಸಲಾಗುತ್ತದೆ.

ಪ್ರಸ್ತುತ ಮರಾಟಿ ಬುಡಕಟ್ಟಿನ ಜಾನಪದೀಯ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಮರಾಟಿಗರನ್ನು ಬುಡಕಟ್ಟು ಎಂದು ಪರಿಗಣಿಸಿರುವುದರಿಂದ ಬುಡಕಟ್ಟು (Tribe) ಬಗೆಗೆ ವಿಚಾರ ಇಲ್ಲಿ ಪ್ರಸ್ತುತವಾಗುತ್ತದೆ. ''ನಿರಂತರ ಪರಿವರ್ತನಶೀಲನಾದ ಮಾನವ ಸಂಸ್ಕೃತಿಯ ಒಳಮರ್ಮವನ್ನರಿಯಬೇಕಾದರೆ ಬುಡಕಟ್ಟು ಜನಾಂಗಗಳ ಸಂಸ್ಕೃತಿಯೆಡೆಗೆ ಆದ್ಯಗಮನಹರಿಸಬೇಕಾಗುತ್ತದೆ. ಸಹಸ್ರಾರು ವರ್ಷಗಳಿಂದ ನಗರ, ಸಂಸ್ಕೃತಿಯ ಪ್ರಭಾವಕ್ಕೊಳಗಾಗದೆ ಗುಡ್ಡಗಾಡು, ದ್ವೀಪ, ಹಿಮಪ್ರದೇಶಗಳೇ ಮೊದಲಾದ ವಿವಿಧ ಪ್ರದೇಶಗಳಲ್ಲಿ ನೆಲೆಸಿ, ತಮ್ಮದೇ ಆದ ಉಪಭಾಷೆ, ಮೂಲ ಪುರುಷ ಆದಿದೈವ ಹಾಗೂ ಮುಖಂಡರನ್ನು ಹೊಂದಿರುವ, ರೂಢಿ, ನಂಬಿಕೆ, ಸಂಪ್ರದಾಯಗಳನ್ನು, ಹಾಡು ಕತೆ, ಗಾದೆ, ಮನೋರಂಜಕ ಕಲೆಗಳನ್ನು, ವೈದ್ಯ, ಮಾಟ-ಮಂತ್ರ ಮುಂತಾದ ವಿಶೇಷ ಜ್ಞಾನಗಳನ್ನು, ತಮ್ಮದೇ ಆದ ವಿಧಿನಿಷೇಧಗಳನ್ನು, ನೈಸರ್ಗಿಕ ಕಾಯಿದೆ ಕಟ್ಟಳೆಗಳನ್ನು, ಸುಸಂಘಟಿತ ಸಾಮಾಜಿಕ ವ್ಯವಸ್ಥೆಗಳನ್ನು ಹೊಂದಿರುವ ಅನಕ್ಷರಸ್ಥ ಸಂಸ್ಕೃತಿ ಸಂಪನ್ನ ಜನಾಂಗಗಳೇ ಬುಡಕಟ್ಟು ಜನಾಂಗಗಳು''[೧]

ಎಂದು ಸರಳ ರೀತಿಯಲ್ಲಿ ಎನ್.ಆರ್. ನಾಯಕ ಅವರು ವ್ಯಾಖ್ಯಾನಿಸಿದ್ದಾರೆ. ಭಾರತದಲ್ಲಿ ಇಂತಹ ನೂರಾರು ಬುಡಕಟ್ಟುಗಳು ಕಂಡುಬರುತ್ತವೆ. ಅದಕ್ಕೆ ಭೌಗೋಳಿಕ ಕಾರಣವೂ ಒಂದು.

ಪ್ರಖ್ಯಾತ ಮಾನವಶಾಸ್ತ್ರಜ್ಞರಾದ ಡಾ. ಡಿ.ಎಸ್. ಮಜುಂದಾರ್ ಅವರು ಬುಡಕಟ್ಟುಗಳ ಬಗ್ಗೆ "Tribe is a collection of families bearing a common name, members of which occupy the same territory, speak the same languge and observe certain taboos regarding marrige, profession or occupatian and have developed a well assesed system of reciprocity and mutuality of obligation"[೨]

"Tribe, a group of pepole speaking a common language, observing unifrom rules of social organisation and working togather for common purpose such as trade, agriculture or warfare. Other typhical cherecteristics include a common name, a contagious territory a relatively uniform culture or way of life and a tradition of common descant."[೩] ಹೀಗೆ ಬುಡಕಟ್ಟುಗಳು ಒಂದೇ ಪ್ರದೇಶದಲ್ಲಿ ವಾಸ ಉದ್ಯೋಗ, ಧ್ಯೇಯ ಗುರಿಯೊಂದಿಗೆ ಒಂದು ಮಾದರಿ ಸಂಸ್ಕೃತಿಯನ್ನು ಬಿತ್ತರಿಸುವುದು. ಬುಡಕಟ್ಟಿಗೆ ಇಂಗ್ಲೀಷ್‌ನಲ್ಲಿ TRIBE ಎನ್ನುವ ಪದವನ್ನು ಬಳಸುತ್ತಾರೆ. ಈ TRIBE ಎನ್ನುವ ಪದ ಲ್ಯಾಟಿನ್ ಭಾಷೆಯ TRIBUS ಎಂಬ ಪದದಿಂದ ಬಂದಿದೆ. "ಒಂದು ಮೂಲದಿಂದ ಬಂದ ಒಬ್ಬ ಮುಖ್ಯಸ್ಥನ ಆಡಳಿತಕ್ಕೆ ಒಳಪಟ್ಟ ಪ್ರಾದಿಮ ಹಂತಕ್ಕೆ ಸೇರಿದ ಜನಗಳ ಗುಂಪು" ಎಂಬ ಅರ್ಥ ಬುಡಕಟ್ಟಿಗಿದೆ. ("Tribe group of people is a primitive or barbarous stage of development acknowledging the authority of a chief and usually regarding themselves as having a common anustor").[೪] ಸಾಮಾನ್ಯವಾಗಿ ಬಹುತೇಕ ಬುಡಕಟ್ಟುಗಳು ಕ್ರಿಯಾತ್ಮಕವಾಗಿ ಸ್ವತಂತ್ರವಾಗಿರುತ್ತವೆ. ಆರ್ಥಿಕವಾಗಿ ಹಿಂದುಳಿದಿರುತ್ತವೆ. ಆಧುನಿಕವಾಗಿ ನಾವು ವ್ಯಾಖ್ಯಾನಿಸುವ 'ಆರ್ಥಿಕತೆ' ಯನ್ನು ತಲುಪಲು ಯಾವುದೇ ಬುಡಕಟ್ಟುಗಳಿಗೆ ಸಾಧ್ಯವಾಗಿಲ್ಲ. ಅವರ ಆರ್ಥಿಕತೆಯ ವ್ಯಾಪ್ತಿ, ಕಾಲಕ್ಕೆ ಸರಿಯಾಗಿ ಆಹಾರ ಮತ್ತು ತಮಗೆ ಬೇಕಾಗಿರುವ ವಸತಿಗೆ ಸೀಮಿತ. ಯಾವುದೇ ರೀತಿಯ ಆಡಳಿತ, ಜಮೀನು ವಿಸ್ತರಣೆ, ಹಣ ಕೂಡಿಡುವ ಪ್ರವೃತ್ತಿ ಅವರಿಗೆ ಬೇಕಿಲ್ಲ. ಇವೆಲ್ಲವೂ ಅವರನ್ನು ಒಂದು ಪ್ರತ್ಯೇಕ ಭೌಗೋಳಿಕವಾಗಿಯೂ ಮತ್ತು ಭಾಷಿಕವಾಗಿಯೂ 'ನಾಗರಿಕ'ರೆಂದು ಕರೆಯಲ್ಪಡುವವರಿಂದ ಪ್ರತ್ಯೇಕಿಸುತ್ತದೆ. ಅವರ ಸೀಮಿತ ಆರ್ಥಿಕತೆಗೆ, ಸ್ವಾತಂತ್ರ್ಯಕ್ಕೆ ಇಂದು ದಕ್ಕೆಯಾಗುತ್ತಿದೆ. ಕಾಲ ಬದಲಾದಂತೆ ಅವರೂ ಬದಲಾವಣೆಯ ಹಾದಿ ತುಳಿಯಬೇಕಾಗಿದೆ. ನಾಗರಿಕ ಸಂಸ್ಕೃತಿ ಎಂದು ಕರೆಯಲ್ಪಡುವ ಸಂಸ್ಕೃತಿಯ ಯಾವುದೇ ಪ್ರಭಾವವನ್ನು ಬುಡಕಟ್ಟುಗಳ ಸಂಸ್ಕೃತಿಯಲ್ಲಿ ಕಾಣಲಾಗುತ್ತಿಲ್ಲ. ಆದರೆ ಪರಿವರ್ತನೆಯ ಹಾದಿಯಲ್ಲಿ ಈ ಮಾತು ಮೌಲ್ಯ ಕಳೆದುಕೊಳ್ಳುತ್ತಿದೆ. ಈ ಪರಿವರ್ತನೆಯ ಬಗೆಯನ್ನು ನಿರ್ಮಲ ಕುಮಾರ್ ಬೋಸ್ ಹೀಗೆ ವಿಶ್ಲೇಷಿಸಿದ್ದಾರೆ. ("one minght indeed say that tribes can be regarded as fully obsorbed in the Hindu fold if Brahmin priests perform Brahminieal ceremonies for them during the three critical events of Birth, Marriage and Death. If the

latter are till celabrated by tribal rituals, then the communities are still true to their own faith in spite of the fact, in the outer fringes of their culture they participated in some of the ceremonies of their Hindu neighbours"[3]) ಇವರ ಪ್ರಕಾರ ಬುಡಕಟ್ಟಿನ ಜನರು ತಮ್ಮ ಹುಟ್ಟು, ಮದುವೆ ಮತ್ತು ಸಾವು ಈ ಮೂರೂ ಸಂದರ್ಭಗಳಲ್ಲಿ ಬ್ರಾಹ್ಮಣ ಪೌರೋಹಿತ್ಯಕ್ಕೆ ಅವಕಾಶ ಕೊಡುವುದಿಲ್ಲವೋ ಅಲ್ಲಿಯವರೆಗೆ ತನ್ನ ಮೂಲ ಸ್ವರೂಪದಲ್ಲಿಯೇ ಉಳಿದಿರುತ್ತದೆ. ಆದರೆ ಅಂತಹ ಬುಡಕಟ್ಟುಗಳ ಸಂಖ್ಯೆ ದಿನದಿಂದ ದಿನಕ್ಕೆ ಇಳಿಮುಖವಾಗುತ್ತಿದೆ. ಜಗತ್ತಿನ ಒಟ್ಟಾರೆ ಸ್ಥಿತ್ಯಂತರಗಳ ಪ್ರಭಾವ ಯಾವ ಜೀವಿಯನ್ನೂ ಬಿಟ್ಟಿಲ್ಲ ಎಂಬುದು ವಿಷಾಧನೀಯವಾದರೂ ಸತ್ಯ. ಭಾರತ ನೂರಾರು ಬುಡಕಟ್ಟು ಸಮುದಾಯಗಳನ್ನು ಹೊಂದಿರುವ ದೇಶ. ದೇಶದಲ್ಲಿನ ಒಟ್ಟು ಸಂಸ್ಕೃತಿಯನ್ನು 'ನಾಡಿನ ಸಂಸ್ಕೃತಿ', 'ಕಾಡಿನ ಸಂಸ್ಕೃತಿ' ಎಂದು ಬೇರ್ಪಡಿಸಿ ಶ್ರೇಣಿಕರಣಕ್ಕೆ ಒಳಪಡಿಸಲಾಗಿದೆ. ಆ ಸಂಸ್ಕೃತಿಗಳ ಮಧ್ಯೆ ಅಜಗಜಾಂತರವನ್ನು ಕಾಯ್ದುಕೊಂಡು ಬರಲಾಗಿದೆ.

ಈ ಸಮುದಾಯಗಳ ಸಾಂಸ್ಕೃತಿಕ ಅಧ್ಯಯನವನ್ನು ಕೈಗೊಳ್ಳುವ ಸಂದರ್ಭದಲ್ಲಿ ಮೊತ್ತ ಮೊದಲನೆಯದಾಗಿ ಬಳಕೆಯಾಗುವ ಕೆಲವು ಪದಗಳನ್ನು ಕುರಿತಂತೆ ಖಚಿತತೆಗೆ ಬರುವುದು ಕಷ್ಟಸಾಧ್ಯವಾಗಿದೆ. ಜಾತಿ, ಜನಾಂಗ, ವರ್ಗ, ಬುಡಕಟ್ಟು, ಸಮುದಾಯ ಇತ್ಯಾದಿ ಪದಗಳನ್ನು ಬಳಸುವಲ್ಲಿ ಗೊಂದಲವೇ ಸೃಷ್ಟಿಯಾಗಿದೆ. ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ಜಾತಿಗಳು ಕಂಡುಬರುತ್ತವೆ. ಅವುಗಳಲ್ಲಿ ಮತ್ತೆ ಒಳಜಾತಿಗಳಾಗಿ ನೂರಾರು ಕಂಡುಬರುತ್ತಿವೆ. ಈ ನಾಲ್ಕು ಜಾತಿಗಳನ್ನು ಬಿಟ್ಟು ಉಳಿದ ಹಿಂದೂ ಸಾಮಾಜಿಕ ವರ್ಗಗಳನ್ನು 'ಬುಡಕಟ್ಟು' ಅಥವಾ 'ಗಿರಿಜನರು' ಎಂದು ಕರೆಯಲಾಗಿದೆ. ನನ್ನ ಈ ಅಧ್ಯಯನದಲ್ಲಿ ಮರಾಟಿಗರನ್ನು ಒಂದು 'ಸಮುದಾಯ' ಎಂದು ಕರೆದಿರುವುದಾಗಿ ಇಲ್ಲಿ ಸ್ಪಷ್ಟಪಡಿಸುತ್ತಿದ್ದೇನೆ. 'ಜನಾಂಗ' ಎಂಬುದು ಇಂಗ್ಲೀಷ್‌ನ RACE ಗೆ ಸಮಾನವಾದ ಪದ. ಇದರ ವ್ಯಾಪ್ತಿ ಬಹಳ ವಿಸ್ತಾರವಾದುದು. ಕರ್ನಾಟಕದ ಅನೇಕ ಬುಡಕಟ್ಟುಗಳು ಈಗಾಗಲೇ ಜಾತಿಗಳೆಂದು ಕರೆಯಲ್ಪಟ್ಟಿರುವುದನ್ನೂ ಗಮನಿಸಬೇಕಾದ ವಿಚಾರವಾಗಿದೆ.

ಯಾವುದೇ ಒಂದು ಬುಡಕಟ್ಟನ್ನು ಅಧ್ಯಯನಕ್ಕೊಳಪಡಿಸುವಾಗ ಅವರ ಒಟ್ಟು ಇರುವಿಕೆಯನ್ನು ಗಮನಿಸಬೇಕಾಗುತ್ತದೆ. ವಾಸ, ಸಾಹಿತ್ಯ, ಸಂಪ್ರದಾಯ, ನಡೆ-ನುಡಿ, ರೀತಿ-ನೀತಿ, ನಂಬಿಕೆ-ನಿಷೇಧ, ಧರ್ಮ, ಕಲೆ, ಆಹಾರ, ಉಡುಗೆ-ತೊಡುಗೆ, ಕೌಟುಂಬಿಕ, ಸಾಮಾಜಿಕ ವ್ಯವಸ್ಥೆಗಳೊಂದಿಗೆ ಜೀವನಾವರ್ತನ ಆಚರಣೆಗಳೊಂದಿಗೆ ಪರಿಸರ, ಪ್ರಭಾವ ಇತ್ಯಾದಿ ಎಲ್ಲಾ ಮಗ್ಗುಲುಗಳನ್ನು ಗಮನಿಸಬೇಕಾಗುತ್ತದೆ. ಮಾನವ ವಿಜ್ಞಾನಿಗಳು (Anthropologist) ಮಾನವ ವಿಜ್ಞಾನ ದೃಷ್ಟಿಯಿಂದ, ಬುಡಕಟ್ಟುಗಳ ಜೀವನದ ವಿವರಗಳಿಗೆ ಮಹತ್ವವನ್ನು ಕೊಟ್ಟರೆ ಜಾನಪದ ಅಧ್ಯಯನದಲ್ಲಿ ಸಾಹಿತ್ಯ, ಕಲೆಗಳ ಸಹಿತ ಒಟ್ಟು ಜೀವನವನ್ನು ಅಧ್ಯಯನಕ್ಕೆ ಒಳಪಡಿಸುತ್ತಾರೆ. ಅಂತಹ ಅಧ್ಯಯನಗಳನ್ನು 'ಜಾನಪದ ಅಧ್ಯಯನ' ಎಂದು ಕರೆಯಲಾಗಿದೆ. ಮಾನವಶಾಸ್ತ್ರ ಅಧ್ಯಯನದಲ್ಲಿ ವಿಜ್ಞಾನಿಗಳು ಅಥವಾ ಸಂಶೋಧಕರು ವಿಭಿನ್ನವಾದ ತಮ್ಮದಲ್ಲದ ಸಂಸ್ಕೃತಿಯನ್ನು ಅಧ್ಯಯನ ಮಾಡುತ್ತಾರೆ. ಜಾನಪದ ವಿಜ್ಞಾನದಲ್ಲಿ ಅಧ್ಯಯನಕಾರರು ತಮ್ಮದೇ ಸಂಸ್ಕೃತಿಯನ್ನು, ಸಾಮಾಜಿಕ ವರ್ಗವನ್ನು ಅಭ್ಯಾಸ ಮಾಡಬಹುದಾಗಿದೆ. ಒಂದು ಬುಡಕಟ್ಟಿಗೆ ಸೇರಿದ ಅಧ್ಯಯನಕಾರ ತನ್ನದೇ ಬುಡಕಟ್ಟಿನ ಬಗ್ಗೆ ಅಧ್ಯಯನ ಮಾಡುವಾಗ ಕೆಲಸ

ಸುಲಭವಾಗುತ್ತದೆ ಮತ್ತು ಅದು ಅಧಿಕೃತವೂ ಆಗುತ್ತದೆ. ತಂತ್ರಜ್ಞಾನ, ಆವಿಷ್ಕಾರಗಳಿಂದ ಸಮಾಜಗಳು ದಿನೇ ದಿನೇ ಆಧುನಿಕರಣಕ್ಕೆ ಒಳಗಾಗುತ್ತಿವೆ. ಜಾನಪದ ಆಕರಗಳ ಮೂಲಕ ಸಾಂಸ್ಕೃತಿಕ ಚರಿತ್ರೆಯನ್ನು ಪುನಾರ್ರಚಿಸುವ ಮೂಲಕ ನಿರ್ಲಕ್ಷಿತ ಸಮುದಾಯಗಳನ್ನು ಮುಖ್ಯವಾಹಿನಿಗೆ ಪರಿಚಯಿಸಲಾಗುತ್ತಿದೆ. ಇತ್ತೀಚಿನ ಅನೇಕ ಅಧ್ಯಯನಗಳು ಈ ದಿಸೆಯಲ್ಲಿ ಕಾರ್ಯೋನ್ಮುಖವಾಗಿರುವುದು ಹಾಗೂ ನೂರಾರು ವರ್ಷಗಳಿಂದ ನಿರ್ಲಕ್ಷ್ಯಕ್ಕೊಳಗಾಗಿ, ನಿಂದನೆಗೊಳಗಾದ ಸಮುದಾಯದ ಸಂಸ್ಕೃತಿಯನ್ನು ಪರಿಚಯಿಸಿವೆ. ಈ ನಿಟ್ಟಿನಲ್ಲಿ ಇನ್ನೂ ಮುಂದೆ ಸಾಗಬೇಕಾಗಿದೆ.

ಪ್ರಸ್ತುತ ಈ ಅಧ್ಯಯನದ ಶೀರ್ಷಿಕೆ "ದಕ್ಷಿಣ ಕನ್ನಡ ಜಿಲ್ಲೆಯ ಮರಾಟಿಗರ ಜಾನಪದ" ಎಂಬುದಾಗಿದೆ. ಈ ಮುಂದೆಯೇ ಹೇಳಿದಂತೆ ಇಲ್ಲಿ ಮರಾಟಿಗರ ಜನಪದ ಕಲೆಗಳ ಸಾಹಿತ್ಯದ ಸಹಿತ ಒಟ್ಟು ಜೀವನದ ಜಾನಪದೀಯ ಅಂಶಗಳ ಬಗೆಗೆ ಹೆಚ್ಚು ಒತ್ತು ಕೊಡಲಾಗಿದೆ. ಅವರ ಸಂಪ್ರದಾಯ ನಂಬಿಕೆಗಳ ಹಿಂದಿರುವ ಆಶಯಗಳನ್ನು, ಪರಿಣಾಮಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಇಲ್ಲಿ 'ಜಾನಪದ' ಎಂಬ ಶೀರ್ಷಿಕೆಯ ಬಗ್ಗೆ ವಿವರಣೆ ಅಗತ್ಯ ಎಂದು ನನ್ನ ಅನಿಸಿಕೆ. ಜಾನಪದ ಶಬ್ದದ ಮೂಲ ಜನಪದ. ಜನಪದ ಅಂದರೆ ನಿರ್ದಿಷ್ಟ ಸಂಸ್ಕೃತಿಯ ಆಡಳಿತಕ್ಕೆ ಒಳಪಟ್ಟ ಜನರ ಪ್ರದೇಶ. ಡಾ.ಎಂ.ಚಿದಾನಂದಮೂರ್ತಿಯವರ ಪ್ರಕಾರ "ಜನ ಎಂದರೆ ಬರಿಯ Men ಎಂದರ್ಥ, ಅವರಿರುವ ಪ್ರದೇಶ ಜನಪದ. ಆದರೆ ಬರಿಯ ಜನ ಇರುವ ಭಾಗ ಜನಪದ ಅಲ್ಲ."

ಜಾನಪದ ಎಂಬುದು ಮೂಲಾರ್ಥದಲ್ಲಿ ಆಂಗ್ಲ ಭಾಷೆಯ Folk ಎಂಬುದಕ್ಕೆ ಸಂವಾದಿಯಾದುದು. Folk-lore ಎಂಬುದು ಜಾನಪದಶಾಸ್ತ್ರ ಎಂದಾಗುತ್ತದೆ. ಜಾನಪದಕ್ಕೆ ಯಾವುದೇ ರೀತಿಯ ಚೌಕಟ್ಟು ಇಲ್ಲ. ಸರ್ವಾಂತರ್ಯಾಮಿಯಾದುದು. ಜಾನಪದ ಅಧ್ಯಯನವು ಸಾಂಪ್ರದಾಯಿಕವಾದ ಸಂಗ್ರಹ (collection) ಸಂಶ್ಲೇಷಣೆ (comprehensione) ವರ್ಗೀಕರಣ (classification) ವಿಶ್ಲೇಷಣೆ (Interpretation) ಮತ್ತು ತೀರ್ಮಾನಗಳಿಗೆ ಸೀಮಿತವಾಗಿದ್ದ ಪರಿಕಲ್ಪನೆಯಾಚೆಗೂ ತನ್ನ ಬಾಹುಗಳನ್ನು ವಿಸ್ತರಿಸಿಕೊಳ್ಳುತ್ತಾ ಬಂದಿರುವುದನ್ನು ಕಾಣುತ್ತೇವೆ. ಹಾಗಾಗಿ ಜಾನಪದ ಇಂದು ಎಲ್ಲರಿಗೂ ಬೇಕಾದ, ಆಸಕ್ತಿಯ ಕುತೂಹಲದ ವಿಷಯಗಳಲ್ಲಿ ಒಂದಾಗಿದೆ. ಜಾನಪದ ಅನಕ್ಷರಸ್ಥ ಸಮಾಜದ ಕೊಡುಗೆ ಎಂದು ಈ ಮೊದಲು ಹೇಳಿದರೂ ಅತ್ಯಂತ ಸಾಕ್ಷರರ, ಸುಶಿಕ್ಷಿತರ ಸಮಾಜದಲ್ಲಿಯೂ ಒಂದಲ್ಲ ಒಂದು ರೀತಿಯಲ್ಲಿದೆ ಎಂದು ದೃಢಪಟ್ಟಿದೆ.

ಜಾನಪದ ಮೂಲ ಸತ್ವವನ್ನು ನಾವು ತಿಳಿಯಬೇಕಾದರೆ ಬುಡಕಟ್ಟು ಸಂಸ್ಕೃತಿಯತ್ತ ಗಮನಹರಿಸಬೇಕು. ಜಾನಪದ ಎಂಬುದು ವ್ಯಾಪಕವಾದ ಅರ್ಥವನ್ನು ಹೊಂದಿರುವಂಥ ಕ್ಷೇತ್ರ. ಇಲ್ಲಿ ಬುಡಕಟ್ಟು ಜಾನಪದದ ಒಂದು ಪ್ರಭೇದವಾಗಿ ನೋಡಿದಾಗ, ಜಾನಪದ ಯಾವ ರೀತಿಯಲ್ಲಿ ಮೌಖಿಕ ಪರಂಪರೆಯನ್ನು ಹೊಂದಿದೆಯೋ ಅದೇ ರೀತಿ ಬುಡಕಟ್ಟು ಸಂಸ್ಕೃತಿ ಕೂಡ ಪರಂಪರಾಗತವಾದ ನೆಲೆಯನ್ನು, ಜೀವನವನ್ನು ಹೊಂದಿರುವಂಥದ್ದು. ಇಲ್ಲಿ ಜಾನಪದವನ್ನು ಸಾರ್ವತ್ರಿಕ ಎಂದು ತರ್ಕಿಸಿದರೆ ಬುಡಕಟ್ಟಿಗೆ ಯಾವುದೇ ರೀತಿಯ ಮಹತ್ವ ಬರುವುದಿಲ್ಲ. ಬದಲಾಗಿ ಈ ಮೊದಲು ಹೇಳಿದಂತೆ ಜಾನಪದ ಮೂಲ ನೆಲೆಯನ್ನು ಕಾಣಬೇಕಾದರೆ ನಾವು ಬುಡಕಟ್ಟನ್ನು ಅವಲಂಬಿಸಲೇಬೇಕಾಗಿದೆ. ಇಲ್ಲಿ

ಮರಾಟಿ ಬುಡಕಟ್ಟಿನಲ್ಲಿರುವ ಜಾನಪದದ ಮೂಲ ಸತ್ವವನ್ನು ತದಕುವ, ವಿಶ್ಲೇಷಿಸುವ ಕಾರ್ಯವನ್ನು ಈ ಅಧ್ಯಯನದಲ್ಲಿ ಮಾಡಲು ಪ್ರಯತ್ನಿಸಲಾಗಿದೆ.

''ಪ್ರತಿ ಜನಪದವೂ ಸಮಾಜದ ಒಂದು ವಿಶಿಷ್ಟ ಪ್ರಕೃತಿ-ಪ್ರವೃತ್ತಿಯ ಅಭಿವ್ಯಕ್ತಿ. ಜೀವನ ವೈವಿಧ್ಯ ಮತ್ತು ಜೀವನ ಪ್ರತಿಭೆಯ ವಿಶಿಷ್ಟತೆಗೆ ತೆರೆದುಕೊಂಡ ಒಂದು ಫಲಿತ. ಒಂದು ದೇಶದಲ್ಲಿ ಎಷ್ಟು ಹೆಚ್ಚು ಜನಪದಗಳಿರುತ್ತವೋ ಅಷ್ಟು ಹೊಸ ಸಾಂಸ್ಕೃತಿಕ ಸೃಷ್ಟಿಗಳಿರುತ್ತವೆ. ಪ್ರತಿ ವೈವಿಧ್ಯ ಒಂದು ವೈಶಿಷ್ಟ್ಯ, ಒಂದು ಸೃಷ್ಟಿ, ಒಂದು ಸೃಷ್ಟಿ ಮತ್ತೊಂದರ ಸೃಷ್ಟಿಗೆ ಕಡಿಮೆಯಲ್ಲ. ಈ ದೃಷ್ಟಿಯಿಂದ ಪ್ರತಿ ಜನಪದ ತನ್ನದೇ ಆದ ತೇಜಸ್ಸು ಮತ್ತು ಪ್ರತಿಭೆಯನ್ನು ಪಡೆದಿರುತ್ತದೆ.[೬] ''ಈ ನಿಟ್ಟಿನಲ್ಲಿ ಇಲ್ಲಿ ಕರ್ನಾಟಕದ ಬುಡಕಟ್ಟುಗಳಲ್ಲಿ ಒಂದಾಗ ಮರಾಟಿಗರ ಮೌಖಿಕ ಪರಂಪರೆಯಲ್ಲಿನ ಜಾನಪದವನ್ನು ಪರಿಚಯಿಸುವ ಮತ್ತು ಸಾಂಸ್ಕೃತಿಕ ಶಿಸ್ತಿನ ಹಿನ್ನಲೆಯಲ್ಲಿ ಈ ಸಮುದಾಯದ ವಿವಿಧ ಮಗ್ಗುಲುಗಳನ್ನು ವಿಶ್ಲೇಷಣೆ ಮಾಡಲು ಪ್ರಯತ್ನಿಸಲಾಗಿದೆ. ಅದಕ್ಕಾಗಿ ಈ ಪಂಗಡದ ಪರಂಪರಾನುಗತ ಸಂಪ್ರದಾಯಗಳತ್ತ ಹೆಚ್ಚು ಗಮನಹರಿಸಿ ಅಧ್ಯಯನ ಮಾಡಲಾಗಿದೆ.

ಮಾನವ ಸಮಾಜ ವ್ಯವಸ್ಥೆಯ ಸಮಗ್ರ ಅಧ್ಯಯನದ ದೃಷ್ಟಿಯಿಂದ, ಒಟ್ಟು ಮಾನವ ಸಂಸ್ಕೃತಿಯನ್ನು ಅದರ ಸಮಗ್ರ ಹಿನ್ನಲೆಯಲ್ಲಿ ತಿಳಿಯುವ ದೃಷ್ಟಿಯಿಂದ ಬಿಡಿ ಬಿಡಿಯಾಗಿ ಒಂದೊಂದು ಸಮುದಾಯವನ್ನು ಅಧ್ಯಯನ ಮಾಡಬೇಕಾದ ಅಗತ್ಯತೆ ಪ್ರಸ್ತುತ ಕಾಲದಲ್ಲಿ ಅತ್ಯಗತ್ಯವಾಗಿದೆ. ಭಿನ್ನಭಿನ್ನ ಸಮುದಾಯಗಳ ನಡುವಿನ ಸಂಬಂಧ, ಸಂಘಟನಾ ವ್ಯವಸ್ಥೆ, ವೈವಿಧ್ಯಪೂರ್ಣವಾದ ಜೀವನ ಮಹತ್ವವನ್ನು ವಿಶಿಷ್ಟತೆಯನ್ನು ತಿಳಿಸಿಕೊಡುವುದರ ಜೊತೆಗೆ ಈ ಸಮುದಾಯಗಳು ಎದುರಿಸುತ್ತಿರುವ ಸಮಸ್ಯೆಗಳಿಗೆ ಸೂಕ್ತವಾದ ಪರಿಹಾರೋಪಾಯಗಳನ್ನು ಇಂತಹ ಅಧ್ಯಯನಗಳು ಸೂಚಿಸುತ್ತವೆ. ಆ ಮೂಲಕ ಸಮುದಾಯಗಳ ಅಭಿವೃದ್ಧಿ, ಮೂಲ ಸೌಕರ್ಯಗಳತ್ತ ಆಡಳಿತದ ಗಮನ ಸೆಳೆಯಲು ಸಹಕಾರಿಯಾಗುತ್ತದೆ.

ಶಿಷ್ಟ-ಪರಿಶಿಷ್ಟ, ಸ್ಪೃಶ್ಯ-ಅಸ್ಪೃಶ್ಯ ಎಂದು ವಿಂಗಡಿಸಿ ಸಾಧಿಸುವುದೇನೂ ಇಲ್ಲ. ಯಾವುದೇ ಜೀವನ ವಿಧಾನವು ಮೇಲು-ಕೀಳು ಎಂಬುದಿಲ್ಲ, ತನ್ನಷ್ಟಕ್ಕೆ ತಾನು ಶ್ರೇಷ್ಠವೂ ಅಲ್ಲ, ಕನಿಷ್ಠವೂ ಅಲ್ಲ. ವೈವಿಧ್ಯತೆಗಳಿರುವಂತೆಯೇ ವೈರುಧ್ಯಗಳೂ ಇರುತ್ತವೆ. ಜೀವನ ವಿಧಾನದಲ್ಲಿ ಸಾಧ್ಯತೆಗಳಿರುವಂತೆಯೇ ಮಿತಿಗಳೂ ಇರುತ್ತವೆ. ''ಸಂಸ್ಕೃತಿ ಮತ್ತು ಸಮಾಜವನ್ನು ಕುರಿತು ಅಭ್ಯಾಸ ಮಾಡುವ ವಿಷಯಗಳಲ್ಲಿ ಜಾನಪದ ಅತ್ಯಂತ ಮಹತ್ತರವಾದ ವಿಷಯ. ಜಾನಪದ ಅಧ್ಯಯನ ಸುಶಿಕ್ಷಿತರಿಗೆ ಶಿಕ್ಷಣ ನೀಡುವುದು. ಅವರಿಗೆ ತಮ್ಮ ಪರಂಪರೆ, ಸಂಸ್ಕೃತಿ ಬಗೆಗೆ ಗೌರವ ಮೂಡುವಂತೆ ಮಾಡುತ್ತದೆ. ಆ ಮೂಲಕ ಜನರು ತಮ್ಮನ್ನು ತಾವೇ ಗೌರವಿಸಿಕೊಳ್ಳಲು ಅವಕಾಶ ಕಲ್ಪಿಸಿಕೊಡುತ್ತದೆ. ನಿಷ್ಕಾರಣವಾಗಿ ಜನರ ತಿರಸ್ಕಾರಕ್ಕೆ ಗುರಿಯಾದ ಸಂಸ್ಕೃತಿ ಪರಂಪರೆ ಬಗೆಗೆ ಸದ್ಭಾವನೆ ಹುಟ್ಟುಹಾಕುತ್ತದೆ.''[೭] ಎಂಬ ಮಾತುಗಳು ಜಾನಪದ ಅಧ್ಯಯನದ ಮಹತ್ವವನ್ನು ನೀಡುತ್ತವೆ.

**ಭಾರತದ ಬುಡಕಟ್ಟುಗಳು**

ಜಗತ್ತಿನೆಲ್ಲೆಡೆಯೂ ಇರುವಂತೆಯೇ ಭಾರತದಲ್ಲಿಯೂ ನೂರಾರು ಬುಡಕಟ್ಟುಗಳಿರುವುದನ್ನು ಕಾಣುತ್ತೇವೆ. ಭಾರತದ ಬುಡಕಟ್ಟುಗಳನ್ನು ಕುರಿತಂತೆ ಭಾರತೀಯ ವಿದ್ವಾಂಸರು ಅಧ್ಯಯನ ಮಾಡಿದ್ದಕ್ಕಿಂತ ಹೆಚ್ಚಾಗಿ ಪಾಶ್ಚಾತ್ಯ

ವಿದ್ವಾಂಸರೇ ಅಧ್ಯಯನ ನಡೆಸಿರುವುದು ಕಂಡುಬರುತ್ತದೆ. ಬ್ರಿಟಿಷರು ಭಾರತದ ಬುಡಕಟ್ಟುಗಳ ಬಗ್ಗೆ ಅಧ್ಯಯನ ನಡೆಸಿದುದು ಕುತೂಹಲದಿಂದಲೇ ಹೊರತು ಅವರ ಸ್ಥಾನಮಾನಗಳನ್ನು ಎತ್ತರಿಸಬೇಕೆಂಬ ಉದ್ದೇಶದಿಂದಲ್ಲ. ಹಾಗೆಯೇ ಮತಾಂತರಗೊಳಿಸುವ ಒಂದು ಉದ್ದೇಶವೂ ಆಂಗ್ಲರನ್ನು ಬುಡಕಟ್ಟುಗಳ ಅಧ್ಯಯನಕ್ಕೆ ಪ್ರೇರೇಪಿಸಿತ್ತು ಎಂಬ ವಾದವೂ ಇದೆ. ಅವರು ಯಾವುದೇ ಬುಡಕಟ್ಟಿನ ಸಾಂಸ್ಕೃತಿಕ ಮಹತ್ವವನ್ನು ಗುರುತಿಸಲಿಲ್ಲ. ಇದರಿಂದಾಗಿಯೇ ಅವರಲ್ಲಿಯೂ ಮಾನವೀಯ, ಧಾರ್ಮಿಕ, ಸಾಂಸ್ಕೃತಿಕ ಅತ್ಯುನ್ನತ ಮೌಲ್ಯಗಳಿವೆ ಎಂಬುದು ಮರೆಯಾಗಿ ಉಳಿಯಿತು.

ಅತೀ ಹೆಚ್ಚು ಬುಡಕಟ್ಟುಗಳಿರುವ ಭಾರತದ ರಾಜ್ಯಗಳೆಂದರೆ-ಮಧ್ಯ ಪ್ರದೇಶ, ಒರಿಸ್ಸಾ ಮತ್ತು ಅಸ್ಸಾಂ. ಭೌಗೋಳಿಕ, ಸಾಂಸ್ಕೃತಿಕ ಆಧಾರಗಳ ಮೇಲೆ ಭಾರತದ ಬುಡಕಟ್ಟುಗಳನ್ನು ಮುಖ್ಯವಾಗಿ ಮೂರು ವಲಯಗಳಲ್ಲಿ ವಿಂಗಡಿಸಲಾಗಿದೆ.

೦೧. ತೋಡ, ಸೋಲಿಗ, ಚೆಂಚು, ಕೋಟಾ, ಇರುಳಿಗ, ಉರಸಿ, ಜೇನು ಕುರುಬ, ಕಾಡುಕುರುಬ, ಕಾಡುಗೊಲ್ಲರು, ಅಡಿಯಾನ್ ಮುಂತಾದ ದಕ್ಷಿಣ ಭಾರತದ ಬುಡಕಟ್ಟುಗಳು ಸೇರುವ ದಕ್ಷಿಣ ವಲಯ.

೦೨. ಸಂತಾಲ್, ಭಿಲ್, ಖೋಂಡ, ಹೋ, ಮುಂಡಾ, ಒರೆಯಾನ್, ಬೈಗಾ, ಅಗೇರಿಯಾ, ನವೋರ, ಭೂಮಿಯಾ, ಬಿರಾಹರ್, ಖರಿಯಾ, ಕೊಲ್ ಮುಂತಾದ ಬುಡಕಟ್ಟುಗಳಿರುವ ಮಧ್ಯಪ್ರದೇಶ, ಒರಿಸ್ಸಾ, ರಾಜಾಸ್ಥಾನ, ಬಿಹಾರಗಳು ಸೇರಿದಂತೆ ಮಧ್ಯವಲಯ.

೦೩. ನಾಗಾ, ಥಾಂಗೆ, ಯಾಚಮಿ, ತೊಕೋಮಿ, ಅಖಾಸ್, ಫ್ಲಾಸ್, ಮಿಕಿರ್ ಆಬೋರ್ ಮಿಷ್ಮಿನ್, ಕುಕಿಸ್ ಇವೇ ಮುಂತಾದ ಬುಡಕಟ್ಟು ಜನರು ಕಂಡುಬರುವ ನಾಗಾಲ್ಯಾಂಡ್, ಮಣಿಪುರ ತ್ರಿಪುರ ರಾಜ್ಯಗಳು ಸೇರಿದ ಈಶಾನ್ಯ ವಲಯ ಇವೇ ಈ ಮೂರು ವಲಯಗಳು.[೮]

೧೯೯೧ ಜನಗಣತಿಯ ಪ್ರಕಾರ ಭಾರತದ ಬುಡಕಟ್ಟು ಜನಸಂಖ್ಯೆ ೬,೭೭,೫೮,೩೮೦ ಇತ್ತು, ಮತ್ತು ದೇಶದ ಒಟ್ಟು ಜನಸಂಖ್ಯೆಯಲ್ಲಿ ಬುಡಕಟ್ಟಿನವರು ಶೇಕಡ ೮.೦೮ರಷ್ಟು ಇದ್ದರು. ಒಂದು ಅಂದಾಜಿನ ಪ್ರಕಾರ ಈಗ ಭಾರತದ ಬುಡಕಟ್ಟುಗಳ ಜನಸಂಖ್ಯೆ ಸುಮಾರು ಹತ್ತುಕೋಟಿಗಳಷ್ಟಾಗುವ ಸಾಧ್ಯತೆ ಇದೆ. ಭಾರತದಲ್ಲಿ ೧೯೫೦ ರಿಂದ ಇದುವರೆಗೆ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಅನುಚ್ಛೇದ ೩೪೨ (೧) ಹಾಗೂ (೨) ರ ಪ್ರಕಾರ ಸೇರಿರುವ ಬುಡಕಟ್ಟುಗಳ ಸಂಖ್ಯೆ ೬೩೬.

**ಕರ್ನಾಟಕದಲ್ಲಿ ಬುಡಕಟ್ಟುಗಳು**

ಕರ್ನಾಟಕವು ದೇಶದ ಎಂಟನೇ ದೊಡ್ಡ ರಾಜ್ಯವಾಗಿದೆ. ಇದರ ವಿಸ್ತೀರ್ಣ ಸುಮಾರು ೧೯೧. ೭೯೧ ಚದರ ಕಿ.ಮೀ ಇದೆ. ೧೯೮೧ರ ಜನಗಣತಿ ಪ್ರಕಾರ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಬುಡಕಟ್ಟು ಜನರು ಶೇ.೪.೯೧ (೧೮.೨೫.೨೦೩) ಇದ್ದುದು ೧೯೯೫ ರಲ್ಲಿ ಶೇ ೪.೨೬ (೧೯.೧೫.೯೯೧) ರಷ್ಟು ವಾಸವಾಗಿರುವುದು ದಾಖಲಾಗಿದೆ.

ಸಂವಿಧಾನದ ೩೪೨ನೇ ಅನುಚ್ಛೇದದಲ್ಲಿ ಬುಡಕಟ್ಟುಗಳ ಕುರಿತು ವಿವರಣೆ ನೀಡಲಾಗಿದೆ. ಇದರ ಪ್ರಕಾರ ಬುಡಕಟ್ಟುಗಳು, ಬುಡಕಟ್ಟು ಸಮುದಾಯಗಳು, ಅವುಗಳ ಭಾಗ ಅಥವಾ ಗುಂಪುಗಳನ್ನು ರಾಷ್ಟ್ರಪತಿಗಳು ಪರಿಶಿಷ್ಟ

ಪಂಗಡಗಳ ಅನುಚ್ಛೇದದಡಿ ಸೇರಿಸಲು ಅವಕಾಶವಿರುತ್ತದೆ. ಹಾಗಾಗಿಯೇ ಕರ್ನಾಟಕ ರಾಜ್ಯದಲ್ಲಿ ಬುಡಕಟ್ಟುಗಳ ಸಂಖ್ಯೆ ಆರಂಭದಲ್ಲಿ ೨೧ ಇದ್ದುದು ಇಂದು ಸುಮಾರು ೫೦ರ ವರೆಗೆ ಸೇರಿಸಲ್ಪಟ್ಟಿದೆ. ರಾಜ್ಯದ ಬುಡಕಟ್ಟುಗಳ ಹೆಸರುಗಳನ್ನು ಕೋಷ್ಟಕದಲ್ಲಿ ಕೊಡಲಾಗಿದೆ.

ರಾಜ್ಯದ ಬುಡಕಟ್ಟುಗಳ ಬಹುತೇಕ ಜನರು ಆರ್ಥಿಕವಾಗಿ ಹಿಂದುಳಿದವರಾಗಿದ್ದಾರೆ. ಹಿಂದಿನ ಕಾಲದಿಂದಲೂ ಕಾಡುಗಳು ಬುಡಕಟ್ಟುಗಳಿಗೆ ಒಳ್ಳೆಯ ಮನೆಯಂತಿದ್ದವು. ಆಂಗ್ಲರ ಆಗಮನದಿಂದ ಅರಣ್ಯ-ಸಂಪನ್ಮೂಲಗಳೆಲ್ಲಾ ಲೂಟಿಯಾದವು. ಉತ್ಕೃಷ್ಟ ಮಟ್ಟದ ಜಾತಿಯ ಮರಗಳನ್ನು ಕಡಿದು ಧರೆಗುರುಳಿಸಲಾಯಿತು. ಅದರಿಂದ ಐಷಾರಾಮದ ಪೀಠೋಪಕರಣಗಳು ಬ್ರಿಟೀಷರ ಅಧಿಕಾರಿಗಳ ಮನೆಗಳಲ್ಲಿ ರಾರಾಜಿಸಿದವು. ಭಾರತದ ಮರಮುಟ್ಟುಗಳಿಂದಾದ ಪೀಠೋಕರಣಗಳು ಇಂಗ್ಲೆಂಡಿನ ರಾಜ್ಯದ ಅಧಾಕಾರಿಗಳ ಮನೆ ತುಂಬಿದವು. ಬ್ರಿಟೀಷರು ಮತ್ತು ಜಮೀನ್ದಾರರು ಅರಣ್ಯವನ್ನು ಭೂಮಿಯನ್ನು, ಅಲ್ಲಿ ಸ್ವಚ್ಛಂದವಾಗಿ ಬದುಕುತಿದ್ದ ಜನರನ್ನು ಶೋಷಿಸಲಾರಂಭಿಸಿದರು. ಮಲೆನಾಡಿನ ಪಶ್ಚಿಮಘಟ್ಟದಂತಹ ಸೂಕ್ಷ್ಮ ಪ್ರದೇಶಗಳಲ್ಲಿನ ಅರಣ್ಯವನ್ನು ನಾಶಮಾಡಿ, ಕಾಫಿ, ಟೀ, ರಬ್ಬರ್ ಎಸ್ಟೇಟ್‌ಗಳನ್ನು ನಿರ್ಭಯವಾಗಿ ಬೆಳೆಸಿದರು. ರಾಜ್ಯದ ಬಹುತೇಕ ಅರಣ್ಯದಲ್ಲಿ ಬೇಟೆ ಹಾಗೂ ಅರಣ್ಯ ಉತ್ಪನ್ನಗಳನ್ನು ಅವಲಂಬಿಸಿಯೇ ತಮ್ಮ ಬದುಕನ್ನು ಸಾಗಿಸುತ್ತಿದ್ದ ಬುಡಕಟ್ಟುಗಳಿಗೆ ಈ ಬದಲಾವಣೆಗಳು ನೆಲೆಯನ್ನೇ ಅಲುಗಾಡಿಸುವಂತಾಯಿತು.

ಸ್ವಾತಂತ್ರ್ಯಾನಂತರದ ಅವಧಿಯಲ್ಲಿ ಸಂವಿಧಾನವು ಪರಿಶಿಷ್ಟ ಪಂಗಡಗಳಿಗೆ ಕೆಲವು ಹಕ್ಕುಗಳನ್ನು ನೀಡಿ ಕಾಪಾಡುವ ಭರವಸೆ ನೀಡಿತು. ಶಾಸನ ಸಭೆಗಳಲ್ಲಿ, ಶೈಕ್ಷಣಿಕ ಸಂಸ್ಥೆಗಳಲ್ಲಿ, ಸರಕಾರಿ ಉದ್ಯೋಗಗಳಲ್ಲಿ ಮೀಸಲಾತಿಯನ್ನು ಒದಗಿಸಿತು. ರಾಜ್ಯದ ಕೆಲವು ಪ್ರದೇಶಗಳಲ್ಲಿ ಬುಡಕಟ್ಟು ಮಕ್ಕಳಿಗೆ ಶಿಕ್ಷಣವು ಇನ್ನು ಮರೀಚಿಕೆಯಾಗಿದೆ. ಉನ್ನತ ಶಿಕ್ಷಣವನ್ನು ಪಡೆಯಲು ಅಸಾಧ್ಯದ ಮಾತೇ ಸರಿ.

ರಾಜ್ಯದ ಪರಿಶಿಷ್ಟ ಪಂಗಡಗಳ ಜನಸಂಖ್ಯೆಯನ್ನು ಗಮನಿಸಿದರೆ ೧೯೯೧ರಲ್ಲಿ ೧೯.೧೬ಲಕ್ಷ ಇದ್ದ ಇವರು ೨೦೦೧ರಲ್ಲಿ ೩೪.೬೪ ಲಕ್ಷಕ್ಕೆ ಏರಿಕೆಯಾಗಿದ್ದಾರೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಚಾರವೆಂದರೆ ಈ ಹೆಚ್ಚಳ ಜನನ ಪ್ರಮಾಣವನ್ನು ಆಧರಿಸಿಲ್ಲ. ಹೊಸದಾಗಿ ಅನೇಕ ಬುಡಕಟ್ಟುಗಳು ಸೇರ್ಪಡೆಗೊಂಡಿದ್ದರಿಂದ ಜನಸಂಖ್ಯೆಯಲ್ಲಿ ಹೆಚ್ಚಳ ಕಂಡುಬಂದಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದಶಕವಾರು ಜನಸಂಖ್ಯೆ ಬೆಳವಣಿಗೆಯ ಗತಿಯು ಋಣಾತ್ಮಕವಾಗಿದೆ. (ಕೋ-೨.೯) (ಕರ್ನಾಟಕ ಮಾನವ ಅಭಿವೃದ್ಧಿ ವರದಿ ೨೦೦೫)

ಕರ್ನಾಟಕದಲ್ಲಿ ಬುಡಕಟ್ಟುಗಳ ಅಧ್ಯಯನ ಸುಮಾರು ೧೯ನೇ ಶತಮಾನದಲ್ಲಿ ಆರಂಭಗೊಂಡಿರಬಹುದೆಂದು ಇಲ್ಲಿಯವರೆಗೆ ನಡೆದಿರುವ ಅಧ್ಯಯನದ ಸಮೀಕ್ಷೆಯಿಂದ ತಿಳಿಯುತ್ತದೆ. ಸರ್. ಹರ್ಬಟ್ ರಿಸ್ಲೆಯವರು ಭಾರತದಾದ್ಯಂತ ಎಲ್ಲ ರಾಜ್ಯಗಳನ್ನು ಒಳಗೊಂಡಂತೆ ಆಯಾ ರಾಜ್ಯಗಳಲ್ಲಿನ ಬುಡಕಟ್ಟು ಮತ್ತು ಜಾತಿಗಳ ಜನಸಂಖ್ಯೆಯನ್ನು, ನೆಲೆಗಳನ್ನು ದಾಖಲಿಸುವುದರೊಂದಿಗೆ ಆ ಜನರ ಸಂಪ್ರದಾಯ ರೀತಿ, ರಿವಾಜುಗಳನ್ನು ಅಭ್ಯಸಿಸಿ ದಾಖಲೆಯ ರೂಪದಲ್ಲಿ ಬೃಹದಾಕಾರದ ಸಂಪುಟಗಳನ್ನು ಹೊರತಂದಿದ್ದಾರೆ.[೯]

ಭಾರತ ಸರ್ಕಾರದ ಸಂವಿಧಾನ ೩೪೨ ನೇ ಅನುಚ್ಛೇದದ ಪ್ರಕಾರ ನಿಗದಿತವಾದ ಬುಡಕಟ್ಟುಗಳ ಪಟ್ಟಿ ಆಗಾಗ್ಗೆ ಪರಿಷ್ಕಾರಗೊಂಡಿದೆ. ಕರ್ನಾಟಕದಲ್ಲಿ ಪ್ರಧಾನವಾಗಿ ಕಂಡುಬರುವ ಬುಡಕಟ್ಟುಗಳ ಪಟ್ಟಿ ಈ ಕೆಳಗಿನಂತಿದೆ. ೧. ಗೌಡಾಲು ೨. ಹಕ್ಕಿಪಿಕ್ಕಿ ೩. ಹಸಲರು ೪. ಇರುಳಿಗ ೫. ಜೇನುಕುರುಬ ೬. ಕಾಡು ಕುರುಬ ೭ ಮಲೈಕುಡಿ ೮. ಮಲೇರು ೯. ಸೋಲಿಗ ೧೦. ಗೊಂಡರು ೧೧. ಸಿದ್ದಿಯರು ೧೨. ಹಾಲಕ್ಕಿಯವರು ೧೩. ಕೊರಗ ೧೪. ಕುಡಿಯ ಅಥವಾ ಮೇಲುಕುಡಿಯ ೧೫. ಮಹಾಮಸಲರು ೧೬. ತೋಡರು ೧೭. ಮರಾಟ ೧೮. ಕೊರಮ ೧೯. ಕುರುಬ ೨೦. ಮೇದರು ೨೧. ಎರವರು.

ಅನಂತರದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳ ವರ್ಗೀಕರಣ ವಿಧಿ ೧೯೭೬ (ನಂ ೧೦೮ರ ೧೯೭೬) ದಿನಾಂಕ ೧೮ನೇ ಸೆಪ್ಟೆಂಬರ್ ೧೯೭೬ ರಂತೆ ಕರ್ನಾಟಕ ಬುಡಕಟ್ಟುಗಳ ಪಟ್ಟಿಯಲ್ಲಿ ಒಟ್ಟು ೪೯ ಬುಡಕಟ್ಟುಗಳನ್ನು ಗುರುತಿಸಲಾಗಿದೆ.

ಕರ್ನಾಟಕದ ಬುಡಕಟ್ಟುಗಳ ಮತ್ತು ಇತರ ಸಮುದಾಯಗಳ ಅಧ್ಯಯನ ಇತ್ತೀಚಿನ ದಿನಗಳಲ್ಲಿ ವ್ಯಾಪಕತೆಯನ್ನು ಪಡೆಯುತ್ತಿದೆ. ರಾಜ್ಯದ ವಿವಿಧ ವಿಶ್ವವಿದ್ಯಾನಿಲಯಗಳಲ್ಲಿ ಅಧ್ಯಯನಗಳು ನಡೆಯುತ್ತಿವೆ. ಹಾಗೆಯೇ ಕರ್ನಾಟಕ ಸಾಹಿತ್ಯ ಅಕಾಡೆಮಿಯು ಹೊರತಂದಿರುವ ಉಪಸಂಸ್ಕೃತಿ ಅಧ್ಯಯನ ಮಾಲಿಕೆಯಲ್ಲಿ ಸುಮಾರು ೩೬ ಬುಡಕಟ್ಟು ಉಪಸಂಸ್ಕೃತಿಗಳನ್ನು ಕುರಿತಂತೆ ಕೃತಿಗಳು ಮಹತ್ತರವಾದ ಆಕರಗಳನ್ನು ಒದಗಿಸುತ್ತವೆ.

**ದಕ್ಷಿಣ ಕನ್ನಡ ಜಿಲ್ಲೆಯ ಬುಡಕಟ್ಟುಗಳು**

ರಾಜ್ಯ ಪರಿಶಿಷ್ಟ ಪಂಗಡಗಳ ಕಲ್ಯಾಣ ನಿರ್ದೇಶನಾಲಯದ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಟ್ಟು ನಾಲ್ಕು ಬುಡಕಟ್ಟುಗಳಿವೆ. ಅವುಗಳೆಂದರೆ ಕಮ್ಮಾರ, ಕೊರಗ, ಮಲೆಕುಡಿಯ ಮತ್ತು ಮರಾಠಿ (ಮರಾಟಿ)

ಕೊರಗರು ಮೂಲತ: ಜಿಲ್ಲೆಯ ಮೂಲ ಬುಡಕಟ್ಟು ಸಮುದಾಯವೆಂದು ಸಂಶೋಧಕರು ಅಭಿಪ್ರಾಯಪಡುತ್ತಾರೆ. ಅಮೃತ ಸೋಮೇಶ್ವರ ಅವರು ಕೊರಗರ ಮೂಲದ ಬಗೆಗೆ ಈ ರೀತಿ ವಿವರಣೆ ನೀಡಿದ್ದಾರೆ. "ದಕ್ಷಿಣ ಕನ್ನಡದ ಕೊರಗ ಎಂಬ ಪಂಗಡವು ತುಂಬ ಕುತೂಹಲಕಾರಿ ವಿಚಾರಗಳನ್ನೊಳಗೊಂಡ ಒಂದು ಜನ ಸಮುದಾಯ. ಹೆಚ್ಚಿನವರು ಈಗ ತುಳುಭಾಷೆಯನ್ನು ಮಾತಾಡುತ್ತಿರುವವರಾದರೂ ಇವರದೇ ಆದ ಭಾಷೆ ಇದೆ. ಈ ಕೊರಗ ಭಾಷೆ ದ್ರಾವಿಡ ಭಾಷಾ ಪರಿವಾರಕ್ಕೆ, ಅದರಲ್ಲೂ ಉತ್ತರ ದ್ರಾವಿಡಕ್ಕೆ ಸೇರುವುದಾಗಿ ಆ ಭಾಷೆಯನ್ನು ಅಧ್ಯಯನ ಮಾಡಿದ ಭಾಷಾತಜ್ಞರು ಅಭಿಪ್ರಾಯ ಪಡುತ್ತಾರೆ." (ಉದ್ಧೃತ: ಪುರುಷೋತ್ತಮ ಬಿಳಿಮಲೆ ೧೯೯೩, ೨೬) ಪರಿಶಿಷ್ಟ ಪಂಗಡಗಳನ್ನು ಹೊರತುಪಡಿಸಿ, ಭಾರತದಲ್ಲಿ ಸುಮಾರು ೭೫ ಸ್ವತಂತ್ರ ದೇಶಿಯ ಗುಂಪುಗಳಿದ್ದು, ಅವುಗಳನ್ನು 'ಸಂಪ್ರದಾಯಿಕ ಬುಡಕಟ್ಟು ಗುಂಪುಗಳೆಂದು ಗುರುತಿಸಲಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಕೊರಗರನ್ನು ಈ ಪಟ್ಟಿಯಲ್ಲಿ ಸೇರಿಸಿ' ಸಂಪ್ರದಾಯಿಕ ಬುಡಕಟ್ಟು(Premitive tribe) ಎಂದು ಕರೆಯಲಾಗಿದೆ. ಕೊರಗರನ್ನು ಹಿಂದಿನಿಂದಲೂ ಅಸ್ಪೃಶ್ಯರನ್ನಾಗಿ ಕಾಣುತ್ತಾ ಬರಲಾಗಿದೆ. ಜಿಲ್ಲೆಯಲ್ಲಿ ಅತ್ಯಂತ ಶೋಷಣೆಗೆ ಒಳಗಾದ ಸಮುದಾಯಗಳಲ್ಲಿ ಕೊರಗರದೂ ಒಂದು. ಇತ್ತೀಚೆಗೆ ಅಲ್ಪ ಸ್ವಲ್ಪ ಸುಧಾರಣೆಯನ್ನು ಕಾಣುತ್ತಿದ್ದಾರೆ.

ಮಲೆಕುಡಿಯ ಅಲ್ಪ ಸಂಖ್ಯೆಯಲ್ಲಿರುವ ಜಿಲ್ಲೆಯ ಮತ್ತೊಂದು ಬುಡಕಟ್ಟು. ಇವರೂ ಕೂಡ ಆರ್ಥಿಕ ಸ್ಥಿತಿಯಲ್ಲಿ ಬಹಳ ಹಿಂದುಳಿದವರಾಗಿದ್ದಾರೆ. ಆರಂಭದಲ್ಲಿ ಮಲೆನಾಡಿನ ಕಾಡು ಬೆಟ್ಟಗಳಲ್ಲಿ, ಬಂಡೆ ಕಲ್ಲುಗಳ ಮಧ್ಯದಲ್ಲಿ ಗುಡಿಸಲುಗಳನ್ನು ರಚಿಸಿ ಜೀವನ ಮಾಡುತ್ತಿದ್ದರು. ಇವರು ಗೃಹ ಕೈಗಾರಿಕಾ ವೃತ್ತಿಯಲ್ಲಿ ಬಹಳ ನಿಪುಣರು. ಕಾಡಿನಲ್ಲಿ ಸಿಗುವ ವಿವಿಧ ಬಳ್ಳಿಗಳಿಂದ, ನಾರಿನಿಂದ ಬುಟ್ಟಿ, ಕುಕ್ಕೆ, ಗೆರಸೆ ಹೀಗೆ ಇನ್ನಿತರ ಪರಿಕರಗಳನ್ನು ತಯಾರಿಸಿ ವಿಕ್ರಯಿಸಿ, ಜೀವನ ಮಾಡುತ್ತಾ ಬಂದಿದ್ದಾರೆ.

ಮರಾಟಿಗರು (ಮರಾಠಿ) ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬುಡಕಟ್ಟು ಪಟ್ಟಿಗೆ ಸೇರಿದ ಮತ್ತೊಂದು ಸಮುದಾಯ. ಪ್ರಸ್ತುತ ಅಧ್ಯಯನ ಮರಾಟಿಗರನ್ನೇ ಕುರಿತಾಗಿದೆ. ಕೊರಗರು, ಮಲೆಕುಡಿಯರು ಜಿಲ್ಲೆಯ ಮೂಲ ಬುಡಕಟ್ಟುಗಳಾದರೆ, ಮರಾಟರು ವಲಸೆ ಬಂದ ಬುಡಕಟ್ಟು ಎಂದು ಪರಿಗಣಿಸಲಾಗಿದೆ. ಜಿಲ್ಲೆಗೆ ಸುಮಾರು ೧೪ನೇ ಶತಮಾನದಲ್ಲಿ ಮರಾಟಿಗರು ಬಂದವರು ಎಂದು ಇತಿಹಾಸ ತಿಳಿಸುತ್ತದೆ. (ಪಿ.ಕಮಲಾಕ್ಷ, ೧೯೯೪, ೪೦) ಸರಕಾರದ ಸಹಾಯ ಪಡೆದು ಸದುಪಯೋಗ ಮಾಡಿಕೊಂಡ ಜಿಲ್ಲೆಯ ಪರಿಶಿಷ್ಟ ಪಂಗಡಗಳಿಗಿಂತ ಇವರು ಒಂದು ಹೆಜ್ಜೆ ಮುಂದಾಗಿದ್ದಾರೆ.

ಪ್ರಸ್ತುತ ಅಧ್ಯಯನದಲ್ಲಿ ಕರ್ನಾಟಕದ ಬುಡಕಟ್ಟುಗಳಲ್ಲಿ ಒಂದಾದ ಮರಾಟ (ಮರಾಟಿ, ಮರಾಠ)ರನ್ನು ಕುರಿತಂತೆ ವಿಸ್ತಾರವಾದ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಮರಾಟಿಗರು ಪ್ರಮುಖವಾಗಿ ದಕ್ಷಿಣ ಕನ್ನಡ, ಉಡುಪಿ, ಕಾಸರಗೋಡು (ಕೇರಳ) ಮತ್ತು ಆಂಶಿಕವಾಗಿ ಚಿಕ್ಕಮಗಳೂರು, ಶಿವಮೊಗ್ಗ, ಕೊಡಗು ಜಿಲ್ಲೆಗಳಲ್ಲಿ ಕಂಡುಬರುತ್ತಾರೆ. ವ್ಯಾಪಕವಾಗಿ ಮರಾಟಿಗರು ನೆಲೆಸಿರುವ ದಕ್ಷಿಣ ಕನ್ನಡ ಜಿಲ್ಲೆಯನ್ನು ಅಧ್ಯಯನಕ್ಕೆ ಆರಿಸಿಕೊಳ್ಳಲಾಗಿದೆ. ಹಾಗೆಯೇ ಇತರ ಜಿಲ್ಲೆಗಳಲ್ಲಿಯೂ ಪೂರ್ಣಪ್ರಮಾಣವಲ್ಲದ ಕ್ಷೇತ್ರಕಾರ್ಯದ ಮೂಲಕ ಮಾಹಿತಿಗಳನ್ನು ಪಡೆದುಕೊಳ್ಳಲಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ, ಪುತ್ತೂರು, ಬಂಟ್ವಾಳ, ಬೆಳ್ತಂಗಡಿ ಮತ್ತು ಮಂಗಳೂರು ತಾಲೂಕುಗಳಲ್ಲಿ ಕ್ಷೇತ್ರಕಾರ್ಯ ವಿಧಾನದಿಂದ ಅಧ್ಯಯನಕ್ಕೆ ಬೇಕಾದ ಆಕರಗಳನ್ನು ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಮರಾಟಿಗರ ಆಚರಣೆ-ಸಂಪ್ರದಾಯಗಳನ್ನು, ವಿಧಿ-ವಿಧಾನಗಳನ್ನು ಆಯಾ ಸಂದರ್ಭಗಳಲ್ಲಿ ವೀಕ್ಷಿಸಿ ವಕ್ತೃಗಳನ್ನು ಸಂದರ್ಶಿಸಿ ಮಾಹಿತಿಗಳನ್ನು ಪಡೆದುಕೊಳ್ಳಲಾಗಿದೆ. ಅಧ್ಯಯನದ ದೃಷ್ಟಿಯಿಂದ ಅಗತ್ಯವೆನಿಸಿದ ಭಾವ ಚಿತ್ರಗಳನ್ನು ತೆಗೆದುಕೊಂಡು ವ್ಯಾಪಕ ಸಂಗ್ರಹಕಾರ್ಯ ಮಾಡಲಾಗಿದೆ. ಲಿಖಿತ, ಗ್ರಂಥಸ್ಥ ಮಾಹಿತಿಗಳು ವಿರಳವಾಗಿರುವುದರಿಂದ ಸಂಪೂರ್ಣವಾಗಿ ಕ್ಷೇತ್ರಕಾರ್ಯವನ್ನೇ ನೆಚ್ಚಿಕೊಂಡು ಅಧ್ಯಯನ ಮಾಡಲಾಗಿದೆ.

### ಅಧ್ಯಯನದ ಉದ್ದೇಶ: ಮತ್ತು ಆಕರ ಸಾಮಗ್ರಿಗಳು

ಯಾವುದೇ ಒಂದು ಬುಡಕಟ್ಟಿನ ಸಾಂಸ್ಕೃತಿಕ ಅಧ್ಯಯನದ ಮೂಲ ಉದ್ದೇಶವೆಂದರೆ ಬುಡಕಟ್ಟಿನ ಸಂಸ್ಕೃತಿಯ ಮೂಲ ಸ್ವರೂಪವನ್ನು ಕಂಡುಕೊಳ್ಳುವುದೇ ಆಗಿದೆ. ಬುಡಕಟ್ಟು ಇರುವ ಭೌಗೋಳಿಕ ನೆಲೆ, ಅವರ ಪರಂಪರೆ, ಸಾಂಪ್ರದಾಯಿಕ ಇತಿಹಾಸ, ಸಾಂಪ್ರದಾಯಿಕ ಆಚರಣೆಗಳು ಹೀಗೆ ಅವರ ಜೀವನವನ್ನು ಅಧ್ಯಯನಕ್ಕೆ ಒಳಪಡಿಸುವುದರ ಮೂಲಕ ಒಟ್ಟು ಸಂಸ್ಕೃತಿಯನ್ನು ಅನಾವರಣಗೊಳಿಸುವುದಾಗಿದೆ. ಅಧ್ಯಯನದ ಮುಖೇನ ಒಂದು ಬುಡಕಟ್ಟಿನ ಇರುವಿಕೆಯನ್ನು ಗುರುತಿಸಿದಂತಾಗುತ್ತದೆ.

ಒಂದು ದೇಶದ, ಒಂದು ರಾಜ್ಯದ ಮೂಲ ಪರಂಪರೆಯಿರುವುದು ಬುಡಕಟ್ಟುಗಳಲ್ಲಿ. ಬುಡಕಟ್ಟು ಸಮೂಹಗಳಲ್ಲಿ ಪುರಾತನ ಕಾಲದಿಂದಲೂ ಉಳಿದು ಕೊಂಡು ಬಂದ ಆದರ್ಶಗಳಿವೆ. ಸರಳವಾದ ಬದುಕಿದೆ. ಮಾನವೀಯತೆಗಳಿವೆ. ಇವುಗಳನ್ನೆಲ್ಲಾ ಅಧ್ಯಯನಕ್ಕೆ ಒಳಪಡಿಸಿ ನಮ್ಮ ಬದುಕಿನಲ್ಲಿ ಅಳವಡಿಸಿಕೊಳ್ಳುವಂತಾಗಬೇಕು. ಭಾರತದಂತಹ ಅಭಿವೃದ್ಧಿ ಹೊಂದುತ್ತಿರುವ ದೇಶಗಳಿಗೆ ತಡೆಯೊಡ್ಡುವ ಜಾಗತೀಕರಣದಂಥ ಅಸ್ತ್ರಗಳನ್ನು ಹಿಮ್ಮೆಟ್ಟಿಸಲು ಸಾಧ್ಯವಿದೆ. ಆದ್ದರಿಂದ ಭಾರತೀಯ ಮೂಲ ಪರಂಪರೆಯನ್ನು ತಿಳಿಯುವುದರ ಮೂಲಕ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಿಗೆ ಸಡ್ಡುಹೊಡೆಯಬೇಕಾಗಿದೆ. ಈ ನಿಟ್ಟಿನಲ್ಲಿ ಬುಡಕಟ್ಟುಗಳ ಅಧ್ಯಯನ ಪ್ರಸ್ತುತ ಅಗತ್ಯಗಳಲ್ಲಿ ಒಂದು.

ಕರ್ನಾಟಕವು ಅನೇಕ ಮೂಲ ಸಮುದಾಯಗಳೊಂದಿಗೆ ವಲಸೆ ಸಮುದಾಯಗಳೂ ಒಳಗೊಂಡಿರುವ ಒಂದು ರಾಜ್ಯ. ಅನೇಕ ಸಮುದಾಯಗಳು ತಮ್ಮ ಮೂಲ ನೆಲೆಯನ್ನು ಬಿಟ್ಟು ಬದುಕಗೊಟ್ಟ ನೆಲೆಯಲ್ಲಿ ತನ್ನದೇ ಆದ ಕೊಡುಗೆಗಳನ್ನು ನೀಡುತ್ತಾ ಬಂದಿವೆ. ಮೂಲತಃ ಮಹಾರಾಷ್ಟ್ರದವರೆಂದು ಕರೆಯಲ್ಪಡುವ ಮರಾಟಿಗರು ಆ ನೆಲದವರೋ? ಅಥವಾ ಇನ್ನಾವುದೋ ಪ್ರದೇಶದಿಂದ ಬಂದವರೋ ಎಂಬುದನ್ನು ಜನಪದರ ಮೌಖಿಕ ಮಾಹಿತಿಗಳನ್ನು ಆಧರಿಸಿ ತಿಳಿಯುವುದು ಉದ್ದೇಶಗಳಲ್ಲೊಂದು. ಹೈಟೆಕ್ ಯುಗದಲ್ಲಿ ಬದಲಾದ ಸಮಾಜದ ನೆಲೆಯಲ್ಲಿ ಒಂದು ಸಮುದಾಯ ತನ್ನನ್ನು ಹೇಗೆ ಪರಿವರ್ತನೆಗೆ ತೆರೆದಿಟ್ಟಿದೆ? ಆದರಿಂದಾಗುವ ಗುಣಾವಗುಣಗಳನ್ನು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಕಂಡುಕೊಳ್ಳುವುದು ಅಧ್ಯಯನದ ಉದ್ದೇಶವಾಗಿದೆ.

ಮರಾಟಿಗರ ಅನನ್ಯತೆಯ ಸಂಕೇತಗಳಾದ ಗೋಂದೋಳು ಪೂಜೆ, ಭೈರವ ಪೂಜೆ, ಬಾಳಸಾಂತು, ಹೋಳಿಹಬ್ಬಗಳು ಜಿಲ್ಲೆಯ ಇತರ ಸಮುದಾಯಗಳ ಮೇಲೆ ಯಾವ ರೀತಿ ಪ್ರಭಾವ ಬೀರಿದೆ? ಹಾಗೆಯೇ ತುಳು ಸಂಸ್ಕೃತಿ ಮರಾಟಿಗರ ಮೇಲೆ ಬೀರಿರುವ ಪ್ರಭಾವಗಳನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

ಕರ್ನಾಟಕದ ಪ್ರಧಾನ ಬುಡಕಟ್ಟುಗಳಲ್ಲಿ ಮರಾಟಿ (ಮರಾಠಿ) ಗರು ಕೂಡ ಒಂದು. ಇದುವರೆಗೆ ಮರಾಟಿಗರ ಬಗ್ಗೆ ಯಾವುದೇ ರೀತಿಯ ಒಟ್ಟು ಅವರ ಜೀವನ ವಿಧಾನ ಸಾಂಸ್ಕೃತಿಕ ಬದುಕನ್ನು ಕುರಿತಂತೆ ಯಾವುದೇ ಸಂಶೋಧನಾತ್ಮಕ ವಿವರಗಳು ದಾಖಲಾಗಿರುವುದಿಲ್ಲ. ಎಚ್.ವಿ. ನಂಜುಂಡಯ್ಯ ಮತ್ತು ಎಲ್.ಕೆ. ಅನಂತಕೃಷ್ಣ ಅಯ್ಯರ್ ಅವರು ತಮ್ಮ THE MYSORE TRIBES AND CASTESನ ಸಂಪುಟ ನಾಲ್ಕರಲ್ಲಿ ಮರಾಠರನ್ನು ಕುರಿತಂತೆ ಸುಮಾರು ೧೧ ಪುಟಗಳ ಪರಿಚಯಾತ್ಮಕ ಲೇಖನಗಳನ್ನು ನೀಡಿದ್ದಾರೆ.

ಕೆ.ಎಸ್. ಸಿಂಗ್ ಅವರು THE SCHEDULED TRIBES ( People of India ) National Seriesನ ಮೂರನೇ ಸಂಪುಟದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ (ಉಡುಪಿ, ಕಾಸರಗೋಡು ಸಹಿತ) ಮರಾಟಿಗರ ಬಗ್ಗೆ ಕಿರು ಪರಿಚಯವನ್ನು ನೀಡಿದ್ದಾರೆ.[೧೦]

ಇತ್ತೀಚೆಗೆ ಕೆ.ಎಸ್. ಸಿಂಗ್ ಅವರು People of India ಮಾಲಿಕೆಯ ಸಂಪುಟ ೨೬ ರಲ್ಲಿ ಕರ್ನಾಟಕದ ಮರಾಟಿಗರನ್ನು ಮತ್ತು ಸಂಪುಟ ೨೭ ರಲ್ಲಿ ಕೇರಳದ ಕಾಸರಗೋಡು ಜಿಲ್ಲೆಯ ಮರಾಟಿಗಳನ್ನು ಪರಿಚಯಿಸಿದ್ದಾರೆ.

ಜನಪ್ರಿಯ ಪುಸ್ತಕ ಮಾಲೆಯಡಿಯಲ್ಲಿ ಪ್ರಕಟವಾದ ''ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ'' ಗ್ರಂಥವು ಜಿಲ್ಲೆಯ ಹರಿಜನ-ಗಿರಿಜನರನ್ನು ಸಂಕ್ಷಿಪ್ತವಾಗಿ ಪರಿಚಯಿಸಿತು. ಪಿ.ಕಮಲಾಕ್ಷ (೧೯೯೪) ಅವರು ಈ ಗ್ರಂಥದಲ್ಲಿ ಜಿಲ್ಲೆಯ ಎಲ್ಲಾ ಜಾತಿ ಬುಡಕಟ್ಟು ಜನರನ್ನು ಅವರ ಸಂಕ್ಷಿಪ್ತ ಇತಿಹಾಸವನ್ನು ನೀಡಿದ್ದಾರೆ. ಇದು ಮೌಲಿಕವಾದ ಆಕರ ಗ್ರಂಥವಾಗಿದ್ದು, ಮರಾಟಿಗರು ಗೋವಾ ಪ್ರಾಂತ್ಯದಿಂದ ಬಂದವರೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.[೧೩]

"ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ" ಗ್ರಂಥವು ಮರಾಟಿಗರು ಜಿಲ್ಲೆಯಲ್ಲಿ ಇರುವಿಕೆಯನ್ನು ದೃಢಪಡಿಸುವ ಒಂದು ಆಕರ ಗ್ರಂಥವಾಗಿ ಪರಿಗಣಿಸಲ್ಪಡುತ್ತದೆ. ಮಂಜೇಶ್ವರ ಗಣಪತಿ ರಾವ್ ಐಗಳ ಅವರು ರಚಿಸಿದ ಈ ಗ್ರಂಥವು ೧೯೨೩ರಲ್ಲಿ ಪ್ರಕಟವಾಗಿದೆ. ಸಾಂಸ್ಕೃತಿಕವಾಗಿ ಉಪಲಬ್ಧವಿರುವ ಈ ಗ್ರಂಥದಲ್ಲಿ ಮರಾಟಿಗರ ಕೆಲಸ (ವೃತ್ತಿ)ದ ಬಗ್ಗೆ ಅಪಭ್ರಂಶವಾದ ಮಾಹಿತಿಯಿದೆ.[೧೪]

'ಒಲಸರಿ' ಅಶೋಕ ಆಳ್ವ ಅವರು ಗ್ರಂಥದಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಮರಾಟಿಗರ ಜನಪದ ಆಚರಣೆ (ಕುಣಿತಗಳ ಸಹಿತ)ಗಳಾದ ಬಾಲೆಸಾಂತು ಮತ್ತು ಗೋಂದೋಳುವನ್ನು ವಿವರವಾಗಿ ಪರಿಚಯಿಸಿದ್ದಾರೆ. ಇದನ್ನು ತಿರುಮಲೇಶ್ವರ ಭಟ್ ಅವರು ಆಂಗ್ಲ ಭಾಷೆಗೆ ಅನುವಾದಿಸಿದ್ದಾರೆ.[೧೫]

ಡಾ.ತಾಳ್ತಜೆ ವಸಂತ್‌ಕುಮಾರ್ ಅವರು 'ಕರಾವಳಿ ಕರ್ನಾಟಕದ ಮರಾಠಿ ಸಮಾಜ' ಎಂಬ ವಿವರವಾದ ಲೇಖನವನ್ನು ಗಿರಿಜನ ಸಿರಿ ಸಂಪುಟದಲ್ಲಿ ನೀಡಿದ್ದಾರೆ.

ಡಾ.ಕೆ.ಎಂ.ಮೇತ್ರಿಯವರು 'ಬುಡಕಟ್ಟು ಕುಲಕಸುಬುಗಳು' ಎಂಬ ಗ್ರಂಥದಲ್ಲಿ ಮರಾಟಿಗರನ್ನು ಪರಿಚಯಿಸಿ ಅವರ ಕುಲಕಸುಬುಗಳನ್ನು ವಿವರಿಸಿದ್ದಾರೆ. ಇದು ಕೂಡಾ ಒಂದು ಆಕರ ಗ್ರಂಥವಾಗಿದೆ.[೧೬]

ಡಾ.ಎಚ್.ಡಿ.ಪ್ರಶಾಂತ್ (ಸಂ) ಜನ ಸಮುದಾಯ ರಾಜ್ಯಕೋಶದಲ್ಲಿ ಮರಾಟಿಗರನ್ನು ಸ್ಥೂಲವಾಗಿ ಪರಿಚಯಿಸಿದ್ದಾರೆ. ''ಮರಾಠ ಎಂಬ ಪದವು ಅನೇಕ ಮರಾಠಿ ಅಬ್ರಾಹ್ಮಣ ಜಾತಿಗಳನ್ನು ಸೂಚಿಸುತ್ತದೆ. ಇವರು ಸೈನಿಕರಾಗಿಯೋ ಅಥವಾ ಮರಾಠಿ ದಾಳಿಕೋಶ ದಂಡಿನ ಹಿಂಬಾಲಕರಾಗಿಯೋ ದಕ್ಷಿಣಕ್ಕೆ ಬಂದರು" ಎಂಬ ಥರ್ಸ್ಟನ್ ಅವರ ಹೇಳಿಕೆಯನ್ನು ಉಲ್ಲೇಸುತ್ತಾ ಮರಾಠಿ ಭಾಷೆಯನ್ನು ಮಾತನಾಡುವುದರಿಂದ ಮರಾಠಿಯವರು ಎಂದು ಕರೆಯಲಾಯಿತು." ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. (ಎಚ್.ಡಿ.ಪ್ರಶಾಂತ್ (ಸಂ) ೨೦೦೦, ಪು.೮೮)

ಸೂರ್ಯನಾಥ ಕಾಮತ್ (ಪ್ರ.ಸಂ) ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಕೊಡಗು ಜಿಲ್ಲೆ ಇದರಲ್ಲಿ ಮರಾಟ (ಮರಾಠಿ)ರನ್ನು ಬುಡಕಟ್ಟನ್ನು ಪರಿಚಯಿಸಿದ್ದಾರೆ. ಎ.ಎ.ಡಿ.ಲೂಯಿಸ್‌ಅವರು ಟ್ರೈಬ್ಸ್ ಆಫ್ ಮೈಸೂರು ಗ್ರಂಥದಲ್ಲಿ "ಮರಾಠರನ್ನು ಕಾಡು ಮರಾಟ ಎಂದು ಕರೆಯುತ್ತಾರೆ." ಎಂಬ ಹೇಳಿಕೆಯನ್ನು ಉಲ್ಲಖಿಸಿದ್ದಾರೆ. ಮರಾಟರಲ್ಲಿ ೯೬ ಉಪನಾಮ ಅಥವಾ ದೇವಕ್‌ಗಳು ಇದ್ದು, ಒಂದೊಂದು ದೇವಕ್‌ಗೂ ಒಂದೊಂದು ಗೋತ್ರವಿರುವುದರ ಜೊತೆಗೆ ಒಂದು ಕುಲದೇವರಿರುತ್ತಾರೆ. ಎಂದು ವಿವರಣೆ ನೀಡಿದ್ದಾರೆ. ಇಲ್ಲಿ ಸ್ಥೂಲವಾಗಿ ಕೊಡಗಿನಲ್ಲಿ ಕಂಡು ಬರುವ ಮರಾಟಿಗರ ಬಗ್ಗೆ ತಿಳಿಸಿದ್ದಾರೆ.

ಎಸ್.ಎ.ಕೃಷ್ಣಯ್ಯ ಅವರು ಕರಾವಳಿ ಕರ್ನಾಟದ ಜನಪದ ಕಲೆಗಳ ಬಗ್ಗೆ ವಿಸ್ತೃತವಾದ ಲೇಖನಗಳನ್ನು ಕರಾವಳಿ ಜಾನಪದ ಕಲೆಗೆ ಕಮಲಾದೇವಿಯವರ ಕೊಡುಗೆ ಎಂಬ ಗ್ರಂಥದಲ್ಲಿ ನೀಡಿದ್ದಾರೆ. ಅದರಲ್ಲಿ ಮರಾಟಿಗರ ಅನನ್ಯತೆಯ ಸಂಕೇತಗಳಾದ ಬಾಳೆಸಾಂತು, ಹೋಳಿ, ಮತ್ತು ಗೋಂದೋಳು ನೃತ್ಯವನ್ನು ಕ್ಷೇತ್ರಾಧ್ಯಯನದ ಮೂಲಕ ನೀಡಿದ್ದಾರೆ. ಈ ಪ್ರಬಂಧ ಸಂಶೋಧನಾತ್ಮಕವಾಗಿದ್ದು ಮೌಲಿಕವಾಗಿದೆ. (ಎಸ್.ಎ.ಕೃಷ್ಣಯ್ಯ, ಪು ೧೦)

ಒಟ್ಟಾರೆಯಾಗಿ ದಕ್ಷಿಣ ಕನ್ನಡ ಜಿಲ್ಲೆಯ ಮರಾಟಿಗರ ಬಗ್ಗೆ ಪರಿಚಯಾತ್ಮಕ ಲೇಖನಗಳು, ಪ್ರಬಂಧಗಳು ನಡೆದಿವೆಯೇ ವಿನಃ ಸಂಶೋಧನೆಗಳು ನಡೆದಿಲ್ಲ. ಈ ಅಧ್ಯಯನವು ಮುಖ್ಯವಾಗಿ ಕ್ಷೇತ್ರಕಾರ್ಯದ ಮಾಹಿತಿಗಳ ಆಧಾರದ ಮೇಲೆ ನಡೆದಿದೆ ಮತ್ತು ಈ ಮೇಲಿನ ಆಕರ ಗ್ರಂಥಗಳನ್ನು ಪರಾಮರ್ಶನೆ ಮಾಡಲಾಗಿದೆ. ಮುಂದಿನ ಸಂಶೋಧನೆಗಳಿಗೆ ಈ ಅಧ್ಯಯನವು ಒಂದು ಆಕರ ಗ್ರಂಥವಾಗಬಹುದು ಎಂಬುದು ನನ್ನ ಅನಿಸಿಕೆ.

## ಕರ್ನಾಟಕದಲ್ಲಿನ ಪ್ರಮುಖ ಪರಿಶಿಷ್ಟ ಪಂಗಡಗಳು

| ಕ್ರ.ಸಂ. | ಪರಿಶಿಷ್ಟ ಪಂಗಡಗಳ ಹೆಸರು |
|---|---|
| ೦೧. | ಆದಿಯನ್ |
| ೦೨. | ಬರ್ದಾ |
| ೦೩. | ಬವಚಾ, ಬಮ್ಚಾ |
| ೦೪. | ಭಿಲ್, ಭಿಲ್ ಗರಾಸಿಯಾ, ಧೋಲಿ ಭಿಲ್, ಡುಂಗ್ರಿ ಭೀಲ್, ಡುಂಗ್ರಿ ಗರಾಸಿಯಾ, ಮೇವಾಸಿ ಭಿಲ್ ರಾವಲ್ ಭಿಲ್, ತಡವಿ ಭಿಲ್, ಭಗಾಲಿಯಾ, ಭಿಲಾಲ, ಪವರಾ, ವಾಸವ, ವಾಸಲೆ |
| ೦೫. | ಚೆಂಚು, ಚೆಂಚವಾರ್ |
| ೦೬. | ಚೋಧರಾ |
| ೦೭. | ದುಬಲಾ, ತಳವಿಯ ಹಲಪತಿ |
| ೦೮. | ಗಮಿತ, ಗಾಮ್ತಾ, ಗವಿತ್, ಮಾವ್ಚಿ, ಪಡ್ವಿ, ವಾಳವಿ |
| ೦೯. | ಗೊಂಡ, ನಾಯಿಕ್ ಪೋಡ, ರಾಜಗೊಂಡ |
| ೧೦. | ಗೌಡಲು |
| ೧೧. | ಹಕ್ಕಿ ಪಿಕ್ಕಿ, ಹರ್ಣಶಿಕಾರಿ |
| ೧೨. | ಹಸಲರು |
| ೧೩. | ಇರುಳರು |

೧೪. ಇರುಳಿಗ

೧೫. ಜೇನು ಕುರುಬ

೧೬. ಕಾಡು ಕುರುಬ

೧೭. ಕಮ್ಮಾರ (ದಕ್ಷಿಣ ಕನ್ನಡ ಮತ್ತು ಚಾಮರಾಜ ನಗರ
ಜಿಲ್ಲೆಯ ಕೊಳ್ಳೆ(ಗಾಲ ತಲ್ಲೂಕಿನಲ್ಲಿ)

೧೮. ಕನಿಯಾನ, ಕನ್‌ಯಾನ (ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನಲ್ಲಿ)

೧೯. ಕಥೋಡಿ, ಕತಕಾರಿ, ಧೋರ, ಧೋರ ಕತಕಾರಿ, ಸೋನ ಕಥೋಡಿ, ಸೋನ ಕಾತಕಾರಿ

೨೦. ಕಟ್ಟುನಾಯಕನ್

೨೧. ಕೊಕನ, ಕೊಕ್‌ನಿ, ಕುಕ್‌ನಾ

೨೨. ಕೋಳಿ ಧೋರ, ಟೋಕ್ರೆ ಕೋಳಿ, ಕೊಳಚಾ, ಕೋಳಘಾ

೨೩. ಕೊಂಡ ಕಾಪುಸ

೨೪. ಕೊರಗ

೨೫. ಕೋಟ

೨೬. ಕೋಯ, ಭೀನೆ ಕೋಯಾ, ರಾಜಕೋಯಾ

೨೭. ಕುಡಿಯಾ, ಮಲೆಕುಡಿಯ

೨೮. ಕುರುಬ ಕೊಡಗು ಜಿಲ್ಲೆಯಲ್ಲಿ

೨೯. ಕುರುಮನ್ಸ

೩೦. ಮಹಾ ಮಲಸಾರ

೩೧. ಮಲೈಕುಡಿ

೩೨. ಮಲಸಾರ

೩೩. ಮಲೆಯಕಂಡಿ

೩೪. ಮಲೇರು

೩೫. ಮರಾಠಾ (ಕೊಡಗು ಜಿಲ್ಲೆಯಲ್ಲಿ)

೩೬. ಮರಾಠಿ (ದಕ್ಷಿಣ ಕನ್ನಡ ಜಿಲ್ಲೆಯಲ್ಲಿ)

೩೭. ಮೇದಾ, ಮೇದಾರಿ, ಗೌರಿಗ, ಬುರುಡ

೩೮. ನಾಯಿಕ್‌ದಾ, ನಾಯಕಾ, ಚೋಲಿವಾಲ, ನಾಯಕಾ, ಕಪಾಡಿಯ ನಾಯಕಾ, ಮೋಟಾ ನಾಯಕಾ, ನಾನಾ ನಾಯಕಾ, ನಾಯಿಕ, ನಾಯಕ್, ಬೇಡ, ಬೇಡರ ಮತ್ತು ವಾಲ್ಮೀಕಿ

೩೯. ಪಲ್ಲಿಯಾನ್

೪೦. ಪನಿಯಾನ

೪೧. ಪರಧಿ, ಅಡವಿಚಿಂಚರ್, ಫಾನ್ಸೆ ಪರಧಿ

೪೨. ಪಟೇಲಿಯ

೪೩. ರತಾವಾ

೪೪. ಸೋಲಗ

೪೫. ಸೋಲಿಗರು

೪೬. ತೋಡ

೪೭. ವರಲಿ

೪೮. ವಿಟೋಲಿಯ, ಕೋಟವಾಲಿಯ, ಬರೋಡಿಯ

೪೯. ಯೆರವ

೫೦. ಸಿದ್ದಿ (ಉತ್ತರ ಕನ್ನಡ ಜಿಲ್ಲೆಯಲ್ಲಿ)

(ಆಧಾರ: ಪರಿಶಿಷ್ಟ ಪಂಗಡಗಳ ಕಲ್ಯಾಣ ನಿರ್ದೇಶನಾಲಯ, ಕರ್ನಾಟಕ.)

* * * * *

**ಅಡಿ ಟಿಪ್ಪಣಿ :**

೦೧. ಡಾ.ಎನ್.ಆರ್.ನಾಯಕ ೨೦೦೩, ಪು ೨೯೯.

೦೨. ಉದ್ಧೃತ: ರವೀಂದ್ರ ಕೊಪ್ಪರ್: ಭಾರತೀಯ ಸಮಾಜದ ಅಧ್ಯಯನ, ಪು. ೩೪೯.

೦೩. ಉದ್ಧೃತ: ಎ.ಸಿ. ಲಲಿತ: ಕರ್ನಾಟಕದಲ್ಲಿ ಬುಡಕಟ್ಟುಗಳ ಅಧ್ಯಯನ, ಪು. ೧೮೮.

೦೪. ಉದ್ಧೃತ: ಡಾ. ಎಚ್.ಎಂ. ಮಹೇಶ್ವರಯ್ಯ: ಮಹಾರಾಷ್ಟ್ರದ ಬುಡಕಟ್ಟುಗಳು, ಪು. ೧೨೬

೦೫. ಉದ್ಧೃತ: ಎಂ. ಬೈರೇಗೌಡ: ಇರುಳಿಗರು-ಜಾನಪದ ಅಧ್ಯಯನ, ಪು.೪

೦೬. ಡಾ.ಹಿ.ಶಿ.ರಾಮಚಂದ್ರೇಗೌಡ, ಜನಪದರು ನಾವು ಪು ೭೦

೦೭. ಅಂಬಳಿಕೆ ಹಿರಿಯಣ್ಣ, ೨೦೦೪, ಪು ೮೪

೦೮. Internation Encyclopedia of Social Saiences vol,16. page-10

೦೯. ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ ಸಂಪುಟ-೧ ಎಲ್.ಕೆ. ಅನಂತ ಕೃಷ್ಣ ಅಯ್ಯರ್‌ರವರ ಮುನ್ನುಡಿಯಿಂದ.

೧೦. Nanjundaiah H.V. and Ananthakrishna Iyer L.K : The Mysore Tribes and Castes, vol, iv. p-170-180.

೧೧. K.S. Singh : The Scheduled Tribes. People of India National Series. vol, iii. p-758.

೧೨. K.S. Singh : People of India, KARNATAKA. vol, xxvi-part three. p-1028.

೧೩. K.S. Singh : People of India, KERALA vol, xxvii, part two. p-913.

೧೪. ಪಿ. ಕಮಲಾಕ್ಷ: ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ, ಪು ೪೦ -೪೨.

೧೫. ಮಂಜೇಶ್ವರ ಗಣಪತಿ ರಾವ್ ಐಗಳ ೧೯೩೩ (ಮರುಮುದ್ರಣ ೨೦೦೪) 'ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ' ಪು ೩-೧೮.

೧೬. ತಿರುಮಲೇಶ್ವರ ಭಟ್ (ಅನುವಾದ) 'ಒಲಸರಿ' (ಕನ್ನಡದಲ್ಲಿ: ಅಶೋಕ ಆಳ್ವ) ೨೦೦೦, ಪುಟ ೧-೧೮.

೧೭. ಡಾ. ತಾಳ್ತಜೆ ವಸಂತಕುಮಾರ್

೧೮. ಡಾ. ಕೆ.ಎಂ. ಮೇತ್ರಿ "ಬುಡಕಟ್ಟು ಕುಲಕಸುಬುಗಳು" ೨೦೦೨, ಪು.೧೭೯-೧೮೧.

* * * * *

ಅಧ್ಯಾಯ- ೨

# ಮರಾಟಿ ಸಮುದಾಯ

೨.೧ ಮರಾಟಿ ಸಮುದಾಯ

೨.೨ ಮರಾಟಿ ಶಬ್ದದ ಪದ ನಿಷ್ಪತ್ತಿ

೨.೩ ಸಮುದಾಯದ ಹಿನ್ನಲೆ

೨.೪ ಭೌಗೋಳಿಕ ನೆಲೆ

೨.೫ ವಲಸೆ ಮತ್ತು ವಿಕಾಸ

೨.೬ ಜಾತಿ ಮತ್ತು ಬುಡಕಟ್ಟು ಸಮಾಜ

**ಮರಾಟಿ ಸಮುದಾಯ**

ದಿನದಿಂದ ದಿನಕ್ಕೆ ಬದಲಾಗುತ್ತಿರುವ ಇಂದಿನ ಸಮಾಜದಲ್ಲಿ ಒಂದು ಸಮುದಾಯದ ನಿರ್ದಿಷ್ಟ ಮೂಲವನ್ನು ಹುಡುಕುವುದು ಕಷ್ಟಸಾಧ್ಯ.ಪ್ರತಿಯೊಂದು ಜನಾಂಗ ಬುಡಕಟ್ಟು ಸಮುದಾಯಗಳು ತಮ್ಮ ಜೀವನದ ಬದುಕಿಗೆ ಅನುಕೂಲವಾಗುವಂತೆ ತಮ್ಮ ತಮ್ಮ ನೆಲೆಗಳನ್ನು ಕಂಡುಕೊಂಡಿರುವುದು ಕಂಡುಬರುತ್ತದೆ. ತಮ್ಮ ಮೂಲದ ಬಗೆ ತಲೆಕೆಡಿಸಿಕೊಳ್ಳುವುದಕ್ಕಿಂತ ಜೀವನ ಸಾಗಿಸುವುದು ಅವರ ಉದ್ದೇಶವಾಗಿರುತ್ತಿತ್ತು. ಅದು ಅನಿವಾರ್ಯವೂ ಹೌದು. ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ಒಂದು ಊರಿನಿಂದ ಮತ್ತೊಂದು ಊರಿಗೆ ವಲಸೆ ಹೋಗುವುದು ಸಾಮಾನ್ಯವೆಂಬಂತೆ ದೇಶದಿಂದ ದೇಶಕ್ಕೆ, ಖಂಡದಿಂದ ಖಂಡಕ್ಕೆ ವಲಸೆ ಹೋಗುತ್ತಿರುವುದನ್ನು ಕಾಣುತ್ತಿದ್ದೇವೆ.ಈ 'ವಲಸೆ' ಮಾನವನ ಆರಂಭಿಕ ಹಂತದಿಂದಲೂ ಕಂಡುಬರುತ್ತಿದೆ. ವಲಸೆಗಳ ಕಾರಣದಿಂದಾಗಿ ನೂರಾರು ಸಮುದಾಯಗಳು ತಮ್ಮ ಮೂಲವನ್ನೇ ಮರೆತಿವೆ. ಇದ್ದರೂ ಸ್ಥಿತ್ಯಂತರಗಳಿಂದಾಗಿ ಮಾರ್ಪಾಡಿಗೆ ಒಳಪಟ್ಟಿರುತ್ತವೆ. ಇಂತಹ ಸ್ಥಿತಿಯಲ್ಲಿ ಆ ಸಮುದಾಯದ ಮೂಲವನ್ನು ಹುಡುಕಬೇಕಾದರೆ ಎಲ್ಲಾ ರೀತಿಯಿಂದಲೂ ಪರಿಶೀಲಿಸಬೇಕಾಗುವುದು.

ಪ್ರಸ್ತುತ ದಕ್ಷಿಣ ಕನ್ನಡ ಜಿಲ್ಲೆಯ ಮರಾಟಿಗರ ಮೂಲವನ್ನು ಮೌಖಿಕ ಸಾಹಿತ್ಯ ಹಾಗೂ ಲಿಖಿತ ಮಾಹಿತಿಗಳ ಮುಖೇನ ಪರಾಮರ್ಶಿಸಲಾಗಿದೆ. ಇತಿಹಾಸಕಾರರೂ ಕೂಡ ಮೌಖಿಕ ಸಾಹಿತ್ಯವನ್ನು ಇತಿಹಾಸದ ಒಂದು ಪಳಿಯುಳಿಕೆಯೆಂದು ಪರಿಗಣಿಸಿರುವುದರಿಂದ ಇತಿಹಾಸಶಾಸ್ತ್ರದ ಇತರ ವಿಭಾಗಗಳಂತೆಯೇ ಇದೂ ಒಂದು ಪ್ರಮುಖ ಆಧಾರವಾಗಿದೆ. ಮೂಲನೆಲೆಗಳು ಶಿಷ್ಟವಾಗಿರಲಿ, ಪರಿಶಿಷ್ಟವಾಗಿರಲಿ ಯಾವುದೇ ಪೂರ್ವಾಗ್ರಹ ಪೀಡಿತರಾಗಿ ನೋಡದೆ ವಸ್ತುನಿಷ್ಠತೆಯಿಂದ ನೋಡಬೇಕಾಗಿದೆ. ವೈದಿಕ ಧರ್ಮದ ಹೆಸರಲ್ಲಿ ವೈದಿಕರು ವರ್ಣಗಳಾಗಿ ವಿಂಗಡಿಸಿ ಕೆಳವರ್ಣಗಳನ್ನು ಶೋಷಿಸಿದ್ದು ಇತಿಹಾಸದ ಕರಾಳ ಪುಟಗಳಾಗಿವೆ. ಬದಲಾದ ಕಾಲಕ್ಕೆ ಅವರು ಬದಲಾಗಬೇಕಾಗಿದೆ. ಶೋಷಿಸಿಸಲ್ಪಟ್ಟವರೂ ಬದಲಾಗಬೇಕಾಗಿದೆ. ಆ ನಿಟ್ಟಿನಲ್ಲಿ ಅಧ್ಯಯನಗಳು ಶಿಷ್ಟ,ಪರಿಶಿಷ್ಟ,ಜಾನಪದ ಹೀಗೆ ಎಲ್ಲಾ ದೃಷ್ಟಿಕೋನಗಳಿಂದ ನೋಡಬೇಕಾಗಿದೆ.

## 'ಮರಾಟಿ' ಶಬ್ದದ ಪದನಿಷ್ಪತ್ತಿ

ಮರಾಟಿ, ಮರಾಠಿ ಎನ್ನುವುದು ದೇಶವಾಚಕ ಶಬ್ದವಾಗಿದೆ. ಮಹಾರಾಷ್ಟ್ರದ ರಾಜ್ಯ ಭಾಷೆ ಮರಾಠಿ. ಮಹಾರಾಷ್ಟ್ರ 'ಮರಹಾಟಿ' ಪದದಿಂದ ಸಂಸ್ಕೃತೀಕರಣಗೊಂಡ ಪದ. ಮರಹಾಟಿ ಕನ್ನಡದ ಮರ ಮತ್ತು ಹಟ್ಟಿ ಪದಗಳ ರೂಪಾಂತರ ಪದ. ಮರವರು ಹಾಗೂ ಹಟ್ಟಿಗಳು ಕನ್ನಡದ ಪಶುಪಾಲಕರೆಂದು ಶಂಬಾ ಅವರ ವಾದ. ಮರಾಟಿ ಸಂಸ್ಕೃತೀಕರಣಗೊಂಡು 'ಮರಾಠಿ' ಯಾಗಿದೆಯೆಂದು ಸಂಶೋಧಕರು ಅಭಿಪ್ರಾಯ ಪಡುತ್ತಾರೆ. ಮರಹಟ್ಟಿ > ಮರಾಟಿ > ಮರಾಠಿ ಆಗಿದೆ. 'ಮರಾಟ' ದಂದಲೇ ಈ 'ಮರಾಟಿ'ಗ ಜಾತಿ ಸೂಚಕ ಪದ ಬಂದಿದೆ.

ಸುಮಾರು ೧೪ ನೇ ಶತಮಾನದಲ್ಲಿ ವಲಸೆ ಬಂದರೆಂದು ಹೇಳುವ ಮರಾಟಿಗರು ಮರಾಠಿ ಭಾಷೆಯಲ್ಲಿ ಮಾತನಾಡುತ್ತಿದ್ದರಿಂದ ಈ (ತುಳುನಾಡು) ಪ್ರದೇಶದ ಜನರು 'ಮರಾಟಿಗರು' ಎಂದು ಕರೆಯಲ್ಪಟ್ಟು ಅದುವೇ ರೂಢಿಗೆ ಬಂದಿರಲೂ ಸಾಧ್ಯವಿದೆ.

''ಮರಾಟ ಇಲ್ಲವೆ ಮರಾಠ ಪದಗಳು ಮಹಾರಾಷ್ಟ್ರ ಮೂಲದವು . ಮಹಾರಾಷ್ಟ್ರ ಮರಹಾಟಿ ಪದದಿಂದ ಸಂಸ್ಕೃತೀಕರಣಗೊಂಡ ಪದವೆಂದು ಬಹುತೇಕ ವಿದ್ವಾಂಸರ ವಾದವಾಗಿದೆ. ಆರ್ಯರ ಆಗಮನದಿಂದ ಮರಾಟ ಮಹಾರಾಷ್ಟ್ರವಾಯಿತು. ಮರಾಠಿಗಳನ್ನೇ ಆರ್ಯರೆಂದೂ ಕರೆಯಲಾರಂಭಿಸಿದರು. ಮರಾಟರು ಬ್ರಾಹ್ಮಣೀಕರಣಕ್ಕೊಳಗಾದರು. ದ್ರಾವಿಡ ಮೂಲದ ಮರ್ಹ್ಹಾಟಿ ಪದ ಮರೆಮಾಚುತ್ತ ಸಂಸ್ಕೃತ ಮೂಲದ ಮಹಾರಾಷ್ಟ್ರ ಪದದ ಬಳಕೆ ಹೆಚ್ಚಾಗಿ ಸಂಸ್ಕೃತೀಕರಣಗೊಂಡಿತು. ಮಹಾರಾಷ್ಟ್ರ ಎಂದರೆ ದೊಡ್ಡ ರಾಷ್ಟ್ರ ಎಂದರ್ಥ. ಈ ಮೂಲದ ನೆಲದ ಮರಾಟ ಯೋಧರೇ ಕರ್ನಾಟಕ ಕೇರಳ ರಾಜ್ಯಗಳ ಕಾಡುಗಳನ್ನು ಸೇರಿ ಬುಡಕಟ್ಟುಕರಣಕ್ಕೊಳಗಾಗಿ ಕಾಡು ಮರಾಟಿಗಳಾದರು'' ಎಂದು ಡಾ.ಕೆ.ಎಂ. ಮೇತ್ರಿಯವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.[೧]

ದಕ್ಷಿಣ ಕನ್ನಡ, ಉಡುಪಿ, ಕಾಸರಗೋಡು ಪ್ರದೇಶದ ಮರಾಟಿಗರೆಲ್ಲರೂ ನಾಯ್ಕ, (ನ್ಯಾಕ) ಎಂಬ ಕುಲನಾಮ (Sur name)ವನ್ನು ಹೊಂದಿದ್ದಾರೆ. 'ನಾಯ್ಕ' 'ನಾಯಕ' ಎಂಬ ಅಂಕಿತದಿಂದ ಅಂತ್ಯಗೊಳ್ಳುವ ಹೆಸರುಳ್ಳವರೆಲ್ಲಾ ಮರಾಟಿಗರಲ್ಲ. ಈ ಅಂಕಿತ ರಾಜ್ಯದ ಬಯಲು ಸೀಮೆಯ ಲಂಬಾಣಿ, ಬೇಡ, ಈಡಿಗ, ಕರಾವಳಿಯ ಕೊಂಕಣಿ, ಬಂಟ, ಸಮಗಾರ, ಮಲೆನಾಡಿನ ಒಕ್ಕಲಿಗ ಹೀಗೆ ಇನ್ನೂ ಅನೇಕ ಸಮುದಾಯಗಳಲ್ಲೂ ಬಳಕೆಯಲ್ಲಿದೆ. ವಾಸ್ತವವಾಗಿ 'ನಾಯಕ' 'ನಾಯ್ಕ' ಎಂಬುದು ಗ್ರಾಮದ ಮುಖಂಡನಿಗಿರುವ ಹೆಸರು. ಒರಿಯಾ ಭಾಷೆಯಲ್ಲಿ ಗ್ರಾಮದ ಮುಖಂಡನನ್ನು 'ನಾಯ್ಕೊ' ಎಂದು ಕರೆಯುತ್ತಾರೆ. ಹಾಗೆಯೇ 'ನಾಯಕ' ಎಂಬುದು ಸಂಸ್ಕೃತ ಮೂಲದ ಪದವಾಗಿದ್ದು 'ಮುಂದಾಳು' ಎಂಬ ಅರ್ಥವಿದೆ. ಇಲ್ಲಿ ಸೈನ್ಯದ ಅಥವಾ ದಂಡಿನ 'ಅಧಿಕಾರಿಯೇ' ನಾಯಕ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇಂದು ನೆಲಸಿರುವ ಮರಾಟಿಗರು ಮೂಲತಃ ಶಿವಾಜಿಯ ಸೈನಿಕರಾಗಿದ್ದರು. 'ನಾಯ್ಕ' ಎಂಬುದು ಸೈನ್ಯದಲ್ಲಿ ಒಂದು ಹುದ್ದೆಯ ಹೆಸರು. ಅದನ್ನೇ ಕುಲನಾಮವಾಗಿ ಪರಿವರ್ತಿಸಲಾಗಿದೆ. ಬಳಿಯೇ ಕುಲನಾಮವಾಗಿರಬೇಕಿತ್ತು. ಉದಾ: ಆಗ್ರೇಕಾರ್, ಜಡಿಯಾರ್. ಎಂದು ವಕ್ಕ ಪುತ್ತೂರಿನ ಬಿ ಐತಪ್ಪ ನಾಯ್ಕರ ಅಭಿಪ್ರಾಯವಾಗಿದೆ. ಇದೇ ರೀತಿ ಕುಲನಾಮದ ಬಗ್ಗೆ ಪಿ.ರಾಮಕೃಷ್ಣ ನಾಯ್ಕ ಕಾಸರಗೋಡು ಅವರು

ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ನಾಯ್ಕ ಅನ್ನುವುದು ಕುಲನಾಮವಲ್ಲ. 'ನಾಯ್ಕ' ಎಂಬ ಪದ(Sarname) ಎಲ್ಲಾ ಜಾತಿಗಳಲ್ಲಿಯೂ ಕಡುಬರುತ್ತದೆ ಎಂದು ಹೇಳುತ್ತಾರೆ.

ಮರಾಟಿಗರು ಮೂಲತಃ ಇಂದಿನ ಮಹಾರಾಷ್ಟ್ರ ರಾಜ್ಯದಿಂದ ಬಂದವರು. ಮರಾಠಿಯ ಉಪಭಾಷೆಯೊಂದನ್ನು ಮಾತನಾಡುವುದರಿಂದ 'ಮಹಾರಾಷ್ಟ್ರ' ಮೂಲ ಎಂದು ಹೇಳಿದರೆ ತಪ್ಪಾಗಲಾರದು. ಶಿವಾಜಿಯ ಅಥವಾ ಪೇಶ್ವೆಗಳ ಸೈನಿಕರಾಗಿಯೂ ಇರಲು ಸಾಧ್ಯವಿದೆ. ಸೇನಾದಳದಲ್ಲಿ ನಾಯ್ಕ (ನಾಯಕ್) ಎನ್ನುವ ಹುದ್ದೆಯಲ್ಲಿ ಮರಾಟಿಗರ ಪೂರ್ವಜರು ಸೇವೆ ಮಾಡುತ್ತಿದ್ದುದರಿಂದ ರೂಢಿಗತವಾಗಿ 'ನಾಯಕರು' ಎಂಬ ಪದ ಹೆಸರಲ್ಲಿ ಸೇರಿರಲು ಸಾಧ್ಯವಿದೆ. ವಲಸೆ ಬಂದ ಕಾಲದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ತುಳುವರು ಮರಾಟಿಗರ ಮೂಲ ಇತಿಹಾಸ ತಿಳಿದು 'ಮರಾಟಿ ನಾಯ್ಕರು' ಎಂಬ ನಾಮಪದದಿಂದ ಕರೆಯಲು ಸಾಧ್ಯವಿದೆ.

ಮರಾಟಿಗರ ಹೆಸರಿನ ಮುಂದೆ ನಾಯ್ಕ, (ನ್ಯಾಕ) ಎಂಬ ಕುಲನಾಮವಿದ್ದು ಅವರನ್ನು 'ಮರಾಟಿ ನಾಯ್ಕ' ಎಂಬ ಜಾತಿ ಸೂಚಕ ಪದವಾಗಿ ಬಳಸುತ್ತಾ ಬರಲಾಗಿದೆ. ದಕ್ಷಿಣ ಕನ್ನಡ, ಉಡುಪಿ ಮತ್ತು ಕಾಸರಗೋಡು ಪ್ರದೇಶಗಳಲ್ಲಿ 'ಮರಾಟಿ' ಎಂದಿದ್ದರೆ ಕೊಡಗು ಜಿಲ್ಲೆಯಲ್ಲಿ ಮರಾಠಿ ಎಂದು ಸರ್ಕಾರಿ ದಾಖಲೆಗಳು ತಿಳಿಸುತ್ತವೆ. ೧೯೫೬ರ ಮೈಸೂರು ರಾಜ್ಯದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಪರಿಷ್ಕೃತ ಆದೇಶಿತ ಪಟ್ಟಿಯ III ಭಾಗ VIIIಕ್ರ.ಸಂಖ್ಯೆ ೬ ಮತ್ತು ೭ (ಳ)ರ ಪ್ರಕಾರ ಪರಿಶಿಷ್ಟ ಪಂಗಡದ ಪಟ್ಟಿಗೆ ಸೇರಿಸಲಾಗಿದೆ. ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳನ್ನು ಹೊರತು ಪಡಿಸಿದ ಮರಾಟಿ ಮತ್ತು ಮರಾಠ ಸಮುದಾಯವನ್ನು ಕರ್ನಾಟಕ ಸರಕಾರ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಇರಿಸಿ ಮೀಸಲಾತಿ ಕಲ್ಪಿಸಿದೆ.

**ಸಮುದಾಯದ ಹಿನ್ನೆಲೆ**

ನಡೆದು ಬಂದ ದಾರಿಯನ್ನು ಗುರುತಿಸಲಾಗದೆ ಮುಂದೆ ನಡೆವ ಹಾದಿಯನ್ನು ಗುರುತಿಸಲಾಗದು. ನಾವು ನಮ್ಮವರು ಬದುಕಿದ ಬದುಕುತ್ತಿರುವ ನೆಲೆಗಳನ್ನು ಹುಡುಕಿ ಅರ್ಥೈಸಿಕೊಂಡು ಬದುಕಬೇಕಾದ ನೆಲೆಗಳನ್ನು ಕಂಡುಕೊಳ್ಳುವುದು ಅತ್ಯಗತ್ಯ. ಅಂತೆಯೇ ಹಿಂದಿನ ನಡೆದು ಬಂದ ಹಾದಿಯನ್ನು ತಿಳಿಯುವುದು ಕೂಡ ಅಷ್ಟು ಸುಲಭವಲ್ಲ. ದಿನದಿಂದ ದಿನಕ್ಕೆ ಬದಲಾಗುತ್ತಿರುವ ಇಂದಿನ ಸಮಾಜದಲ್ಲಿ ಒಂದು ಸಮುದಾಯದ ನಿರ್ದಿಷ್ಟವಾದ ನಿಖರವಾದ ಮೂಲವನ್ನು ಕಂಡುಹಿಡಿಯುವುದು ಕಷ್ಟಸಾಧ್ಯ. ಕಾರಣ ಪ್ರತಿಯೊಂದು ಜನಾಂಗ, ಬುಡಕಟ್ಟು ಸಮುದಾಯಗಳು ತಮ್ಮ ಅನುಕೂಲತೆಗೆ ತಕ್ಕಂತೆ ನೆಲೆಗಳನ್ನು ಹುಡುಕಿಕೊಂಡು ಊರಿಂದೂರಿಗೆ ರಾಜ್ಯದಿಂದ ರಾಜ್ಯಕ್ಕೆ ವಲಸೆಹೋಗಿ ಬದುಕುತ್ತಿರುವುದು ಪುರಾತನ ಕಾಲದಿಂದಲೂ ಕಂಡುಬರುತ್ತಿದೆ. ತಮ್ಮ ಮೂಲದ ಬಗ್ಗೆ ಯಾವುದೇ ಬುಡಕಟ್ಟು ಜನಾಂಗ, ಸಮುದಾಯಗಳು ತಲೆಕೆಡಿಸಿಕೊಳ್ಳಲಿಲ್ಲ. ಅವರಿಗೆ ಜೀವನ ನಡೆಸುವುದು ಅನಿವಾರ್ಯವಾಗಿತ್ತು. ಸಂಸಾರದ ಹೊಟ್ಟೆ ತುಂಬಿಸುವುದು ಪ್ರಮುಖ ಉದ್ದೇಶವೂ ಹೌದು. ಹಾಗಾಗಿ ಒಂದೊಂದು ಗುಂಪಾಗಿ ಊರೂರು ಸುತ್ತಿ, ರಾಜ್ಯದಿಂದ ರಾಜ್ಯಕ್ಕೆ ವಲಸೆಹೋಗಿ ಅನುಕೂಲಕರವಾದ ಪ್ರದೇಶವನ್ನು ಆಯ್ದುಕೊಂಡು ನೆಲೆನಿಂತರು. ಅಲ್ಲಿಯೇ ತಮ್ಮ ಕುಟುಂಬದ ಅಭಿವೃದ್ಧಿ ಅವನತಿಗಳನ್ನು ಕಂಡುಕೊಂಡರು.

ಕರಾವಳಿ ಕರ್ನಾಟಕ ಪ್ರದೇಶವನ್ನು ಕರಾವಳಿ, ಮಲೆನಾಡು ಮತ್ತು ಅರೆಮಲೆನಾಡು ಎಂದು ಮೂರು ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ಕರಾವಳಿ ಬಹುತೇಕ ಮೀನುಗಾರಿಕೆ, ಪ್ರವಾಸೋದ್ಯಮಕ್ಕೆ ಮೀಸಲಾದರೆ ಮಲೆನಾಡು, ಅರೆಮಲೆನಾಡು, ಗುಡ್ಡ, ಬೆಟ್ಟ, ಝುರಿ, ಕಾಡುಗಳಿಂದಾವೃತ್ತವಾಗಿದ್ದು ಅನೇಕ ಕೃಷಿ ಬೆಳೆಗಳಿಗೆ ಯೋಗ್ಯವಾಗಿದೆ. ಈ ರೀತಿಯ ಭೌಗೋಳಿಕ ಪರಿಸರವು ವೈವಿಧ್ಯಮಯವಾಗಿದ್ದು ಪ್ರಾಕೃತಿಕ ಸಂಪತ್ತುಗಳಿಂದ ಕೂಡಿದ್ದು ಬುಡಕಟ್ಟು ಸಮುದಾಯಗಳಿಗೆ ಜೀವನೆಲೆಯಾಗಿದೆ. ಈ ಪ್ರದೇಶ ಬಹುರೂಪಿ ಸಂಸ್ಕೃತಿಗಳಿಗೆ ಆಶ್ರಯವನ್ನಿತ್ತಿದೆ. ಎಲ್ಲಾ ಸಂಸ್ಕೃತಿಗಳೂ ಏಕಕಾಲಕ್ಕೆ ಈ ನೆಲದಲ್ಲಿ ಸಮೃದ್ಧಿಯತ್ತ ಹೆಜ್ಜೆಯಿಡುತ್ತಿವೆ. ಭಾಷಿಕವಾಗಿ, ಧಾರ್ಮಿಕವಾಗಿ ತಮ್ಮದೇ ಆದ ಅಸ್ಮಿತೆಗಳನ್ನು ಕಾಯ್ದುಕೊಂಡು ಬಂದಿರುವುದನ್ನು ಕಾಣಬಹುದು. ಇದಕ್ಕೆ ಉದಾಹರಣೆಯೇ ಮರಾಟಿ ಸಮುದಾಯ.

ಮಹಾರಾಷ್ಟ್ರದ ಇತಿಹಾಸವನ್ನು ಪರಾಮರ್ಶಿಸಿದಾಗ ಮಹಾರಾಷ್ಟ್ರದ ಅನೇಕ ಭಾಗಗಳು ಕರ್ನಾಟಕದ ಪ್ರದೇಶಗಳು ಎಂಬುದಾಗಿ ಅನೇಕ ಇತಿಹಾಸಕಾರರು, ಸಂಶೋಧಕರು ದೃಢಪಡಿಸುತ್ತಾರೆ. ಕರ್ನಾಟಕವು ಕಾವೇರಿಯಿಂದಾ ಗೋದಾವರಿ ನದಿ ತಟದವರೆಗೆ ಹಬ್ಬಿತು ಎಂಬುದನ್ನು ಶಾಸನಗಳು ತಿಳಿಸುತ್ತವೆ. ಕ್ರಮೇಣ ಆಡಳಿತಾತ್ಮಕ ಬೆಳವಣಿಗೆಯಿಂದ ಮತ್ತು ಭಾಷಾವಾರು ಪ್ರಾಂತ್ಯ ವಿಂಗಡಣೆಯಿಂದಾಗಿ ಮಹಾರಾಷ್ಟ್ರ ರಾಜ್ಯವಾಗಿದೆ. ಇದರಿಂದ ಇಂದಿನ ಮಹಾರಾಷ್ಟ್ರದ ಅನೇಕ ಜಾತಿ ಸಮುದಾಯಗಳ ಮೂಲ ಕರ್ನಾಟಕ ಎಂದು ಹೇಳಲು ಅವಕಾಶವಿದೆ. ಡಾ.ಜಿ.ಎಸ್.ಉಪಾಧ್ಯ ಅವರು ''ಪ್ರಾಚೀನ ಕರ್ನಾಟಕದ ಇತಿಹಾಸವೇ ಪ್ರಾಚೀನ ಮಹಾರಾಷ್ಟ್ರದ ಇತಿಹಾಸವಾಗಿದೆ. ಇಂದಿನ ಮಹಾರಾಷ್ಟ್ರದ ಬಹುಭಾಗ ಪ್ರಾಚೀನ ಕರ್ನಾಟಕದಲ್ಲಿ ಅಂತರ್ಗತವಾಗಿತ್ತು ಎಂಬುದಕ್ಕೆ ನಮಗೆ ಸಿಗುವ ಮುಖ್ಯ ಆಕರಗಳೆಂದರೆ ಮಹಾರಾಷ್ಟ್ರದ ಕನ್ನಡ ಶಾಸನಗಳು''[೩] ಎಂದು ಅಧ್ಯಯನದ ಮೂಲಕ ದೃಢಪಡಿಸುತ್ತಾರೆ.

ಮರಾಟಿಗರು ಮಹಾರಾಷ್ಟ್ರದಿಂದ ಸುಮಾರು ೧೫-೧೬ನೇ ಶತಮಾನದಲ್ಲಿ ಬಂದಿರಲು ಸಾಧ್ಯವಿದೆ. ಕರಾಡ ಬ್ರಾಹ್ಮಣರು ಮರಾಟಿಗರ ಪುರೋಹಿತರು. ''ಮಹಾರಾಷ್ಟ್ರದ ಕೊಲ್ಲಾಪುರ ಹಾಗೂ ಸತಾರಾಗಳ ನಡುವೆ, ಕರ್ನಾಟಕದ ಗಡಿಯಿಂದ ಸುಮಾರು ೭೦ ಕಿ.ಮೀ. ದೂರದಲಿ ಈಗಲೂ ಕರಾಡವೆಂಬ ಪ್ರದೇಶವಿದೆ. ಕೊಯಿನಾ ನದಿಯ ತೀರದಲ್ಲಿರುವ ಇದು ಪ್ರಾಚೀನ ಕರಹಾಟಕವೇ ಎನ್ನುವುದರಲ್ಲಿ ಎರಡು ಮಾತಿಲ್ಲ''[೪] ಎಂದು ಕರಾಡ ಬ್ರಾಹ್ಮಣರ ಮೂಲದ ಬಗ್ಗೆ ರಾಧಾಕೃಷ್ಣ ಬೆಳ್ಳೂರು ಅವರು ಅಭಿಪ್ರಾಯ ಪಡುತ್ತಾರೆ. ಮುಂದುವರೆದು ''ಪರಿಶಿಷ್ಟ ಪಂಗಡದ ಮರಾಠೀ ನಾಯ್ಕರೂ ಕರಾಡ ಬ್ರಾಹ್ಮಣರೊಂದಿಗೆ ಇಲ್ಲಿಗೆ (ಕಾಸರಗೋಡು) ವಲಸೆ ಬಂದವರು. ಇವರು ಕರಾಡರಂತೆಯೇ ಮರಾಠಿ ಉಪಭಾಷೆಯೊಂದನ್ನು ಆಡುತ್ತಿದ್ದು, ಇದು ಕನ್ನಡಕ್ಕಿಂತ ಹೆಚ್ಚು ತುಳುವಿನ ಪ್ರಭಾವಕ್ಕೆ ಒಳಗಾಗಿದೆ. ನಾಯ್ಕರಿಗೆ ಕರಾಡರೇ ಪುರೋಹಿತರು. ಕರಾಡರ ಮನೆಗಳ ಸಮೀಪದಲ್ಲೇ ಇವರೂ ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ'' ಎಂದು ತಿಳಿಸುತ್ತಾರೆ. ಇದೂ ಕೂಡ ಮರಾಟಿಗರ ಮೂಲ ಮಹಾರಾಷ್ಟ್ರ ಎಂದು ಖಚಿತಪಡಿಸುತ್ತದೆ. ಕರಾಡರು ಕೆಳದಿ ಅರಸರ ಕಾಲದಲ್ಲಿ ಅಂದರೆ ೧೬ನೇ ಶತಮಾನದ ಸುಮಾರಿಗೆ ಕಾಸರಗೋಡಿನಲ್ಲಿ ನೆಲೆನಿಂತಿರಬಹುದೆಂದು ಅಂದಾಜು ಮಾಡುತ್ತಾರೆ. ಹಾಗಾಗಿ, ಕಾಸರಗೋಡಿನ ಮೂಲಕ ಅಥವಾ ಗೋವಾದ ಮೂಲಕ ದಕ್ಷಿಣ ಕನ್ನಡ ಜಿಲ್ಲೆಗೆ ಮರಾಟಿಗರು ವಲಸೆ ಬಂದಿರುವುದು ಖಚಿತವಾಗುತ್ತದೆ.

೧೫-೧೬ನೇ ಶತಮಾನದಲ್ಲಿ ಮರಾಟಿಗರು ವಲಸೆ ಬಂದಿರಬಹುದೆಂಬ ಊಹೆಗೆ ಪುಷ್ಟಿ ದೊರೆಯುವಂತೆ 'ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ' ಗ್ರಂಥದಲ್ಲಿ ಮರಾಟಿಗರ ಬಗೆಗಿನ ಅಪಭ್ರಂಶ ಮಾಹಿತಿಯನ್ನು ನೋಡಲು ಸಾಧ್ಯವಿದೆ. ವಿಜಯನಗರ ಮತ್ತು ಕೆಳದಿನಾಯಕರ ಕಾಲದಲ್ಲಿ ಜಿಲ್ಲೆಯ ದೇವಸ್ಥಾನಗಳ ಸ್ಥಿತಿ-ಗತಿಯ ಬಗೆ ಸಂಶೋಧಕರು ಅಧ್ಯಯನ ಮಾಡಿದ್ದಾರೆ. ಶಾ.ಶ.೧೭೭೭ರಲ್ಲಿ ಮಂಜೇಶ್ವರ ಮದನಂತೇಶ್ವರ ದೇವಸ್ಥಾನಕ್ಕೆ ಸುವರ್ಣ ಕಲಶವನ್ನು ಇಟ್ಟರು. ಇದಕ್ಕೆ ಮೊದಲು ಹಾಳು ಗೆಡವಿದ ಕಾರಣ ನಂತರ ದೇವಸ್ಥಾನವನ್ನು ಸಂಪೂರ್ಣವಾಗಿ ಜೀರ್ಣೋದ್ಧಾರ ಮಾಡಲಾಯಿತು. ದೇವಸ್ಥಾನದ ರಥದ ಕೆಲಸವನ್ನು ವಿವರಿಸುತ್ತಾ ''ರಂಗಭಟ್ಟರು ಮಾಡಿದ ಪಾರ್ಥಸಾರಥಿ ಮತ್ತು ೨ ಕುದುರೆಗಳು ಒಳ್ಳೆ ನಾಜೂಕಾಗಿವೆ. ಬೆಳ್ಳಿಯ ಲಾಲಕಿಯ ಮರದ ಕೆಲಸವೂ ಬಹಳ ಒಳ್ಳೇದಾಗಿದೆ. ಈ ಮರದ ಕೆತ್ತನೆ ಕೆಲಸವನ್ನು ಚಪಟೆಕಾರ ಬಡಿಗೆಯವರೂ ಮರಾಠಿ ಜಾತಿ ಅಣ್ಣಪ್ಪನೂ ಮಾಡಿದರೆಂದು ಹೇಳುತ್ತಾರೆ. ಅಣ್ಣಪ್ಪನು ಮಾಡಿದ ಕಂಬಗಳ ಕೆಲಸವು ಒಳ್ಳೆಯದಾಗಿದ್ದುದರಿಂದ ಅದನ್ನು ಮುಂದುಗಡೆ ಇಟ್ಟಿರುತ್ತಾರೆ.''[೪] ಎಂಬ ದಾಖಲೆಗಳಿವೆ. ಈ ದಾಖಲೆಯಿಂದ ನಮಗೆ ತಿಳಿದುಬರುವುದೇನೆಂದರೆ ಮರಾಟಿಗನೋರ್ವ ಬಂದ ತಕ್ಷಣ ಕೆಲಸ ಪ್ರಾರಂಭಿಸಿ ಅಷ್ಟು ನೈಪುಣ್ಯತೆ ಬರಲಾರದು. ಒಂದು ವೇಳೆ ಮರದ ಕೆಲಸದಲ್ಲಿ ಪ್ರಾವಿಣ್ಯತೆ ಇದ್ದರೂ ತಕ್ಷಣ ದೇವಸ್ಥಾನದ 'ರಥ' ದಂತಹ ಕೆಲಸಕಾರ್ಯಗಳಿಗೆ ಆತನನ್ನು ನೇಮಿಸಿಕೊಳ್ಳಲಾರರು. ಹೀಗಾಗಿ ವಲಸಿಗನಾಗಿ ಬಂದ ಎಷ್ಟೋ ವರ್ಷಗಳು ಸಂದಿರಬೇಕು. ಅಥವಾ ಅಜ್ಜ ಮುತ್ತಜ್ಜರಂಥ ಹಿರಿಯರು ಬಂದು ಜಿಲ್ಲೆಯಲ್ಲಿ ನೆಲೆಸಿರಬೇಕು ಎಂಬ ಊಹನೆಗೆ ಸಾಧ್ಯವಿದೆ. ಇದರಿಂದ ೧೫-೧೬ನೇ ಶತಮಾನದಲ್ಲಿ ಮರಾಟಿಗರು ಈ ತುಳುನಾಡಿಗೆ ವಲಸೆ ಬಂದಿದ್ದಾರೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಶಿವಾಜಿಯ ಆಡಳಿತ ಕಾಲಾವಧಿಯಲ್ಲಿ ಮತ್ತು ಶಿವಾಜಿ ನಂತರದ ಪೇಶ್ವೆಯರ ಕಾಲದಲ್ಲಿ ಮರಾಟಿಗರು ವಲಸೆ ಬಂದಿರಲು ಸಾಧ್ಯವಿದೆ. ಕರಾವಳಿಯ ಬಸರೂರಿಗೂ ಶಿವಾಜಿ ಸೈನ್ಯ ಕ್ರಿ.ಶ.೧೬೬೫ರಲ್ಲಿ ದಾಳಿ ಮಾಡಿದುದನ್ನು ಇತಿಹಾಸ ತಿಳಿಸುತ್ತದೆ. ಹಾಗೆಯೇ ಅನೇಕ ಇತರೆ ಪ್ರದೇಶಗಳಿಗೆ ದಾಳಿ ಮಾಡಿ ರಾಜರುಗಳಿಂದ, ಸಾಮಂತರುಗಳಿಂದ ಕಪ್ಪ ಕಾಣಿಕೆಗಳನ್ನು ಪಡೆದುದನ್ನು ಕೂಡ ಇತಿಹಾಸಗಳು ತಿಳಿಸುತ್ತವೆ. ಈ ದಾಳಿಯ ಸಂದರ್ಭದಲ್ಲಿ ಔರಂಗಜೇಬನು ಶಿವಾಜಿಯ ಮೇಲೆ ದಂಡೆತ್ತಿ ಬಂದಾಗ ಅನೇಕ ಮರಾಠ ಸೈನಿಕರು ಕರ್ನಾಟಕ ಕರಾವಳಿ ಮತ್ತು ಇತರ ಪ್ರದೇಶಗಳಿಗೆ ಬಂದು ನೆಲೆಯೂರಲು ಸಾಧ್ಯವಿದೆ. ಹಾಗೆಯೇ ಗೋವಾ ರಾಜ್ಯಕ್ಕೂ ವಲಸೆ ಹೋಗಿರಲು ಸಾಧ್ಯವಿದೆ. ಗೋವಾ ಕಾರವಾರ ಪ್ರದೇಶಗಳಲ್ಲಿ ಇತರೆ ವಿದೇಶಿಗರಿಂದ ಮತಾಂತರದ ಸಂಕಷ್ಟಕ್ಕೂ ಸಿಲುಕಿ ದಕ್ಷಿಣದ ಕೇರಳ ರಾಜ್ಯಕ್ಕೂ ಬಂದಿರುವುದನ್ನು ಇತಿಹಾಸಗಳಿಂದ ತಿಳಿಯಬಹುದು.

ಕನ್ನಡ ಜಾನಪದ ವಿಶ್ವಕೋಶ ಸಂಪುಟ ೨ರಲ್ಲಿ ಮರಾಟಿಗರನ್ನು ಈ ರೀತಿ ಪರಿಚಯಿಸಲಾಗಿದೆ.

''ಮರಾಠರು ಯೋಧರಾಗಿ ಅಥವಾ ಸೈನ್ಯ ಶಿಬಿರದ ಹಿಂಬಾಲಕರಾಗಿ ದಕ್ಷಿಣ ಭಾರತಕ್ಕೆ ಬಂದರಂತೆ. ಇವರು ಅಬ್ರಾಹ್ಮಣರು. ಇವರ ದೇವತೆ 'ಮಹಾದೇವಿ'. ಬ್ರಾಹ್ಮಣರನ್ನು ಇವರು ಪುರೋಹಿತರನ್ನಾಗಿ ಆಮಂತ್ರಿಸುತ್ತಾರೆ. ಮರಾಠೀಗಳು ರೈತರು, ಶ್ರಮಜೀವಿಗಳು ಅಥವಾ ಬೇಟೆಗಾರರಾಗಿರುತ್ತಾರೆ.''[೫] ಮೂಲದ ಬಗ್ಗೆ ಸರಿಯಾಗಿಯೇ ಗುರುತಿಸಿದ್ದಾರೆ.

ಮರಾಟಿಗರು ಇಂದು ದಕ್ಷಿಣ ಕನ್ನಡ, ಉಡುಪಿ, ಕೊಡಗು ಮತ್ತು ಕಾಸರಗೋಡು ಜಿಲ್ಲೆಯಲ್ಲಿ ನೆಲೆಸಿರಬಹುದು. ಆದರೆ ಮೂಲತಃ ಇಲ್ಲಿಯವರಲ್ಲ ಎಂಬುದು ಎಲ್ಲಾ ವಿದ್ವಾಂಸರು ಇತಿಹಾಸಕಾರರ ಸ್ಪಷ್ಟ ಅಭಿಪ್ರಾಯಗಳಾಗಿವೆ. ಈ ನಿಟ್ಟಿನಲ್ಲಿ ವಿದ್ವಾಂಸರ, ಸಂಶೋಧಕರ ಮಾತಿಗೆ ಬೆಲೆ ಬರುವಂತೆ ಮರಾಟಿಗರು ಮೂಲತಃ ಇಂದಿನ ಮಹಾರಾಷ್ಟ್ರದವರು, ಮರಾಠಿ ಭಾಷೆಯ ಉಪಭಾಷೆಯನ್ನಾಡುತ್ತಾರೆ. ಮೂಲತಃ ಮಹಾರಾಷ್ಟ್ರದ ಅಂಬಾಭವಾನಿ, ಮಹಮ್ಮಾಯಿಯ 'ಗೋಂದೋಳು' ಆಚರಣೆ ಇವರಲ್ಲಿದೆ. ತುಳುನಾಡಿನ ಮೂಲದವರಾಗಿದ್ದರೆ, ಅವರ ಬಗೆಗೆ ತುಳುನಾಡಿನ ಅಧಿಕೃತ ಶಾಸನಗಳೆಂದು (ಮೌಖಿಕ) ಕರೆಯಲ್ಪಡುವ ಪಾಡ್ದನಗಳಲ್ಲಿ ದಾಖಲಾಗುತ್ತಿತ್ತು. ಹಾಗಾಗಿ ಒಂದು ಅಂದಾಜಿನ ಪ್ರಕಾರ ೧೪-೧೬ನೇ ಶತಮಾನದಲ್ಲಿ ಈ ಜಿಲ್ಲೆಗಳಿಗೆ ಮರಾಟಿಗರ ವಲಸೆಯಾಗಿದ್ದಿರಬೇಕು.

ಕೆಲವು ವಿದ್ವಾಂಸರು ಮರಾಟಿಗರಿಗೂ ಮರಾಠಿ ಕುಣಬಿಗರಿಗೂ ಸಂಬಂಧವಿರಬೇಕು ಎಂದು ವಾದಿಸುತ್ತಾರೆ. ಆದರೆ ಮರಾಟಿಗರಿಗೂ ಮರಾಠಿ ಕುಣಬಿಯರಿಗೂ ಯಾವುದೇ ಸಂಬಂಧವಿರಲಾರದು. ಯಾಕೆಂದರೆ ಅಂತಹ ಸಂಬಂಧವಿದ್ದರೆ ಹತ್ತಿರದ ಅವಿಭಜಿತ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡದಲ್ಲಿ ನೆಲೆಸಿರುವ ಈ ಎರಡು ಸಮುದಾಯದ ಮಧ್ಯೆ ವೈವಾಹಿಕ ಸಂಬಂಧವೇರ್ಪಡುತ್ತಿತ್ತು. ಹಾಗಾಗಿಲ್ಲ. ಅದಕ್ಕೂ ಮುಖ್ಯವಾಗಿ ಈ ಎರಡೂ ಸಮುದಾಯದ ಬಳಿಗಳನ್ನು ಅವಲೋಕಿಸಿದರೆ ಸತ್ಯ ಗೋಚರವಾಗುವುದು, ಕುಣಬಿಗಳು ಮೂಲತಃ ಸೈನಿಕರೂ ಆಗಿದ್ದು ರಾಜಪೂತ ವಂಶದಲ್ಲಿದ್ದರು ಎಂದು ತಿಳಿಯಬಹುದಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಯಾರೂ ಕೂಡ 'ಕುಣಬಿ'ಯರು ಮಧ್ಯೆ ಸಂಬಂಧವಿರುವುದನ್ನು ತಳ್ಳಿಹಾಕುತ್ತಾರೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಬಹುತೇಕ ವಕ್ತೃಗಳ ಅಭಿಪ್ರಾಯದಂತೆ ''ಮರಾಟಿಗರ ತಮ್ಮ ವಂಶದ ಮುಖ್ಯಸ್ಥನಾದ ಶಿವಾಜಿ ಮಹಾರಾಜ ಯುದ್ಧದಲ್ಲಿ ಸೋತಾಗ ಶಾಸ್ತ್ರಾಸ್ತ್ರಗಳನ್ನು ಎಸೆದು ಈ ಕರಾವಳಿ ಪ್ರದೇಶಕ್ಕೆ ಬಂದು ಕಾಡು, ಗುಡ್ಡ, ಬೆಟ್ಟಗಳಲ್ಲಿ 'ಕುಮೇರಿ' ಕೃಷಿ ಮಾಡಿಕೊಂಡು ಬಂದವರು'' 'ಕುಮೇರಿ ಕೃಷಿ'ಗೆ ರೈತರೇ ಸಾಕ್ಷಿಗಳಾಗಿದ್ದಾರೆ. ಕರಾವಳಿಯ ಗುಡ್ಡಗಾಡು ಪ್ರದೇಶಗಳಲ್ಲಿ ಮರಾಟಿಗರೇ ವಾಸಿಸುತ್ತಿದ್ದು ಭತ್ತದ ಬೆಳೆಯನ್ನು ಇತ್ತೀಚಿನವರೆಗೂ ಮಾಡಿಕೊಂಡು ಬಂದಿದ್ದಾರೆ.

**ಭೌಗೋಳಿಕ ನೆಲೆ**

ಒಂದು ಭಾಷೆಯ ಮೂಲಕ ಕರ್ನಾಟಕದಲ್ಲಿ ಗುರುತಿಸಲ್ಪಡುವ ಭೂಭಾಗಗಳು ಎರಡು, ಅವಿಭಜಿತ ದಕ್ಷಿಣ ಕನ್ನಡ ಮತ್ತು ಕೊಡಗು, ಕರ್ನಾಟಕದ ಕರಾವಳಿಯ ಬಹುತೇಕ ಭೂಭಾಗಗಳನ್ನು ಹೊಂದಿರುವ ಈ ಅವಿಭಜಿತ ಜಿಲ್ಲೆ ಈಗಿನ ಭೌಗೋಳಿಕ ವಿನ್ಯಾಸದಲ್ಲಿ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳೆಂದು ಹೆಸರಿಸಬಹುದಾದರೂ ಅನನ್ಯತೆಯ ದೃಷ್ಟಿಯಲ್ಲಿ ಇದನ್ನು ತುಳುನಾಡು ಎಂದು ಕರೆಯುವುದೇ ಸೂಕ್ತ. ಕರಾವಳಿಯ ದ.ಕ.ಜಿಲ್ಲೆಯ ಭೂಭಾಗವು ಪಶ್ಚಿಮ ಘಟ್ಟದ ಪೂರ್ವ ಭಾಗದಲ್ಲಿನ ಕರ್ನಾಟಕದ ಪ್ರದೇಶಕ್ಕಿಂತ ಭಿನ್ನವಾಗಿದೆ. ಸಾಮಾಜಿಕವಾಗಿ ಸಾಂಸ್ಕೃತಿಕವಾಗಿ ಮತ್ತು ಭೌಗೋಳಿಕವಾಗಿಯೂ ಕರಾವಳಿಯ ಸಮೀಪದ ಕೇರಳವನ್ನು ಹೆಚ್ಚು ಹೋಲುತ್ತದೆ ಎಂದು ಹೇಳಬಹುದು.

ದಕ್ಷಿಣ ಕನ್ನಡ ಎಂಬುದು ಈಗಿನ ಹೆಸರು. ಹಿಂದೆ ಈ ಪ್ರದೇಶವು ಹಲವಾರು ಹೆಸರುಗಳಿಂದ ಕರೆಯಲ್ಪಡುತ್ತಿತ್ತೆಂಬ ವಿಚಾರ ಬೇರೆ ಬೇರೆ ಮೂಲಗಳಿಂದ ತಿಳಿದುಬರುತ್ತದೆ. ಇಲ್ಲಿ ವಾಸಿಸುತ್ತಿದ್ದ ಜನಾಂಗದ ಆಧಾರದಲ್ಲಿ ತುರುನಾಡು, ತುಳುನಾಡು, ಮತ್ತು ಪೌರಾಣಿಕ ಮೂಲವಾದ ಐತಿಹ್ಯಗಳಿಂದ ಪರಶುರಾಮ ಕ್ಷೇತ್ರ, ತುಳುವ, ತೌಳವ ಎಂಬ ಹೆಸರುಗಳಿಂದಲೂ ಗುರುತಿಸಲಾಗುತ್ತಿತ್ತು.

ಕರ್ನಾಟಕದ ಭೂಪಟದ ೭೪: ೬ ಯಿಂದ ೭೫.೬ ಪೂರ್ವ ರೇಖಾಂಶ ಮತ್ತು ೧೨.೫ಯಿಂದು ೧೩.೮೯ ಉತ್ತರ ಅಕ್ಷಾಂಶದಲ್ಲಿರುವ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ಹಚ್ಚ ಹಸುರಿನಿಂದ ಕೂಡಿದ ಪ್ರದೇಶ. ಒಂದು ಭಾಗದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಪಶ್ಚಿಮ ಘಟ್ಟಗಳು ಸಾಲಾಗಿ ಚಾಚಿವೆ. ಮತ್ತೊಂದು ಭಾಗದಲ್ಲಿ ವಿಶಾಲ ಸಮುದ್ರ ಇದ್ದರೆ ಮಧ್ಯೆ ಬೆಟ್ಟ, ಗುಡ್ಡಗಳಲ್ಲಿ ವಿವಿಧ ಅಸಂಖ್ಯಾತ ಜಾತಿಯ ಗಿಡ ಮರ ಬಳ್ಳಿಗಳು ತುಂಬಿವೆ. ೨೦-೨೫ ವರ್ಷಗಳ ಹಿಂದೆ ಇದ್ದಂತಹ ಗೊಂಡಾರಣ್ಯಗಳು ಇಂದು ಕಾಣಲಾರದು. ಅಂದು ವರ್ಷದ ಎಲ್ಲಾ ದಿನಗಳಲ್ಲಿ ಹರಿಯುತ್ತಿದ್ದ ನದಿ ಹೊಳೆ, ತೋಡುಗಳು ಇಂದು ಕೆಲವೇ ತಿಂಗಳುಗಳು ಮಾತ್ರ ಹರಿಯುತ್ತವೆ. ೨೫-೫೦ ವರ್ಷಗಳ ಹಿಂದಿನ ದಕ್ಷಿಣ ಕನ್ನಡಕ್ಕೆ ಇಂದಿನ ದಕ್ಷಿಣ ಕನ್ನಡದ ಚಿತ್ರಣಕ್ಕೂ ಅಜಗಜಾಂತರವಿದೆ. ತುಳುನಾಡೆಂದು ಕರೆಯಲ್ಪಡುವ ಈ ಪ್ರದೇಶ ಉಡುಪಿ, ಕಾರ್ಕಳ, ಮಂಗಳೂರು, ಬಂಟ್ವಾಳ, ಪುತ್ತೂರು, ಬೆಳ್ತಂಗಡಿ, ಸುಳ್ಯ ಹಾಗೂ ಈಚೆಗೆ ಕೇರಳ ರಾಜ್ಯಕ್ಕೆ ಸೇರಿದ ಕಾಸರಗೋಡು ತಾಲೂಕುಗಳ ಬಹುಭಾಗ ತುಳುಭಾಷಾ ವಲಯಕ್ಕೆ ಸೇರುತ್ತವೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅನೇಕ ಜಾತಿ-ಉಪಜಾತಿಗಳು ಜನರು ಹಿಂದಿನಿಂದಲೂ ವಾಸಿಸುತ್ತಾ ಬಂದಿದ್ದಾರೆ. ಬೈದ್ಯರು, ಮೊಗವೀರ, ಬಂಟರು, ಶಿವಳ್ಳಿ ಬ್ರಾಹ್ಮಣರು, ಸ್ಥಾನಿಕ ಬ್ರಾಹ್ಮಣರು, ಜೈನರು, ವಿಶ್ವಕರ್ಮರು, ಗೌಡರು, ಪ್ರೊಟೆಸ್ಟೆಂಟ್ ಕ್ರೈಸ್ತರು. ದೇವಾಡಿಗರು. ಮೂಲ್ಯರು, ಗಾಣಿಗರು, ಪರವರು, ಪಂಬದರು, ಕೊರಗರು, ನಲಿಕೆಯವರು, ಮರಾಟಿಗರು, ಹೀಗೆ ಅನೇಕ ಭಿನ್ನ ಭಿನ್ನ ಸಂಸ್ಕೃತಿಗಳ, ಜನರು ಜೀವನ ಸಾಗಿಸುತ್ತಿದ್ದಾರೆ. ಬುಡಕಟ್ಟುಗಳ ಪಟ್ಟಿಯಲ್ಲಿದ್ದು ಜಿಲ್ಲೆಯಲ್ಲಿರುವವರೆಂದರೆ ಕಮ್ಮಾರ, ಕೊರಗ, ಮಲೆಕುಡಿಯ ಮತ್ತು ಮರಾಠಿ (ಮರಾಟಿ). ಅವಿಭಜಿತ ದಕ್ಷಿಣ ಕನ್ನಡದಲ್ಲಿ ಪರಿಶಿಷ್ಟ ಜಾತಿ (sheduled caste)ಯ ಸುಮಾರು ೨೨ ಉಪಜಾತಿಗಳಿದ್ದಾವೆ.[೬]

ದಕ್ಷಿಣ ಕನ್ನಡ ಜಿಲ್ಲೆಯ ಪಶ್ಚಿಮ ಭಾಗದಲ್ಲಿ ನಿತ್ಯಹರಿದ್ವರ್ಣದ ಕಾಡುಗಳೆನಿಸಿದ ಪಶ್ಚಿಮ ಘಟ್ಟದ ಅರಣ್ಯಗಳಿವೆ. ಜಿಲ್ಲೆಯ ಮಂಗಳೂರು ತಾಲೂಕು ಕಡಲ ತೀರವನ್ನು ಹೊಂದಿದ್ದರೆ ಸುಳ್ಯ ಪುತ್ತೂರು ಬಂಟ್ವಾಳ ತಾಲೂಕುಗಳು ಗುಡ್ಡ ಬೆಟ್ಟ ಇಳಿಜಾರುಗಳಿಂದ ಕೂಡಿದೆ. ಜಿಲ್ಲೆಯ ಕಾಡುಗಳು ಅನೇಕ ಉತ್ಪನ್ನಗಳಿಂದ ಸಮೃದ್ಧವಾಗಿದ್ದು ಬುಡಕಟ್ಟುಗಳಿಗೆ ಸಹಕಾರಿಯಾದ ನೆಲೆಯಾಗಿದೆ. ಇಂತಹ ಭೌಗೋಳಿಕ ನೆಲೆಯಿದ್ದುದರಿಂದಲೇ ಮರಾಟಿಗರಂತಹ ಬುಡಕಟ್ಟುಗಳು ನೆಲೆಯೂರಲು ಸಾಧ್ಯವಾಯಿತು.

## ವಲಸೆ ಮತ್ತು ವಿಕಾಸ

ಈಗಾಗಲೇ ಅಧ್ಯಯನದಲ್ಲಿ ಪ್ರಸ್ತಾಪಿಸಿದಂತೆ ದಕ್ಷಿಣ ಕನ್ನಡ ಜಿಲ್ಲೆಗೆ ಮರಾಟಿಗರು ವಲಸೆ ಬಂದವರು. ಮಹಾರಾಷ್ಟ್ರ ನಿರಂತರವಾಗಿ ಮುಸ್ಲಿಂ ದಾಳಿಗೆ ತುತ್ತಾಗುತ್ತಲೇ ಇದ್ದ ಕಾರಣ ಮರಾಟಿಗರು ಮಹಾರಾಷ್ಟ್ರ ಬಿಟ್ಟು

ಇತರ ರಾಜ್ಯಗಳಾದ ಗೋವಾ, ಕರ್ನಾಟಕದತ್ತ ಬಂದಿಂದ್ದಾರೆ. ಕ್ರಿ.ಶ ೧೭೦೦ ರ ಸುಮಾರಿನಲ್ಲಿ ಮರಾಠರು ಗೋವೆಗೆ ನುಗ್ಗಿ ಬಂದರು ಎಂಬುದನ್ನು ಇತಿಹಾಸ ತಿಳಿಸುತ್ತದೆ. ಏಕಕಾಲದಲ್ಲಿ ವಲಸೆ ಹೋಗದೆ, ವಲಸೆ ನಿರಂತರವಾಗಿತ್ತು ಎಂದು ಹೇಳಬಹುದು.

ಕೆಲವು ವಕ್ತೃಗಳ ಪ್ರಕಾರ ಮಹಾರಾಷ್ಟ್ರದಲ್ಲಿ ಆಗಿಂದಾಗ್ಗೆ ಬರಗಾಲದ ಕರಿಛಾಯೆ ಆಗುತ್ತಿತ್ತು. ಸರಿಯಾದ ಸಮಯಕ್ಕೆ ಸಮರ್ಪಕವಾಗಿ ಮಳೆ-ಬೆಳೆಯಾಗದೇ ಜನರು ಕಂಗಾಲಾದಾಗ ಬೇರೆ ದಾರಿಯಿಲ್ಲದೆ ನೆರೆಯ ಕರ್ನಾಟಕ, ಗೋವಾ ರಾಜ್ಯಗಳಿಗೆ ವಲಸೆ ಬರಲು ಸಾಧ್ಯವಿದೆ. ಈ ರೀತಿಯಾಗಿ ಮರಾಟಿಗರೂ ಕೂಡ ಕರ್ನಾಟಕಕ್ಕೆ ಬಂದಿರಬಹುದು ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಮರಾಟಿಗರು ವಲಸೆ ಬಂದ ಸಂದರ್ಭದಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಮತ್ತು ಈ ಭಾಗದ ಕರಾವಳಿ ಪ್ರದೇಶ ದಟ್ಟವಾದ ಅರಣ್ಯಗಳಿಂದ ಕೂಡಿದ್ದುದನ್ನು ಅನೇಕ ಹಿರಿಯ ಮರಾಟಿಗರು ದೃಢಪಡಿಸುತ್ತಾರೆ. ಇದೇ ಸಂದರ್ಭದಲ್ಲಿ ಜಿಲ್ಲೆಯ ಸುಳ್ಯ, ಪುತ್ತೂರು ಪರಿಸರದಲ್ಲಿ ಒಕ್ಕಲಿಗ ಗೌಡರೂ ಬಯಲು ಸೀಮೆಯಿಂದ ವಲಸೆ ಬಂದು ನೆಲೆಯೂರುತ್ತಿದ್ದರು. ಒಟ್ಟಾರೆಯಾಗಿ ಎಲ್ಲಾ ಸಮುದಾಯದವರೂ ಕಾಡುಗಳನ್ನು ಕಡಿದು ಅಡಿಕೆ ತೋಟ, ಗದ್ದೆಗಳನ್ನು ನಿರ್ಮಿಸುವಲ್ಲಿ ಸಫಲರಾಗಿದ್ದರು. ಇದೇ ಸಂದರ್ಭದಲ್ಲಿ ಗುಡ್ಡ ಬೆಟ್ಟಗಳ ಅಂಚಿನಲ್ಲಿ ಕುಮೇರಿ ಕೃಷಿ ಮಾಡುತ್ತಿದ್ದ ಮರಾಟಿಗರನೇಕರು ತಾವು ಕಾಡು ಕಡಿದು ಕೃಷಿ ಭೂಮಿಯನ್ನು ಹೊಂದಿದರು. ಕ್ರಮೇಣ ಬದಲಾವಣೆಯ ಹಾದಿಯನ್ನು ತುಳಿದರು ಎಂದು ಹೇಳಬೇಕು. ಈ ಕಾಡು ಕಡಿದು ಜಮೀನು ಒತ್ತುವರಿ ಮಾಡಿಕೊಳ್ಳುವ ಸಂದರ್ಭಗಳಲ್ಲಿ ಇತರ ಸಮುದಾಯಗಳ ಜೊತೆ ಸಂಘರ್ಷಗಳಾಗಿರುವುದಕ್ಕೆ ಕೊರತೆ ಇಲ್ಲ ಎಂದು ಅನೇಕ ಹಿರಿಯರು ನೆನಪಿಸುತ್ತಾರೆ. ಈ ರೀತಿಯ ಸಂಘರ್ಷಗಳಲ್ಲಿ ಎದೆ ಕೊಟ್ಟು ಎದುರಿಸಿದವರು ಬೆರಳೆಣಿಕೆಯವರಾದರೆ ಸೋತು ಜಮೀನು ಕಳೆದುಕೊಂಡವರು ಅನೇಕರು. ಹಾಗಾಗಿ ವಿಕಾಸದ ಹಾದಿಯಲ್ಲಿ ಮರಾಟಿಗರ ಪರಿಶ್ರಮ ಮಹತ್ವದ್ದಾಗಿದೆ.

ಮರಾಟಿಗರಿಗೆ ಪ್ರಕೃತಿ ಪರಿಸರದೊಂದಿಗೆ ಇನ್ನಿಲ್ಲದ ನಂಟು. ಅಲ್ಲಿಂದಲೇ ಬದುಕುವ ದಾರಿಯನ್ನು ಕಂಡುಕೊಂಡವರು. ಅನಕ್ಷರಸ್ಥರಾಗಿದ್ದರೂ ಸಾಹಸಿಗಳೂ, ನಿಷ್ಠಾವಂತರೂ ಆಗಿದ್ದರು ಎಂಬುದನ್ನು ಇತರೆ ಸಮುದಾಯದವರೂ ಒಪ್ಪಿಕೊಳ್ಳುತ್ತಾರೆ. ಪ್ರತಿಯೊಂದು ಕೃಷಿ ಕೆಲಸಗಳನ್ನು ಅರಿತಿದ್ದ ಮರಾಟಿಗರು ತಮ್ಮ ಹೊಟ್ಟೆಪಾಡಿಗಾಗಿ ದಕ್ಷಿಣ ಕನ್ನಡದ ಭೂಮಾಲಿಕರ ಭೂಮಿಯಲ್ಲಿ ತೋಟಗಳಲ್ಲಿ ಆಯುಷ್ಯ ಪೂರ್ತಿ ದುಡಿದವರು. ಬಿಡಿಗಾಸನ್ನು ಗಳಿಸಿದ್ದು ಬಿಟ್ಟರೆ ಪಡೆದುಕೊಂಡು ಬಂದಿದ್ದು ಬಡತನ ಮತ್ತು ಅನಾರೋಗ್ಯವನ್ನು. ೧೯೭೧ ರಲ್ಲಿ ಜಿಲ್ಲೆಯಲ್ಲಿ ಭೂಮಸೂದೆ ಕಾಯಿದೆ ಜಾರಿಗೆ ಬಂದಾಗ ಬೆರಳೆಣಿಕೆಯ ಕುಟುಂಬಗಳಿಗೆ ಅನುಕೂಲವಾಯಿತು. ಇಂದೂ ಜಿಲ್ಲೆಯಲ್ಲಿ ಅನೇಕ ಮರಾಟಿ ಕುಟುಂಬಗಳು ಭೂಮಾಲಿಕರ ಭೂಮಿಯಲ್ಲಿ ಕೆಲಸ ಮಾಡುತ್ತಾ ಬಡತನದಲ್ಲಿಯೇ ಜೀವಿಸುತ್ತಿದ್ದಾರೆ. ಅದರ ಜೊತೆಗೆ ಅನೇಕ ಮರಾಟಿ ಯುವಕರು, ವಯಸ್ಕರು ಮದ್ಯಪಾನದ ಚಟಕ್ಕೆ ಬಲಿಯಾಗಿ, ಕುಟುಂಬ ಸಂಸಾರದ ಗತಿ ಅಧೋಗತಿಗಿಳಿದಿದೆ. [ಜಿಲ್ಲೆಯ ಆರ್ಥಿಕತೆಯ ಮೂಲ ಕೃಷಿಯ ಅಭಿವೃದ್ಧಿಯಲ್ಲಿ ಮರಾಟಿಗರದು ಪಾತ್ರ ಅತೀ ಮಹತ್ವದ್ದಾಗಿದೆ.]

೧೯೩೦ ರಲ್ಲಿ ಬ್ರಿಟಿಷರು ಸ್ವಾತಂತ್ರ್ಯ ಚಳುವಳಿಯನ್ನು ತಡೆಗಟ್ಟಲು ತಮ್ಮ ಆಳ್ವಿಕೆಯನ್ನು ತುಸು ಸಡಿಲಿಸಿ ಜನಪರ ಧೋರಣೆಯನ್ನು ಅಳವಡಿಸಲು ಮುಂದಾದರು. ಒಡತನದಲ್ಲಿರುವ ಸಮಾಜದಲ್ಲಿ ಜಾತಿ ಪಂಗಡಗಳನ್ನು ಗುರುತಿಸಿ 'ಮೀಸಲಾತಿ' ಯೋಜನೆಯನ್ನು ಜಾರಿಗೊಳಿಸಿದರು. ದಕ್ಷಿಣ ಕನ್ನಡ ಜಿಲ್ಲೆ ಮದ್ರಾಸು ಪ್ರಾಂತ್ಯದಲ್ಲಿದ್ದು, ಜಿಲ್ಲೆಯ ಮರಾಟಿಗರನ್ನು (Dipressed Class) ಎಂದು ನಮೂದಿಸಿ ಶಿಕ್ಷಣ ಮತ್ತು ಕೃಷಿಗಾಗಿ ಜಮೀನು ಮಂಜೂರು ಮಾಡುವ ವಿಶೇಷ ಸೌಲಭ್ಯವನ್ನು ನೀಡಿದರು. ಆ ಕಾರಣದಿಂದ ಮರಾಟಿಗರನೇಕರಿಗೆ ದರ್ಖಾಸ್ತು ಜಮೀನುಗಳು ಲಭ್ಯವಾದವು, ಆಗ ತಾನೆ ಮೂರನೇ ಮಹಾಯುದ್ಧ ಆರಂಭವಾದುದರಿಂದ ಜಮೀನು ಮಂಜೂರು ಮಾಡುವುದನ್ನು ನಿಷೇದಿಸಲಾಯಿತು.

ಸ್ವಾತಂತ್ರ್ಯಾನಂತರ ೧೯೪೯-೫೦ ರಲ್ಲಿ ಕೇಂದ್ರ ಸರ್ಕಾರ ಮೀಸಲಾತಿ ಸೌಲಭ್ಯ ಒದಗಿಸುವ ಸಲುವಾಗಿ ಹೊಸಪಟ್ಟಿ ತಯಾರಿಸಲು ನಿರ್ಧರಿಸಿ ಪ್ರಸಿಡೆಂಟ್ ಕಮೀಶನ್ ಒಂದನ್ನು 'ಕಾಕ್ ಕಲೇಲ್ಕರ್' ಎಂಬ ಪ್ರಸಿದ್ಧ ಮಹಾರಾಷ್ಟ್ರದ ಸಮಾಜ ಸೇವಕರನ್ನು ಅದರ ಅಧ್ಯಕ್ಷರನ್ನಾಗಿ ನೇಮಿಸಿತು. ಇದೇ ಸಂದರ್ಭದಲ್ಲಿ ಜಿಲ್ಲಾ ಸಮಾಜಾಭಿವೃದ್ಧಿ ಅಧಿಕಾರಿಯಾಗಿ ಮರಾಟಿಗರೇ ಆದ ಶ್ರೀ ಪುತ್ತೂರು ವೆಂಕಪ್ಪ ಅವರು ಮತ್ತು ಜಿಲ್ಲಾ ಕಲೆಕ್ಟರ್ ರಾಮದಾಸ ಎಂಬುವರು ಇದ್ದರು. ಮರಾಟಿಗರು ತಮ್ಮ ಸಂಘದ ಮೂಲಕ ಕೇಂದ್ರ ಸರ್ಕಾರಕ್ಕೆ ಮೀಸಲಾತಿ ವಿಶೇಷ ಸೌಲಭ್ಯಗಳನ್ನು ಒದಗಿಸುವ ಪಟ್ಟಿಯಲ್ಲಿ ಸೇರಿಸಲು ಮನವಿಯನ್ನು ತಯಾರಿಸಿ ಕಲೆಕ್ಟರ್‌ಗೆ ಒಪ್ಪಿಸಿದರು. ಪ್ರಸಿಡೆಂಟ್ ಕಮೀಷನ್ ೧೯೫೫ರಲ್ಲಿ ಜಿಲ್ಲೆಗೆ ಬೇಟಿ ನೀಡಿತು. ಇದೇ ಸಂದರ್ಭದಲ್ಲಿ ಹಿರಿಯ ಮರಾಟಿಗರೆಲ್ಲರೂ ಮತ್ತೊಂದು ಮನವಿಯನ್ನು ಸಲ್ಲಿಸಿದಾಗ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮರಾಟಿ ಸಮಾಜ ಇರುವುದನ್ನು ತಿಳಿದು ಆಶ್ಚರ್ಯ ವ್ಯಕ್ತಪಡಿಸುತ್ತಾ ಭರವಸೆ ಇತ್ತರು. ಮುಂದೆ ೧೯೫೬ರ ಮೈಸೂರು ರಾಜ್ಯದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಪರಿಷ್ಕೃತ ಆದೇಶಿತ ಪಟ್ಟಿಯ IIIಭಾಗ VIII ಕ್ರ. ಸಂಖ್ಯೆ ೬ ಮತ್ತು ೨ (೪) ರ ಪ್ರಕಾರ ಮರಾಟಿಗರನ್ನು ಪರಿಶಿಷ್ಟ ಪಂಗಂಡದ ಪಟ್ಟಿಗೆ ಸೇರಿಸಲಾಯಿತು.

**ಜಾತಿ ಮತ್ತು ಬುಡಕಟ್ಟು ಸಮುದಾಯ**

ಮಾನವಶಾಸ್ತ್ರ ಮತ್ತು ಸಮಾಜಶಾಸ್ತ್ರಗಳು ಒಂದು ಬುಡಕಟ್ಟು ಸಮುದಾಯ ಭಾರತದಲ್ಲಿಯ ಹಿಂದೂ ಸಮಾಜಕ್ಕಿಂತ  ವ್ಯತಿರಿಕ್ತವಾಗಿರುತ್ತದೆ ಎಂದು ತಿಳಿಸುತ್ತವೆ. ಬುಡಕಟ್ಟುಗಳು ಪ್ರಕೃತಿಯ ಪರಿಸರದ ಆರಾಧಕರು, ಯಾವುದೇ ದೇವ-ಮೂರ್ತಿ ಪೂಜೆಯಲ್ಲಿ ನಂಬಿಕೆಯುಳ್ಳವರಲ್ಲ ಎಂದು ಮಾನವಾಶಾಸ್ತ್ರಜ್ಞರು ವಿಶ್ಲೇಷಿಸುತ್ತಾರೆ. ಯಾವುದೇ ಬುಡಕಟ್ಟು ತನ್ನದೇ ಆದ ನಿರ್ದಿಷ್ಟ ಕಾಯಕವನ್ನು ಹೊಂದಿಲ್ಲ ಅವರು ಪ್ರಕೃತಿಯನ್ನು ವಾತಾವರಣವನ್ನು ಹೊಂದಿಕೊಂಡು ಜೀವನ ನಡೆಸುವರು ಎಂದು ತಿಳಿಸುತ್ತಾರೆ ಸಮಾಜಶಾಸ್ತ್ರಜ್ಞರು. ೧೯೫೨ರ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳ ಆಯೋಗವು ಬುಡಕಟ್ಟುಗಳ ಎಂಟು (೮) ಲಕ್ಷಣಗಳನ್ನು ಪಟ್ಟಿಮಾಡಿದೆ.

ಆ ಲಕ್ಷಣಗಳು ಈ ರೀತಿಯಾಗಿವೆ.

೧. ಬುಡಕಟ್ಟು ಜನರು ನಾಗರಿಕ ಸಮುದಾಯದಿಂದ ದೂರವಿದ್ದು ಕಾಡು ಮತ್ತು ಬೆಟ್ಟಗಳಲ್ಲಿ ಬದುಕುವವರು.

೨. ನೀಗ್ರೋಯಿಡ್, ಆಸ್ಟ್ರೋಲಾಯಿಡ್ ಮತ್ತು ಮಂಗೋಲಾಯಿಡ್ ಈ ಮೂರು ಜನಾಂಗಗಳಲ್ಲಿ ಯಾವುದಾದರೂ ಒಂದಕ್ಕೆ ಸೇರಿರಬೇಕು.

೩. ಪ್ರತ್ಯೇಕವಾದ ಬುಡಕಟ್ಟು ಭಾಷೆಯನ್ನು ಒಳಗೊಂಡಿರಬೇಕು.

೪. ಪಿತೃಪೂಜೆ, ದೆವ್ವಗಳ ಆರಾಧನೆಯನ್ನು ಮಾಡುವ ಪ್ರಾಚೀನ ಧಾರ್ಮಿಕ ಆಚರಣೆಯನ್ನು ಹೊಂದಿರಬೇಕು.

೫. ಪ್ರಾಚೀನ ವೃತ್ತಿಗಳಾದ ಬೇಟೆ, ಬೇಸಾಯ ಮತ್ತು ಕಾಡುತ್ಪತ್ತಿಯನ್ನು ಸಂಗ್ರಹಿಸುವ ವೃತ್ತಿಯನ್ನು ಅನುಸರಿಸಬೇಕು.

೬. ಬುಡಕಟ್ಟುಗಳು ಮಾಂಸ ಮತ್ತು ನರಮಾಂಸ (Carnirorous) ಭಕ್ಷಣೆಯನ್ನು ಮಾಡುತ್ತಾರೆ.

೭. ಬುಡಕಟ್ಟುಗಳು ಸಾಮಾನ್ಯವಾಗಿ ಬೆತ್ತಲೆ ಅಥವಾ ಅರೆಬೆತ್ತಲೆಗಳಾಗಿದ್ದು ಮರದ ತೊಗಟೆ, ಎಲೆಗಳನ್ನು ಬಟ್ಟೆಯಾಗಿ ಬಳಸುತ್ತಾರೆ.

೮. ವಲಸೆ ಸಂಸ್ಕೃತಿಯನ್ನು ಹೊಂದಿದ್ದು ಕುಡಿತ ಮತ್ತು ಕುಣಿತಗಳಲ್ಲಿ ವಿಶೇಷ ಆಸಕ್ತಿಯನ್ನು ತಳೆಯುತ್ತಾರೆ.

ಇಂದಿನ ಆಧುನಿಕ ಯುಗದಲ್ಲಿ ಒಂದು ಬುಡಕಟ್ಟು ಮತ್ತು ಜಾತಿಯ ನಡುವೆ ನಿರ್ದಿಷ್ಟವಾದ ಗೆರೆ ಎಳೆಯಲು ಸಾಧ್ಯವೇ? ಎಂಬುದನ್ನು ಯೋಚಿಸಬೇಕು. ಕರ್ನಾಟಕದಲ್ಲಿ ಇರುವ ೫೦ ಬುಡಕಟ್ಟುಗಳು ಈ ಮೇಲಿನ ಲಕ್ಷಣಗಳನ್ನು ಹೊಂದಿಕೊಂಡು ಇಂದಿಗೂ ಬದುಕುತ್ತಿವೆ? ಸಹಜ ಪರಿವರ್ತನೆ ಶೀಲ ಸಮಾಜದಲ್ಲಿ ಇದ್ದ ಹಾಗೆ ಇರಬೇಕೆನ್ನುವುದು ಅಸಾಧ್ಯದ ಮಾತೇ ಸರಿ! ಜಾಗತೀಕರಣ ಪ್ರವಾಹದಲ್ಲಿ ಬುಡಕಟ್ಟು ಸಮುದಾಯಗಳ ಸಾಂಸ್ಕೃತಿಕ ಪಾರಂಪರಿಕ ಅನನ್ಯತೆ ಅಳಿಸಿ ಹೋಗಬಾರದು ಎಂಬ ಘೋಷಣೆ ಎಷ್ಟು ಮುಖ್ಯವಾಗುತ್ತದೋ ಅಷ್ಟೇ ಮುಖ್ಯವಾಗಿ ಜನತಾಂತ್ರಿಕ ಬಹು ಸಂಸ್ಕೃತಿ ವ್ಯವಸ್ಥೆಯಡಿಯಲ್ಲಿ ಬದುಕುವುದು ಕೂಡ ಮುಖ್ಯವಾದುದು. ಈ ನಿಟ್ಟಿನಲ್ಲಿ ಇಂದಿಗೂ ಪುರಾತನ ಬುಡಕಟ್ಟು ಲಕ್ಷಣಗಳನ್ನೇ ಹೊಂದಿಕೊಂಡು ಮುಂದುವರಿಯಬೇಕೆನ್ನುವ ಆಶಯ ಸರಿಯಾದುದಲ್ಲ.

ಬುಡಕಟ್ಟು ಸಮುದಾಯಗಳು ಕಾಲದಿಂದ ಕಾಲಕ್ಕೆ ಬದಲಾವಣೆಗಳನ್ನು ಹೊಂದುತ್ತಾ ಬಂದಿವೆ. ಅದು ಪರಿಸರಕ್ಕೆ ಅನುಗುಣವಾಗಿಯೇ ಆಗುತ್ತವೆ. ಅನೇಕ ಸಂದರ್ಭದಲ್ಲಿ ಪ್ರಕೃತಿ ಪರಿಸರದ ಮೇಲಾಗುವ ಅತಿಕ್ರಮಣದಿಂದ, ಅತ್ಯಾಚಾರದಿಂದಲೂ ಆಗುವ ಅನಾಹುತ ನೇರವಾಗಿ ಬುಡಕಟ್ಟುಗಳ ಮೇಲೂ ಆಗುವುದು ಸಹಜವಾಗಿಯೇ ಕಂಡುಬರುತ್ತದೆ. ಭಾರತ ಸರಕಾರ ೧೯೫೨ರಲ್ಲಿ ಪಟ್ಟಿ ಮಾಡಿದ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳ ಲಕ್ಷಣಗಳನ್ನು ಇಂದು ನಾವು ಕಾಣಲು ಸಾಧ್ಯವೇ? ಅಂದಿಗೂ ಇಂದಿಗೂ ಬಹಳ ಅಂತರ ಕಂಡುಬರುತ್ತವೆ. ಬುಡಕಟ್ಟು ಸಮುದಾಯ ನಾಗರಿಕ ಸಮುದಾಯದಿಂದ ದೂರವಿದ್ದು ಕಾಡು ಮತ್ತು ಬೆಟ್ಟಗಳಲ್ಲಿ ಬದುಕುವರು. ಇದು ಬುಡಕಟ್ಟಿನ ಮೊದಲನೆ ಲಕ್ಷಣ. ಇಂದು ಬೆಟ್ಟ ಗುಡ್ಡಗಳು ಇದ್ದರೂ ಕಾಡುಗಳು ಎಲ್ಲಿವೆ? ಕಾಡುಗಳೆಲ್ಲಾ ವಿನಾಶದತ್ತ ಸಾಗಿವೆ. ಜನಸಂಖ್ಯೆಯ ಹೆಚ್ಚಳದಿಂದ, ಕೈಗಾರಿಕೀಕರಣದಿಂದ, ವಾಣಿಜ್ಯ ಬೆಳೆಗಳ ಬೆಳೆಯುವಿಕೆಯಿಂದ ಕಾಡಿನ ವಿಸ್ತೀರ್ಣ ಸಾವಿರಾರು

ಹೆಕ್ಟೇರುಗಳಿಂದ ಹತ್ತಾರು ಹೆಕ್ಟೇರುಗಳಿಗೆ ಸೀಮಿತಗೊಂಡಿವೆ. ೭೦-೧೦೦ ವರ್ಷಗಳಲ್ಲಿದ್ದಂತಹ ದಕ್ಷಿಣ ಕನ್ನಡದ ಒಟ್ಟು ಪ್ರಾಕೃತಿಕ ಚಿತ್ರಣ ಎಷ್ಟು ಭಿನ್ನವಾಗಿಲ್ಲ? ಗೊಂಡಾರಣ್ಯಗಳೇ ಇಲ್ಲ. ವರ್ಷದ ಪೂರ್ತಿ ಸಮಯದಲ್ಲೂ ಹರಿಯುತ್ತಿದ್ದ ನದಿ, ಹೊಳೆ, ತೋಡುಗಳು ಕೆಲವೇ ತಿಂಗಳು ಹರಿಯುತ್ತಿವೆ. ಅರಣ್ಯಗಳೇ ಇಲ್ಲವೆಂದ ಮೇಲೆ ಚಿರತೆ, ಹುಲಿ, ಜಿಂಕೆಗಳಂತಹ ನೂರಾರು ಜಾತಿಯ ಪ್ರಾಣಿಗಳಿಗೆ ಎಲ್ಲಿದೆ ಆಶ್ರಯ? ಕಾಡುಗಳಿಲ್ಲದೆ ಕಾಡುತ್ಪತ್ತಿಗಳು ಸಿಗಲು ಸಾಧ್ಯವೇ? ಇದು ಕೇವಲ ದಕ್ಷಿಣ ಕನ್ನಡದ ಚಿತ್ರಣವಲ್ಲ. ಇಡೀ ಕರ್ನಾಟಕದಲ್ಲಿ ಇರುವ ಸುಮಾರು ೫೦ ಬುಡಕಟ್ಟುಗಳು ನೆಲೆಸಿರುವ ಎಲ್ಲಾ ಪ್ರದೇಶಗಳ ಚಿತ್ರಣ ಹೀಗೆಯೇ ಇದೆ. ಅಭಯಾರಣ್ಯದ ಹೆಸರಿನಲ್ಲಿ, ರಾಷ್ಟ್ರೀಯ ಉದ್ಯಾನವನದ ಹೆಸರಿನಲ್ಲಿ ಗಣಿಗಾರಿಕೆ, ಕೈಗಾರಿಕೆಗಳ ಹೆಸರಿನಲ್ಲಿ ಬುಡಕಟ್ಟು ಜನರೆಲ್ಲ ತಮ್ಮದೆಂದು ನಂಬಿಕೊಂಡು ಬಂದ ನೆಲೆಗಳು ಕೈ ತಪ್ಪಿ ಹೋಗಿವೆ. ನೀರಿನಿಂದ ತೆಗೆದ ಮೀನಿನ ಸ್ಥಿತಿಯಂಥಾಗಿವೆ ಬುಡಕಟ್ಟುಗಳ ಸ್ಥಿತಿ. ದಕ್ಷಿಣ ಕನ್ನಡ, ಕಾಸರಗೋಡು, ಕೊಡಗು ಜಿಲ್ಲೆಯಲ್ಲಿ ಕಾಡಿಲ್ಲದ ಬೋಳು ಗುಡ್ಡ, ಬೆಟ್ಟಗಳ ತುದಿಯಲ್ಲಿ ಇಂದಿಗೂ ಮರಾಟಿಗರು ಜೀವಿಸುತ್ತಿದ್ದಾರೆ. ಮಡಿಕೇರಿಯ ನಿಡ್ಯಮಲೆಯಂತಹ ಮಲೆಯ ಶಿಖರದಲ್ಲಿ ಸಾಹಸದ ಜೀವನವನ್ನು ಮಾಡುತ್ತಾ ಬಂದಿದ್ದಾರೆ.

ನೀಗ್ರೋಯಿಡ್, ಆಸ್ಟ್ರೋಲಾಯಿಡ್ ಮತ್ತು ಮಂಗೋಲಾಯಿಡ್ ಮೂರು ಜನಾಂಗಗಳಲ್ಲಿ ಯಾವುದಾದರೂ ಒಂದಕ್ಕೆ ಸೇರಿಸಬೇಕು. ಕರ್ನಾಟಕದಲ್ಲಿ ಸಿದ್ಧಿ (ಉತ್ತರ ಕನ್ನಡ)ಯರು ಮಾತ್ರ ನೀಗ್ರೋಯಿಡ್ ಜನಾಂಗಕ್ಕೆ ಸೇರಿದವರು. ಇತರೆ ಬಹುತೇಕ ಬುಡಕಟ್ಟುಗಳು ದ್ರಾವಿಡ ಜನಾಂಗಕ್ಕೆ ಸೇರಿದವರೆಂದು ಇತ್ತೀಚಿನ ಸಂಶೋಧನೆಗಳು ದೃಢಪಡಿಸುತ್ತಿವೆ. ದ್ರಾವಿಡ ಭೂಭಾಗದಲ್ಲಿ ಇರುವವರೆಲ್ಲಾ ದ್ರಾವಿಡ ಜನಾಂಗಕ್ಕೆ ಅಥವಾ ಆರ್ಯನ್ ಜನಾಂಗಕ್ಕೆ ಸೇರಿದವರಿರುತ್ತಾರೆ. (ಆರ್ಯನ್ ಜನಾಂಗವೇ ಅಲ್ಲ ಎನ್ನುವ ಮಾತು ಇದೆ) ಕರ್ನಾಟಕದ ಎಲ್ಲಾ ಬುಡಕಟ್ಟುಗಳು ದ್ರಾವಿಡ ಜನಾಂಗಕ್ಕೆ ಸೇರಿದವರು.

ಮರಾಟಿಗರು ಪ್ರತ್ಯೇಕವಾದ ಬುಡಕಟ್ಟು ಭಾಷೆಯನ್ನು ಹೊಂದಿದ್ದಾರೆ. ಮಹಾರಾಷ್ಟ್ರದ ಮರಾಠಿ ಭಾಷೆಗೂ ಮರಾಟಿಗರ ಮರಾಠಿ ಭಾಷೆಗೂ ವ್ಯತ್ಯಾಸಗಳಿವೆ. ಮರಾಠಿಗರ ಭಾಷೆಯಲ್ಲಿ ತುಳು, ಕೊಂಕಣಿ ಮತ್ತು ಮರಾಠಿ ಶಬ್ದಗಳು ಮಿಶ್ರಿತಗೊಂಡಿವೆ. ಆ ಮೂಲಕ ಮರಾಟಿಗರು ಮಾತ್ರ ಮರಾಠಿ ಭಾಷೆಯನ್ನು ಮಾತನಾಡುತ್ತಾರೆ. ಇತರ ಸಮುದಾಯದ ಪ್ರಭಾವದಿಂದ ಅನೇಕ ಮರಾಟಿ ಕುಟುಂಬಗಳು ತಮ್ಮ ಮರಾಠಿ ಭಾಷೆಯನ್ನು ಕೂಡ ಮರೆತಂತೆ ಕಾಣುತ್ತದೆ. ಪ್ರಾದೇಶಿಕ ತುಳು, ಕನ್ನಡ ಭಾಷೆಯನ್ನು ಚೆನ್ನಾಗಿ ಬಲ್ಲರು. ಇಂದಿಗೂ ಅನೇಕ ಮರಾಟಿಗರಿಗೆ ಮರಾಠಿ ಮತ್ತು ತುಳು ಭಾಷೆ ಬಂದರೆ ಕನ್ನಡ ಮಾತನಾಡಲು ಬರುವುದಿಲ್ಲ.

ಪಿತೃಪೂಜೆ, ದೈವಗಳ ಆರಾಧನೆಯನ್ನು ಮಾಡುವ ಪ್ರಾಚೀನ ಧಾರ್ಮಿಕ ಆಚರಣೆಯನ್ನು ಹೊಂದಿರಬೇಕೆಂಬುದು ಒಂದು ಲಕ್ಷಣ. ಮರಾಟಿಗರು ಪ್ರತಿ ತಿಂಗಳು ಅಮವಾಸ್ಯೆಯನ್ನು ಪಿತೃಗಳ ನೆನಪಿನ ಸಂಕೇತವಾಗಿ ವಿಶೇಷ 'ಅಮವಾಸ್ಯೆ ಊಟ' ಮಾಡುವುದು ಇಂದಿಗೂ ಇದೆ. ಪ್ರತಿವರ್ಷ ನಿಗದಿತ ದಿನದಂದು ಶ್ರಾದ್ಧ ಮಾಡುವ ಮೂಲಕ ಪಿತೃಪೂಜೆಗೆ ಪ್ರಥಮ ಪ್ರಾಶಸ್ತ್ಯ ನೀಡುತ್ತಾರೆ. ಗತಿಸಿದವರು ತಮ್ಮ ಜತೆಗೆ ಇರುತ್ತಾರೆ. ನಮ್ಮನ್ನು ಆಧರಿಸುತ್ತಾರೆ ಎಂಬ ನಂಬಿಕೆ ಇವರದ್ದು.

ಪ್ರಾಚೀನ ವೃತ್ತಿಗಳಾದ ಬೇಟೆ, ಬೇಸಾಯ ಮತ್ತು ಕಾಡುತ್ಪತ್ತಿಯನ್ನು ಸಂಗ್ರಹಿಸುವ ವೃತ್ತಿಯನ್ನು ಅನುಸರಿಸಬೇಕು. ಇಂದಿನ ಪರಿವರ್ತಿತ ಸಮಾಜದಲ್ಲಿ ಬೇಟೆಯಾಡಲು ಅವಕಾಶವಿಲ್ಲ. ಸೀಮಿತ ಪ್ರದೇಶಗಳಲ್ಲಿ ಅಪರೂಪವಾಗಿ ಕಂಡು ಬರುವ ಪ್ರಾಣಿಗಳನ್ನು ಬೇಟೆಯಾಡುವಂತಿಲ್ಲ. ಅದಕ್ಕೂ ಮುಖ್ಯವಾಗಿ ಇಂದಿನ ಕಾಡುಗಳಲ್ಲಿ ಪ್ರಾಣಿಗಳೇ ವಿರಳವಾಗಿವೆ. ಇಂದಿಗೂ ಮರಾಟಿಗರು ದಕ್ಷಿಣ ಕನ್ನಡ, ಉಡುಪಿ, ಕಾಸರಗೋಡು ಜಿಲ್ಲೆಗಳಲ್ಲಿ ಅಳಿದುಳಿದ ಕಾಡು ಹಂದಿಗಳ ಬೇಟೆಯನ್ನಾಡುತ್ತಾರೆ. ಮರಾಟಿಗರ ಪ್ರಮುಖ ವೃತ್ತಿಯೇ ಕೃಷಿ-ಬೇಸಾಯ. ಹಿಂದಿನ ಕಾಲದಿಂದ ಇತ್ತೀಚಿನವರೆಗೂ 'ಕುಮೇರಿ' ಕೃಷಿಯನ್ನೇ ನಂಬಿಕೊಂಡು ಬದುಕಿದವರು. ಕಾಡುತ್ಪತ್ತಿಗಳನ್ನು ಸಂಗ್ರಹಿಸುವ ಕಾಯಕದಲ್ಲೂ ನಿಷ್ಣಾತರು. ಇಂದು ಜಿಲ್ಲೆಯ LAMPS ಸೊಸೈಟಿಯ ಮೂಲಕ ಕಾಡುತ್ಪತ್ತಿ ಸಂಗ್ರಹಿಸುವ ಕೆಲಸವನ್ನು ಮರಾಟಿಗರು ಮಾಡುತ್ತಾರೆ. ಆದರೆ ಅದರ ಲಾಭವೆಲ್ಲ ಇತರ ಧನಿಕ ಮಧ್ಯವರ್ತಿಗಳ ಪಾಲಾಗುತ್ತದೆ.

ಬುಡಕಟ್ಟುಗಳು ಮಾಂಸ ಮತ್ತು ನರಮಾಂಸ ಭಕ್ಷಣೆ ಮಾಡುತ್ತಾರೆ. ಕರ್ನಾಟಕದ ಬಹುತೇಕ ಬುಡಕಟ್ಟುಗಳು ಮಾಂಸಾಹಾರಿಗಳು, ಆದರೆ ನರಮಾಂಸ ಭಕ್ಷಣೆ ಎಲ್ಲೂ ಇಲ್ಲ. ದಕ್ಷಿಣ ಕನ್ನಡ ಜಿಲ್ಲೆಯ ಮರಾಟಿ ಬುಡಕಟ್ಟು ಕೋಳಿ, ಹಂದಿ, ಮೊಲ, ಉಡ, ಮುಳ್ಳುಹಂದಿ, ಬೇರು, ಆಡು, ಕುರಿ, ಇತ್ಯಾದಿ ಪ್ರಾಣಿಗಳ ಮಾಂಸವನ್ನು ಹಿಂದಿನ ಕಾಲದಿಂದ ಸೇವಿಸುತ್ತಾ ಬಂದವರು, ಬೆಟ್ಟ ಗುಡ್ಡ ಪ್ರದೇಶಗಳಲ್ಲಿ ವಾಸಿಸುತ್ತಾ ಬಂದ ಇವರಿಗೆ ಈ ಪ್ರಾಣಿಗಳ ಮಾಂಸ ಭಕ್ಷಣೆ ಸಹಜವಾಗಿದೆ.

ಬುಡಕಟ್ಟುಗಳು ಸಾಮಾನ್ಯವಾಗಿ ಬೆತ್ತಲೆ ಅಥವಾ ಅರೆಬೆತ್ತಲೆಗಳಾಗಿದ್ದು. ಮರದ ತೊಗಟೆ, ಎಲೆಗಳನ್ನು ಬಟ್ಟೆಯಾಗಿ ಬಳಸುವುದು ಇಂದಿನ ಆಧುನಿಕ ಯುಗದಲ್ಲಿ ಕಷ್ಟಸಾಧ್ಯ. ನಗರ ಪಟ್ಟಣಗಳಲ್ಲಿ ಅರೆಬೆತ್ತಲೆ ವಸ್ತ್ರ ಬಳಸುವುದು ಒಂದು ಪ್ಯಾಶನ್ ಆಗಿದೆ. ಇತ್ತೀಚಿನವರೆಗೂ ಮರಾಟಿ ಪುರುಷರು ಕೇವಲ ಲಂಗೋಟಿ ಧರಿಸುತ್ತಿದ್ದರು. ಸ್ತ್ರೀಯರು ಸೀರೆ ಉಟ್ಟರೂ ಸೆರಗು ಹಾಕುತ್ತಿರಲಿಲ್ಲ.

ಮರಾಟಿಗರು ದಕ್ಷಿಣ ಕನ್ನಡದ ಮೂಲ ನಿವಾಸಿಗಳಲ್ಲ. ಮಹಾರಾಷ್ಟ್ರದಿಂದ ಬಂದಂಥ ವಲಸಿಗರೆಂಬುದು ಸಂಶೋಧನೆಗಳಿಂದ ದೃಢಪಟ್ಟಿವೆ. ಬುಡಕಟ್ಟು ಸಮುದಾಯಗಳು ಕುಡಿತ ಮತ್ತು ಕುಣಿತಗಳಲ್ಲಿ ವಿಶೇಷ ಆಸಕ್ತಿಯನ್ನು ತಳೆಯುತ್ತಾರೆ. ಇದಕ್ಕೆ ದಕ್ಷಿಣ ಕನ್ನಡದ ಈ ಬುಡಕಟ್ಟೂ ಹೊರತಲ್ಲ. ತಮ್ಮ ಸಾಂಪ್ರದಾಯಿಕ ಆಚರಣೆಗಳಾದ ಗೋಂದೋಳು ಪೂಜೆ, ಭೈರವ ಪೂಜೆ ಹಾಗೂ ಇನ್ನಿತರ ಬಹುತೇಕ ಆಚರಣೆಗಳಲ್ಲಿ ಮದ್ಯಪಾನವು ಮಹತ್ವವನ್ನು ಪಡೆದಿದೆ. ಈ ಪದ್ಧತಿ ಪರಂಪರಾಗತವಾಗಿ ಬಂದಿರುವಂಥದ್ದು ಎಂದು ವಕ್ತೃಗಳು ಉತ್ತರಿಸುತ್ತಾರೆ. ಹಾಗೆಯೇ ಕುಣಿತಗಳೂ ಇವರ ಬದುಕಿನಲ್ಲಿ ಉಳಿಸಿ ಬೆಳೆಸಿಕೊಂಡು ಬಂದ ಕಲೆಯಾಗಿದೆ. ಗೋಂದೋಳು ಕುಣಿತ, ಬಾಲೆ ಸಾಂತು, ಕುಣಿತ, ಗುಮ್ಮಟೆ ಕುಣಿತ, ಹೋಳಿ ಕುಣಿತ ಹೀಗೆ ಜೀವನಾವರ್ತನ ಆಚರಣೆಗಳಲ್ಲಿ ಕುಣಿತಗಳು, ಕುಡಿತಗಳು ಆಸಕ್ತಿದಾಯಕವಾಗಿವೆ.

ಭಾರತದಲ್ಲಿರುವ ಎಲ್ಲಾ ಜಾತಿ ಸಮುದಾಯಗಳು ಒಂದಲ್ಲ ಒಂದು ರೀತಿಯಲ್ಲಿ ಹಿಂದೂ ಧರ್ಮದ ಪ್ರಭಾವಕ್ಕೆ ಒಳಗಾಗಿವೆ. ಸುಮಾರು ಐದು ಸಾವಿರ ಜಾತಿಗಳಿರುವ ಭಾರತದಲ್ಲಿ ಹಿಂದಿನ ಕಾಲದಿಂದಲೂ ಜಾತಿಗಳ ಮಧ್ಯೆ ಶ್ರೇಣೀಕೃತ ವ್ಯವಸ್ಥೆ ಉಳಿದುಕೊಂಡು ಬಂದಿದೆ. ಇದಕ್ಕೆ ಬುಡಕಟ್ಟುಗಳೂ ಹೊರತಾಗಿಲ್ಲ ಕಾರಣ 'ಬದುಕುವುದೇ'

ಒಂದು ಮೂಲಭೂತ ಉದ್ದೇಶವಾಗಿರುವಾಗಿ ಇತರೆ ವಿಷಯಗಳೆಲ್ಲ ನಗಣ್ಯವಾಗುತ್ತವೆ. ಜಾತಿಗಳೇ ಅಲ್ಲದ ನೂರಾರು ಬುಡಕಟ್ಟುಗಳು ಇಂದು ಜಾತಿಯೊಳಗೆ ಬಂದಿಗಳಾಗಿವೆ. ಬುಡಕಟ್ಟನಿಂದ ಜಾತಿಗೆ ವರ್ಗಾವಣೆ ಗೊಂಡಿವೆ. ನಿರ್ಮಲ್ ಕುಮಾರ್ ಸೇನ್ ಅವರು ಪರಿವರ್ತನೆಗೊಳ್ಳುತ್ತಿರುವ ಬುಡಕಟ್ಟುಗಳ ಬಗೆಗೆ ಹೀಗೆ ತಿಳಿಸುತ್ತಾರೆ. ಬುಡಕಟ್ಟಿನ ಜನ ತಮ್ಮ ಹಬ್ಬ, ಮದುವೆ, ಸಾವು ಈ ಮೂರು ಸಂದರ್ಭಗಳಲ್ಲಿ ಬ್ರಾಹ್ಮಣ ಪೌರೋಹಿತ್ಯಕ್ಕೆ ಅವಕಾಶ ನೀಡಿದೆ ತಾವೇ ನಡೆಸಿಕೊಂಡು ಹೋಗುತ್ತಾರೆ. ಎಲ್ಲಿಯವರೆಗೆ ಈ ಪರಿಸ್ಥಿತಿ ಉಳಿದಿರುತ್ತದೋ ಅಲ್ಲಿಯವರೆಗೆ ಬುಡಕಟ್ಟು ತನ್ನ ಮೂಲ ರೂಪದಲ್ಲಿಯೇ ಇರತ್ತದೆ. ಹೀಗಿದ್ದರೂ ಅವರು ಸುತ್ತಲಿನ ಇತರ ಜಾತಿಯವರೊಂದಿಗೆ ಬೆರೆಯುತ್ತಾರೆ. ಆದರೆ ಯಾವಾಗ ಅವರು ತಮ್ಮ ಜೀವನಾವರ್ತನದಲ್ಲಿ ಬ್ರಾಹ್ಮಣ ಪೌರೋಹಿತ್ಯವನ್ನು ಒಪ್ಪಿಕೊಂಡರೋ ಆಗ ಬುಡಕಟ್ಟು ತನ್ನ ಮೂಲ ಸ್ವರೂಪವನ್ನು ಕಳೆದುಕೊಳ್ಳುತ್ತಾರೆ. (ಉದ್ಧೃತ: ಎ.ವಿ. ನಾವಡ ೧೯೯೩ ಪು.೧೧೮, ಜಾನಪದ ಸಮಾಲೋಚನೆ ಕ.ಜಾ.&.ಯ.ಅ.) ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ಇದ್ದಂತೆ ಇರಲು ಕಷ್ಟಸಾಧ್ಯ. ಪ್ರತಿಯೊಂದು ಬುಡಕಟ್ಟು ಕೂಡ ತನ್ನ ಅನನ್ಯತೆಯನ್ನು ಉಳಿಸಿಕೊಂಡು ಬದುಕು ಸಾಗಿಸಲು ಹೋರಾಡುತ್ತಲೇ ಇರುತ್ತವೆ. ಆದರೆ ಸಮಾಜದಲ್ಲಿ ಕೊಡುಕೊಳ್ಳುವಿಕೆಯ ಸಂದರ್ಭದಲ್ಲಿ ಬ್ರಾಹ್ಮಣರ ಪೌರೋಹಿತ್ಯ, ಜಾತಿಯೊಳಗೆ ಸೇರುವಂತಹ ವಿಚಾರಗಳಲ್ಲಿ ಅವು ಅನಿವಾರ್ಯವಾಗಿವೆ. ಇಲ್ಲದಿದ್ದರೆ ಬುಡಕಟ್ಟಿನ ಅಸ್ತಿತ್ವವೇ ಇಲ್ಲದಂತಾಗುತ್ತದೆ.

ಬುಡಕಟ್ಟುಗಳು ಇಂದು ಜಾತಿಯೊಳಗೆ ಬಂದಿಗಳಾಗಿವೆ. ಬುಡಕಟ್ಟನಿಂದ ಜಾತಿಗೆ ವರ್ಗಾವಣೆಗೊಂಡಿವೆ. ನಿರ್ಮಲ್ ಕಾರುಮಾರ್ ಸೇನ್ ಅವರು ಪರಿವರ್ತನೆಗೊಳ್ಳುತ್ತಿರುವ ಬುಡಕಟ್ಟುಗಳ ಬಗೆಗೆ ಹೀಗೆ ತಿಳಿಸುತ್ತಾರೆ. ''ಬುಡಕಟ್ಟಿನ ಜನ ತಮ್ಮ ಹಬ್ಬ, ಮದುವೆ, ಸಾವು ಈ ಮೂರು ಸಂದರ್ಭಗಳಲ್ಲಿ ಬ್ರಾಹ್ಮಣ ಪೌರೋಹಿತ್ಯಕ್ಕೆ ಅವಕಾಶ ನೀಡಿದೆ ತಾವೇ ನಡೆಸಿಕೊಂಡು ಹೋಗುತ್ತಾರೆ. ಎಲ್ಲಿಯವರೆಗೆ ಈ ಪರಿಸ್ಥಿತಿ ಉಳಿದಿರುತ್ತದೋ ಅಲ್ಲಿಯವರೆಗೆ ಬುಡಕಟ್ಟು ತನ್ನ ಮೂಲ ರೂಪದಲ್ಲಿಯೇ ಇರುತ್ತದೆ. ಹೀಗಿದ್ದರೂ ಅವರು ಸುತ್ತಲಿನ ಇತರ ಜಾತಿಯವರೊಂದಿಗೆ ಬೆರೆಯುತ್ತಾರೆ. ಆದರೆ ಯಾವಾಗ ಅವರು ತಮ್ಮ ಜೀವನಾವರ್ತನದಲ್ಲಿ ಬ್ರಾಹ್ಮಣ ಪೌರೋಹಿತ್ಯವನ್ನು ಒಪ್ಪಿಕೊಂಡರೋ ಆಗ ಬುಡಕಟ್ಟು ತನ್ನ ಮೂಲ ಸ್ವರೂಪವನ್ನು ಕಳೆದುಕೊಳ್ಳುತ್ತಾರೆ.'' (ಉದ್ಧೃತ: ಎ.ವಿ.ನಾವಡ ೧೯೯೩ ಪು.೧೧೮, ಜಾನಪದ ಸಮಾಲೋಚನೆ ಕ.ಜಾ.&.ಯ.ಅ.) ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ಇದ್ದಂತೆ ಇರಲು ಕಷ್ಟಸಾಧ್ಯ. ಪ್ರತಿಯೊಂದು ಬುಡಕಟ್ಟು ಕೂಡ ತನ್ನ ಅನನ್ಯತೆಯನ್ನು ಉಳಿಸಿಕೊಂಡು ಬದುಕು ಸಾಗಿಸಲು ಹೋರಾಡುತ್ತಲೇ ಇರುತ್ತವೆ. ಆದರೆ ಸಮಾಜದಲ್ಲಿ ಕೊಡುಕೊಳ್ಳುವಿಕೆಯ ಸಂದರ್ಭದಲ್ಲಿ ಬ್ರಾಹ್ಮಣರ ಪೌರೋಹಿತ್ಯ, ಜಾತಿಯೊಳಗೆ ಸೇರುವಂತಹ ವಿಚಾರಗಳಲ್ಲಿ ಅವು ಅನಿವಾರ್ಯವಾಗಿವೆ.

**ಕೊನೆ ಟಿಪ್ಪಣಿ**

೧. ಡಾ ಕೆ.ಎಂ. ಮೈತ್ರಿ ೨೦೦೨, ಪು ೧೭೮.

೨. ಡಾ. ಜಿ.ಎಸ್. ಉಪಾಧ್ಯ ೨೦೦೫, ಪು ೫೦೬

೩. ರಾಧಾಕೃಷ್ಣ ಬೆಳ್ಳೂರು ೨೦೦೧, ಪು. ೮

೪. ಮಂಜೇಶ್ವರ ಗಣಪತಿರಾವ್ ಐಗಳ, ೧೯೨೩, ಪು. ೩೧೮

೫. ಡಾ. ಚಂದ್ರಶೇಖರ ಕಂಬಾರ (ಸಂ) ೧೯೮೫, ಪು. ೧೫೫೫.

೬. ಪಿ. ಕಮಲಾಕ್ಷಿ ೧೯೯೪ ಪು. ೨೯

* * * * *

# ಅಧ್ಯಾಯ - ೩

## ಸಾಮಾಜಿಕ ಜೀವನ

೩. ೧. ಕೌಟುಂಬಿಕ ವ್ಯವಸ್ಥೆ

೩. ೨. ಬಳಿ ಪದ್ಧತಿ

೩. ೩. ಜನನ ಸಂಬಂಧಿ ಆಚರಣೆ

೩. ೪. ಋತುಮತಿ

೩. ೫. ಮದುವೆ

೩. ೬. ವಿಧವಾ ವಿವಾಹ

೩. ೭. ಸೀಮಂತ

೩. ೮. ಮರಣ

**ಸಾಮಾಜಿಕ ಜೀವನ**

**ಕೌಟುಂಬಿಕ ವ್ಯವಸ್ಥೆ**

ಪ್ರಕೃತಿಯು ನಿಯಮಬದ್ಧವಾಗಿ ರಚನೆಯಾಗಿ ನಿರ್ದಿಷ್ಟ ವ್ಯವಸ್ಥೆಯಲ್ಲಿರುವಂತೆಯೇ ಮನುಷ್ಯನು ಕೂಡ ಜೀವನವನ್ನು ಒಂದು ವ್ಯವಸ್ಥೆಯಲ್ಲಿಯೇ ತಂದನು. ಅದು ಕುಟುಂಬದ ರಚನೆಗೆ ಮೂಲವಾಯಿತು. ಬದಲಾದ ಕಾಲಕ್ಕೆ ತಕ್ಕಂತೆ ಕುಟುಂಬ ಜೀವನದಲ್ಲಿಯೂ ಅನೇಕ ಏರುಪೇರುಗಳೂ ಕಾಣುತ್ತಲೇ ಬಂದವು. ಅವಿಭಕ್ತ ಕುಟುಂಬದಿಂದ ವಿಭಕ್ತ ಕುಟುಂಬದೆಡೆಗೆ ಬದಲಾವಣೆ ಕಂಡಿದೆ. 'ಮನೆ ತುಂಬ ಮಕ್ಕಳಿರಲವ್ವಾ' ಎಂದ ಜನಪದರ ಮಾತು ಇಂದು ಬದಲಾಗಿ 'ಮನೆಗೊಂದು ಮಗು ಸಾಕು' ಎನ್ನುವಲ್ಲಿಗೆ ಸಾಗಿ ಬಂದಿದೆ. ಈ ಎಲ್ಲಾ ಸ್ಥಿತ್ಯಂತರಗಳಲ್ಲಿ ಮಾನವನ ಜೀವನ ಹೋರಾಟ ಸಾಗುತ್ತಲೇ ಇದೆ. ಹಿಂದಿನ ಕಾಲದ ಕುಟುಂಬ ವ್ಯವಸ್ಥೆ ಇಂದು ಒಡೆದು ಚೂರಾದ ಕುಟುಂಬವಾಗಿದೆ. ತಂದೆ ಒಂದೂರಲ್ಲಿದ್ದರೆ ತಾಯಿ ಮತ್ತೊಂದೂರಲ್ಲಿ, ಮಕ್ಕಳು ಇನ್ನೊಂದೂರಲ್ಲಿ ಬದುಕುವ ಸ್ಥಿತಿ ಇಂದಿನ ಸಮಾಜದ್ದಾಗಿದೆ. ಬಹುಸಂಸ್ಕೃತಿಯಲ್ಲಿ ಏಕತೆಯನ್ನು ಹೊಂದಿಕೊಂಡು ಬಂದ ಭಾರತೀಯ ಸಮಾಜ ಕಾಲಕ್ಕೆ ತಕ್ಕಂತೆ ಬದಲಾವಣೆಗಳನ್ನು ತನ್ನೊಳಗೆ ಸೇರಿಸಿಕೊಳ್ಳುತ್ತಲೇ ತನ್ನ ಮೂಲ ರೂಪಗಳನ್ನು ಕಾಯ್ದುಕೊಂಡಿದೆ. ಇಂತಹ ಮೂಲ ರೂಪಗಳನ್ನು ಇಂದಿನ ದೃಷ್ಟಿಕೋನದಿಂದ ಗುರುತಿಸುವುದನ್ನು ಈ ಅಧ್ಯಯನದಲ್ಲಿ ದಾಖಲಿಸಲಾಗಿದೆ.

ಬುಡಕಟ್ಟು ಸಮುದಾಯವಾದ ಮರಾಟಿಗರು ತಮ್ಮದೇ ಆದ ಕೌಟುಂಬಿಕ, ಸಾಮಾಜಿಕ ವ್ಯವಸ್ಥೆಯನ್ನು ಸಹಜವಾಗಿಯೇ ರೂಪಿಸಿಕೊಂಡಿದ್ದಾರೆ. ಕೌಟುಂಬಿಕ ಚೌಕಟ್ಟಿನೊಳಗೆ ತಮ್ಮ ಜೀವನಕ್ಕೆ ಅನುಕೂಲವಾಗುವಂತಹ ರೀತಿ-ನೀತಿಗಳನ್ನು ರೂಢಿಸಿಕೊಂಡಿದ್ದಾರೆ. ಈ ಹಿಂದಿನ ಒಳಾಡಳಿತ ವ್ಯವಸ್ಥೆ ಇಂದು ಸಂಪೂರ್ಣವಾಗಿ ಇಲ್ಲವಾಗಿದೆ. ಇಂದು ಇತರ ಸಮುದಾಯಗಳ ಅನೇಕ ರೀತಿ-ನೀತಿ ನಡೆ-ನುಡಿಗಳನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ. ಕೌಟುಂಬಿಕ ಸಮಸ್ಯೆಗಳು ಎದುರಾದಾಗ ಗುರಿಕಾರನನ್ನು ಅವಲಂಬಿಸುವುದಿಲ್ಲ. 'ಗುರಿಕಾರ'ನ ಅಸ್ತಿತ್ವವೇ ಇಲ್ಲದೆ ಇರುವುದು ಒಂದು ದುರಂತವೂ ಹೌದು.

''ಒಂದು ಜನಾಂಗದ ಜೀವನ ಶೈಲಿ ಆ ಜನಾಂಗದ ಸಂಸ್ಕೃತಿ ಮತ್ತು ಪರಂಪರೆಯಲ್ಲಿನ ಮೌಲ್ಯಗಳನ್ನು ಆಧರಿಸಿ ರೂಪುಗೊಂಡಿರುತ್ತದೆ. ಸಂಸ್ಕೃತಿ ಆಂತರಿಕ ಮತ್ತು ಬಾಹ್ಯ ಒತ್ತಡಗಳಿಂದಾಗಿ ಬದಲಾಗುವ ಸಾವಯವ ಸಾರಭೂತವಾದ್ದರಿಂದ ಆಯಾ ಬದಲಾವಣೆಗಳಿಗೆ ತಕ್ಕಂತೆ ಜೀವನ ವಿಧಾನವೂ ಆಗಾಗ ಮಾರ್ಪಾಡಿಗೆ ಒಳಗಾಗುತ್ತಿದೆ.''[೧] ಜಾಗತೀಕರಣವು ಪ್ರತಿಯೊಂದು ಸಮುದಾಯವನ್ನು ಬಿಡದೇ ತನ್ನ ತೆಕ್ಕೆಯೊಳಗೆ ಸೆಳೆದುಕೊಳ್ಳುತ್ತಿರುವ ಈ ಸಂಕ್ರಮಣ ಸ್ಥಿತಿಯಲ್ಲಿ ಒಂದು ಬುಡಕಟ್ಟು ತನ್ನತನದೊಂದಿಗೆ ಬದುಕಬೇಕೆಂದರೆ ಅದು ಅಸಾಧ್ಯದ ಮಾತು. ಬುಡಕಟ್ಟು ಜನರು ತಮ್ಮದೇ ಆದ ಸಂಸ್ಕೃತಿ, ಸಾಮಾಜಿಕ-ಕೌಟುಂಬಿಕ ವ್ಯವಸ್ಥೆ, ಅಸ್ಮಿತೆಗಳನ್ನು ಸಾಧ್ಯವಾದಷ್ಟು ಉಳಿಸಿಕೊಳ್ಳಲು ಪ್ರಯತ್ನಿಸುತ್ತಲೇ ಇರುತ್ತಾರೆ. ಇನ್ನೊಂದು ಕಡೆ ಅವರಿರುವ ಪರಿಸರ, ಪ್ರಭಾವ, ಒತ್ತಡಗಳು ಹಾಗೂ ಒಂದು ರೀತಿಯ ಕೀಳರಿಮೆ ಅವುಗಳ ಇರುವಿಕೆಗೆ ಒಂದಲ್ಲ ಒಂದು ರೀತಿಯಲ್ಲಿ ತಡೆಯೊಡ್ಡುತ್ತಲೇ ಬರುತ್ತವೆ. ಆಗ ಅನಿವಾರ್ಯವಾಗಿ ಇತರರ ಪ್ರಭಾವಕ್ಕೆ ಒಳಗಾಗಲೇ ಬೇಕಾಗುತ್ತದೆ. ಆ ಮೂಲಕ ಇತರ ಸಮುದಾಯಗಳ ಸಂಸ್ಕೃತಿ ಸಂಪ್ರದಾಯಗಳ ಕೊಡುಕೊಳ್ಳುವಿಕೆ ತಾನೇತಾನಾಗಿ ಉಂಟಾಗುತ್ತದೆ.

''ಪ್ರಾಚೀನ ಸಂಸ್ಕೃತಿಯಲ್ಲಿ ಪ್ರತಿಯೊಂದು ಬುಡಕಟ್ಟಿಗೂ ತನ್ನ ಕುಲದ ಪಾವಿತ್ರತೆಯನ್ನು ಕಾಪಾಡಿಕೊಳ್ಳುವುದು ಬಹುಮುಖ್ಯವಾದದ್ದೆಂದು ತೋರುತ್ತದೆ. ಅದಕ್ಕಾಗಿಯೇ ಹಲವಾರು ಕಟ್ಟು-ಕಟ್ಟಳೆಗಳನ್ನು ಕುಲದ ಹಿರಿಯರು ವಿಧಿಸಿದ್ದರು. ಈ ಹಿನ್ನೆಲೆಯಲ್ಲಿ ಬುಡಕಟ್ಟುಗಳು ಒಂದು ಪ್ರದೇಶದಲ್ಲಿ ಬಾಳುವ ತನ್ನ ಕುಲದವರ ಕಟ್ಟಳೆಗಳನ್ನು ನೋಡಿಕೊಳ್ಳುವಂತೆ ಸಾಮಾಜಿಕವಾಗಿಯೂ ಕುಲದ ಪ್ರತಿಯೊಬ್ಬ ಸದಸ್ಯನೂ ನ್ಯಾಯನ್ಯಾಯದ ಬಗೆಗೂ ಅಸ್ಥೆವಹಿಸಬೇಕೆಂಬುದನ್ನು ಮನಗಾಣುವಂತೆ ತಿಳಿಯಪಡಿಸಿದ್ದರು. ಅವರದೇ ಆದ ಸಾಮಾಜಿಕ ಕಟ್ಟುಪಾಡುಗಳ, ಸಾಮಾಜಿಕ ನ್ಯಾಯದ ವ್ಯವಸ್ಥೆಯ ರೂಪುರೇಷೆಯನ್ನು ಹಾಕಿಕೊಟ್ಟಿದ್ದರು. ಆದರೆ ಇಂದು ಅವೆಲ್ಲಾ ಅಷ್ಟು ಕಟ್ಟುನಿಟ್ಟಾಗಿ ಚಾಲನೆಯಲ್ಲಿಲ್ಲ.''[೨] ಎಂಬ ಅಭಿಪ್ರಾಯಗಳು ಇಂದಿನ ಎಲ್ಲಾ ಬುಡಕಟ್ಟುಗಳ ಸಾಮಾಜಿಕ ವ್ಯವಸ್ಥೆಯನ್ನು ಬಿಂಬಿಸುತ್ತದೆ.

ಮರಾಟಿಗರ ಜೀವನವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ, ಸಂಪ್ರದಾಯಗಳನ್ನು ಕಳಚುತ್ತಾ ಸಾಗುವಂತೆ ತೋರುತ್ತಿದೆ. ಸಂಪ್ರದಾಯಗಳನ್ನು ವೈಜ್ಞಾನಿಕ ದೃಷ್ಟಿಕೋನದಿಂದ ನೋಡುವ ಪ್ರಯತ್ನ ಮಾಡಬೇಕು. ಎಲ್ಲಾ ಸಾಂಸ್ಕೃತಿಕ-ಸಂಪ್ರದಾಯಗಳನ್ನು ವಿವೇಚಿಸದೇ ತಿರಸ್ಕಾರದಿಂದ ನೋಡುವುದೂ ಸಲ್ಲ. ಬಹುತೇಕ ಸಂಪ್ರದಾಯಗಳು ಪರೋಕ್ಷವಾಗಿ ಒಂದಲ್ಲ ಒಂದು ರೀತಿಯಲ್ಲಿ ಮಾನವಕುಲಕ್ಕೆ ಒಳಿತನ್ನೇ ಬಯಸುವಂಥವು ಎಂಬುದನ್ನೂ ಗಮನಿಸಬೇಕಾಗಿದೆ. ಸಾಂಸ್ಕೃತಿಕ-ಸಾಂಪ್ರದಾಯಿಕದಿಂದ ಕೂಡಿದ ಹಿಂದಿನ ಜೀವನ ವಿಧಾನ ಇಂದು ಕಾಣಲಾರೆವು. ಅಂದಿನ ಜೀವನ ಪ್ರಕೃತಿದತ್ತವಾದ ಹುರುಪು, ಹುಮ್ಮಸ್ಸಿನಿಂದ ಕೂಡಿದ್ದರೆ ಇಂದು ಯಾಂತ್ರಿಕವಾಗಿದೆ. ಒಂದು ಕಾಲದಲ್ಲಿ ಮರಾಟಿಗರು ವಾಸಿಸುವ ಪ್ರದೇಶ ಗುಡ್ಡ, ಬೆಟ್ಟ, ಕಾಡುಗಳಿಂದಾವೃತವಾಗಿದ್ದರೆ ಇಂದು ಆ ವಾತಾವರಣವೇ ಇಲ್ಲವಾಗಿದೆ. ಗುಡ್ಡ ಕಾಡುಗಳ ಅಂಚಿನಲ್ಲಿ ಚಿಕ್ಕ ಚಿಕ್ಕ ಗುಡಿಸಲುಗಳಲ್ಲಿ ಬದುಕುತ್ತಿದ್ದ ಮರಾಟಿಗರು ಇಂದು ಊರಿನ ಎಲ್ಲಾ ಪ್ರದೇಶಗಳಲ್ಲಿ ಮನೆಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದಾರೆ. ಸಾಮಾನ್ಯವಾಗಿ ಮರಾಟಿಗರ ಮನೆಗಳು ಗುಂಪು ಗುಂಪಾಗಿರುವುದನ್ನು ಕಾಣಬಹುದು. ಐದರಿಂದ ಹತ್ತು, ಹದಿನೈದು ಮನೆಗಳು ಅಕ್ಕಪಕ್ಕದಲ್ಲಿದ್ದು ಎಲ್ಲಾ

ಕುಟುಂಬಸ್ಥರೇ ಆಗಿರುತ್ತಾರೆ. ವಿರಳವಾಗಿ ಮರಾಟಿಗರ ಒಂದೊಂದು ಮನೆಗಳೂ ಇಲ್ಲದಿಲ್ಲ. ಕಾಡು ಗುಡ್ಡ ಬೆಟ್ಟಗಳ ಅಂಚಿನಲ್ಲಿ 'ಕುಮೇರಿ' ಬೇಸಾಯ ಮಾಡುತ್ತಿದ್ದ ಮರಾಟಿಗರನ್ನು ಇಂದು ಕಾಣಲಾರೆವು. 'ಕುಮೇರಿ' ಬೇಸಾಯವು ಅವರ ಹೊಟ್ಟೆ ತುಂಬಿಸಿಕೊಡಲು ಸಾಧ್ಯವಾಗಿಲ್ಲ. ಬದಲಾದ ಸಮಾಜದಲ್ಲಿ ಅವರೂ ಬದಲಾಗುತ್ತಿದ್ದಾರೆ. ತಮ್ಮದೇ ಆದ ಸಣ್ಣ-ಪುಟ್ಟ ಜಮೀನಿನ ಒಡೆಯರಾಗುತ್ತಿದ್ದಾರೆ. ಹಾಗೆಯೇ ಈಗಾಗಲೇ ಪಟ್ಟಣ, ನಗರ ಸೇರಿದ ಮರಾಟಿಗರು ತಮ್ಮ ಸಂಪ್ರದಾಯ ಆಚರಣೆಗಳ ಬಗ್ಗೆ ನಿರಾಸಕ್ತಿ ಹೊಂದಿದ್ದಾರೆ ಎಂದು ಹಿರಿಯ ವಕ್ತೃಗಳು ವಿಷಾಧ  ವ್ಯಕ್ತಪಡಿಸುತ್ತಾರೆ.

ಆದಿ ಮಾನವನಿಂದ ಆಧುನಿಕ ಮಾನವನೆಡೆಗೆ ಆತನ ಬದುಕಿಗೆ ಒಂದು ರೂಪ ಕೊಟ್ಟು ಬೆಳೆಸುವಲ್ಲಿ, ನಾಗರಿಕ ಜೀವನ ನಡೆಸುವಲ್ಲಿ ಸಂಪ್ರದಾಯಾಚರಣೆಗಳು ಪ್ರಮುಖ ಪಾತ್ರ ವಹಿಸುತ್ತವೆ. ಅವು ಆತನ ಬಾಳಿನ ಅವಿಭಾಜ್ಯ ಅಂಗಗಳಾಗಿವೆ. ಬಾಳೆಂಬ ಕಲೆಯ ಬಗ್ಗೆ ಸದಾ ಎಚ್ಚರವಾಗಿದ್ದು ಅದನ್ನು ಸಂಸ್ಕರಿಸಿ ಉತ್ತಮವಾಗಿರಿಸಬೇಕೆಂಬುದೇ ನಮ್ಮ ಪೂರ್ವಜರ, ಜನಪದರ ಆಶಯವಾಗಿದೆ. ಸಂಪ್ರದಾಯಗಳು ನಂಬಿಕೆಗಳ ಮೂಲಕ ಮೂರ್ತರೂಪ ಪಡೆದು ಉತ್ತಮ ಸಂಸ್ಕಾರವಂಥ ವ್ಯಕ್ತಿಯಾಗಿ ಜೀವನ ನಡೆಸುವಂತೆ ಮಾಡುವುದೇ ಈ ನಂಬಿಕೆ-ಸಂಪ್ರದಾಯಾಚರಣೆಗಳ ಮುಖ್ಯ ಉದ್ದೇಶವೂ ಹೌದು. ''ಸಮಾಜವನ್ನು ನಿಯಂತ್ರಿಸುವ ಮತ್ತು ಅದನ್ನು ಸರಿಯಾದ ದಾರಿಯಲ್ಲಿ ಕೊಂಡೊಯ್ಯುವ ಶಕ್ತಿ ಸಂಪ್ರದಾಯಕ್ಕಿದೆ. ಎಂಥ ದರ್ಪಿಷ್ಟನಾದ ವ್ಯಕ್ತಿಯೂ ಅದಕ್ಕೆ ತಲೆಬಾಗಲೇಬೇಕು. ಇಲ್ಲವಾದರೆ ಅವನು ನಿಶ್ಚಿಂತೆಯಿಂದ ನಿರಾತಂಕವಾಗಿ ಬಾಳ್ವೆ ನಡೆಸುವುದು ಕಷ್ಟವಾಗುತ್ತದೆ. ಅವನಿಗೆ ಸಮಾಜದಲ್ಲಿ ಬೆಲೆಯಿಲ್ಲದಾಗುತ್ತದೆ.''[೩] ಹಾಗಾಗಿಯೇ ಯಾವುದೇ ರೀತಿಯ ತಂತ್ರಜ್ಞಾನಗಳ, ಹೊಸ ಹೊಸ ಆವಿಷ್ಕಾರಗಳ ಮಧ್ಯೆಯೂ ಸಂಪ್ರದಾಯಗಳು, ನಂಬಿಕೆಗಳು, ಆಚರಣೆಗಳು ನಿರಾತಂಕವಾಗಿ ಮುಂದುವರೆದಿದೆ.

ನಿರ್ದಿಷ್ಟ ಸಮಾಜವೊಂದರ ಸಾಂಸ್ಕೃತಿಕ-ಜಾನಪದ ಅಧ್ಯಯನದಲ್ಲಿ ನಂಬಿಕೆ ಮತ್ತು, ಸಂಪ್ರದಾಯಗಳು ಮತ್ತು ಆಚರಣೆಗಳು ಪ್ರಮುಖವಾದ ಪಾತ್ರವಹಿಸುತ್ತವೆ. ನಂಬಿಕೆಗಳಿಲ್ಲದ ಸಮಾಜವಿಲ್ಲ. ಸಂಪ್ರದಾಯ, ಆಚರಣೆಗಳಿಲ್ಲದ ಸಮಾಜವಿಲ್ಲ. ಅವುಗಳಿಲ್ಲದೆ ಆ ಸಮಾಜದ ಜೀವನವೇ ಮುಂದೆ ಸಾಗಲಾರದು. ಮರಾಟಿಗರ ಜೀವನಾವರ್ತನ ಆಚರಣೆಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕಾಲಕ್ಕನುಗುಣವಾಗಿ ಉಂಟಾಗುವ ಬದಲಾವಣೆ ಮರಾಟಿಗರ ಜೀವನಾವರ್ತನ ಆಚರಣೆಗಳಿಗೂ ಹೊರತಾಗಿಲ್ಲ.

**ಬಳಿ ಪದ್ಧತಿ**

ಭಾರತೀಯ ಸಮಾಜದಲ್ಲಿ ವರ್ಣವ್ಯವಸ್ಥೆಯು ಶಿಥಿಲಗೊಂಡು ಕ್ರಮೇಣ ಸಾವಿರಾರು ಜಾತಿಗಳು ಸೃಷ್ಟಿಯಾದವು. ಈ ಜಾತಿ ವ್ಯವಸ್ಥೆಗೆ ಭದ್ರವಾದ ಅಡಿಪಾಯಗಳೆಂದರೆ ಬಳಿಗಳು ಅಥವಾ ಗೋತ್ರಗಳು. ಬಳಿ, ಬರಿ, ಕುಲ, ಗೋತ್ರ ಮುಂತಾದ ಪದಗಳು ವಂಶದ ಅರ್ಥವನ್ನು ಸೂಚಿಸುವ ಪದಗಳಾಗಿವೆ. ಬ್ರಾಹ್ಮಣರು 'ಗೋತ್ರ' ಎಂದರೆ ಇತರರು ವಂಶ, ಕುಲ, ಬರಿ, ಬಳಿ ಎಂದು ಕರೆಯುತ್ತಾರೆ. 'ಬರಿ' ಎಂಬುದು ತುಳು ಭಾಷೆಯ ಪದ. 'ಬಳಿ' 'ಬಳ್ಳಿ' ಎಂಬ ಪದದಿಂದ ನಿಷ್ಪನ್ನವಾಗಿರಬಹುದು.

ಈ ಕುಲ-ಗೋತ್ರ ಎನ್ನುವುದು ಜನಪದರ ಒಂದು ವೈಶಿಷ್ಟ್ಯತೆ. ಪ್ರಾದಿಮಕಾಲ ಕಳೆದು ಶಿಲಾಪೂರ್ವ ನವ ಶಿಲಾಯುಗಗಳು ಮೊದಲ್ಗೊಂಡು ಮಾನವ ಗುಂಪುಗಳನ್ನು ವಿವಿಧ ಭೌಗೋಳಿಕ ಪ್ರದೇಶಗಳಿಗೆ ಚೆದುರಿ ವಿಭಿನ್ನ ವೃತ್ತಿಗಳನ್ನು ಕೈಗೊಂಡಾಗ ತಮ್ಮ ತಮ್ಮ ಗುಂಪನ್ನು ಒಂದೊಂದು ಸಂಕೇತದ ಮೂಲಕ ಗುರುತಿಸಿಕೊಂಡು ಬಂದರು. ಪ್ರಕೃತಿಯಲ್ಲಿ ಕಂಡ ಪ್ರಾಣಿ, ಪಕ್ಷಿ, ಗಿಡ, ಮರ, ಬಳ್ಳಿಗಳನ್ನು ಗುರುತಿಸಿ ತಮ್ಮ ಸಂಕೇತವೆಂದು ಅದರ ರಕ್ಷಣೆ ಮಾಡುತ್ತಾ ಬಂದು ಕಾಲಾಂತರದಲ್ಲಿ ಅದುವೇ ಕುಲ ಸಂಕೇತವಾಯಿತು.

ಬುಡಕಟ್ಟಿನ ರಕ್ತ ಸಂಬಂಧದ ಮೂಲ ಕೊಂಡಿಯೋ ಈ ಬಳಿ. ಬಳಿಯನ್ನು ಅನುಸರಿಸಿಯೇ ವೈವಾಹಿಕ ಸಂಬಂಧವೇರ್ಪಡುತ್ತದೆ. ಆದ್ದರಿಂದ ಈ ಬಳಿಗಳ ಆಧಾರದಿಂದಲೇ ಬುಡಕಟ್ಟಿನ ಮೂಲದೊಂದಿಗೆ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡಲು ಸಾಧ್ಯವಾಗುತ್ತದೆ.

ದಕ್ಷಿಣ ಕನ್ನಡ, ಉಡುಪಿ, ಕೊಡಗು ಮತ್ತು ಕಾಸರಗೋಡು ಜಿಲ್ಲೆಯ ಮರಾಟಿಗರಲ್ಲಿ ಪ್ರಚಲಿತದಲ್ಲಿರುವ ಬಳಿಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಲಾಗಿದೆ. ಪ್ರಾದೇಶಿಕವಾಗಿ ಬಳಿಗಳು ಭಿನ್ನ ಭಿನ್ನ ಹೆಸರುಗಳಿಂದ ಕೂಡಿರುವುದು ಕಂಡು ಬಂದಿದೆ. ಮೂಲ ಬಳಿಗಳಿಗೆ ಅನೇಕ ಹೊಸ ಹೊಸ ಬಳಿಗಳು ಸೇರಿಕೊಂಡಿವೆ. ಹಾಗೆಯೇ ಪ್ರತಿಯೊಂದು ಬಳಿಗಳಿಗೂ ವೈಶಿಷ್ಟ್ಯವಿರುವುದು ಕಂಡು ಬಂದಿದೆ.

**ಬಳಿಗಳ ಹೆಸರು**

೦೧. ಅಡೋಲ್ಕಾರ್

೦೨. ಅರೆಕ್ಕಾರ್

೦೩. ಅಗ್ರಿಯಾ

೦೪. ಬಡೆಕಾರ್

೦೫. ಬುಳೆಗಾರ್

೦೬. ಬಡಮ

೦೭. ಬಾಂದ್ಯೋ

೦೮. ಬೀಂದ್ರೊ

೦೯. ಬೀತ್‌ಮಾ

೧೦. ಬೇಂದ್ರೆ

೧೧. ಬೀಷ್ಮ (ಬೀಷಣ, ಬೀಸ)

೧೨. ಚವಣ್‌ಕಾರ್ (ಚವಾಣ)

೧೩. ದುವಾಳಿಯಾ (ದುಂವಾಳಿಏ)

೧೪. ಡೋರೆಕಾರ್ (ದರೆಕಾರ್)

೧೫. ಡಾಂಗೆಕಾರ್ (ಡಾಂಗೆ)

೧೬. ಡಾಂಬ್ರಿಯಾ

೧೭. ಡುಮ್ಮಿಕಾರ್

೧೮. ಡೊರ್ಲ

೧೯. ಡೋಲಣ್ಣ (ಡೋಲ)

೨೦. ಡೋಪ

೨೧. ಗಾರ್ಡಿಯಾ (ಗಾರ್ಡಿಯಾಂಚಿ)

೨೨. ಗರಡಿ

೨೩. ಗೊಟುನ್ಕರ್

೨೪. ಗೋರ್ಲ

೨೫. ಜಡಿಯಾರ್

೨೬. ಜೋವಾನ್

೨೭. ಕಾವಡ್ಕರ್ (ಕಾಡೆಕಾರ್)

೨೮. ಕಸೋಳ್ಕಾರ್

೨೯. ಕರ್ಮಲೆ (ಕರಂಬೆ, ಕರ್‌ಬೆ)

೩೦. ಕುಳ್ಕಾಂಚಿ

೩೧. ಕಂಡ್ರೆ (ಖಾಂಡೇಕಾರ್, ಕಂಡಣ್ಣ)

೩೨. ಕುಳಿಯ

೩೩. ಕರುವೊತ್ಕಾರ್

೩೪. ಕೆಂಚಣ್ಣ

೩೫. ಕುಸುಮ

೩೬. ಲಾಂಜಗಾರ್

೩೭. ಮಂಜೊಲ್‌ಕಾರ್

೩೮. ಮಂಜೋಲಣ್ಣ

೩೯. ಮಾಲ್ಯ

೪೦. ಮಾಂಡೋವ್‌ಕಾರ್

೪೧. ನವಲ್ಯಾಂಚೆ (ನವಲೆ)

೪೨. ನೋವುಲೆಕಾರ್

೪೩. ಪಾಟೇಲ

೪೪. ಪೆನ್ಸ್‌ಲೆಗಾರ

೪೫. ಪಿನ್ಕಳಿಕಾರ್

೪೬. ಪಾಟ್‌ಕಾರ್

೪೭. ಪರೋಡಿಯಾ

೪೮. ರೆವಿನ್ಟ್ಕಾರ್ (ನೇವಣ್‌ಕಾರ್)

೪೯. ಸೆಡ್ನೊಲ್‌ಗಾರ್

೫೦. ಸಾವಂತ

೫೧. ಸುಗುಣ

೫೨. ಸಿಂದ (ಶಿಂದೋ)

೫೩. ಸಿರಿಯಣ್ಣ

೫೪. ಸಾಲ್ಕೆ

೫೫. ಶಿಲ್ಪ

೫೬. ಶ್ರವಣ

೫೭. ಸಾಲ್ವೆ (ಸಾಲ್ವೆಗಾರ್)

೫೮. ತಾಂಬೆ

೫೯. ತೆಲ್‌ಪನ್‌ಕಾರ್

೬೦. ಉಪ್ಪಣ್ಣ

೬೧. ವನೂಂಟೋಳಿಕಾರ್

೬೨. ವಾಲಂಬೆ

೬೩. ವಾನಿಯಾ

೬೪. ಅಡ್ಕಿಳಿಕಾರ್

೬೫. ವಾದ

೬೬. ಪೂಂಕ್ರ

೬೭. ಇರ್ಮಾಳ್ ( ನಿರ್ಮಲೆ)

೬೮. ಪಬಣಂಜಿ

೬೯. ಕೊಂಚಾಂಚಿ

೭೦. ದೊಪ್ಪಾಂಚಿ

ಇಲ್ಲಿ ಸುಮಾರು ೭೦ ಬಳಿಗಳನ್ನು ಕ್ಷೇತ್ರಕಾರ್ಯ ಹಾಗೂ ಇತರೆ ಆಕರಗಳಿಂದ ಸಂಗ್ರಹಿಸಿದ್ದೇನೆ. ಒಟ್ಟಾರೆಯಾಗಿ ಮರಾಟಿಗರ ಬಳಿಗಳ ಸಂಖ್ಯೆ ೧೦೦ ಇರಬಹುದು ಎಂದು ವಕ್ತೃಗಳು ಅಭಿಪ್ರಾಯಪಡುತ್ತಾರೆ. ಇಲ್ಲಿನ ಪ್ರತಿಯೊಂದು ಬಳಿ (ಬರಿ) ಯೂ ಒಂದೊಂದು ಗಿಡ, ಹೂ, ಬಳ್ಳಿಯ ಹೆಸರಿನಿಂದ ಕೂಡಿವೆ.

ಕೆಲವೊಂದು ಬಳಿಗಳ ಮಧ್ಯೆ ಯಾವುದೇ ರೀತಿಯ ವೈವಾಹಿಕ ಸಂಬಂಧ ಏರ್ಪಡುವುದಿಲ್ಲ. ಉದಾ: ಬಡೆಗಾರ್ ಬಳಿಯವರು ದುವಾಲಿಯಾ ಬಳಿಯವರ ಮಧ್ಯೆ ಸಂಬಂಧವೇರ್ಪಡುವುದಿಲ್ಲ. ಹಾಗೆಯೇ ಕೆಲವು ಬಳಿಗಳ ಮಧ್ಯೆ ಪ್ರಥಮ ಪ್ರಾಶಸ್ತ್ಯದಲ್ಲಿ ಸಂಬಂಧವೇರ್ಪಡುತ್ತವೆ. ಉದಾ: ಬಡೆಗಾರ ಮತ್ತು ಲಾಂಜಗಾರ. ಪೆನ್‌ಕ್ಲೆಗಾರ ಮತ್ತು ಸಾಲ್ವೆಗಾರ. ಮರಾಟಿಗರ ಬಳಿಗಳ ಮತ್ತೊಂದು ವೈಶಿಷ್ಟ್ಯವೆಂದರೆ ಬಳಿಗಳ ಮುಖಾಂತರ ಗುಣ ನಡತೆಗಳನ್ನು ಸ್ವಭಾವಗಳನ್ನು ಕಂಡು ಹಿಡಿಯುವುದು. ಸಾಲ್ವೆಗಾರ ಬಳಿಯ ಕುಟುಂಬದಲ್ಲಿ ಗಂಡ ಬೇಗನೆ ತೀರಿಹೋಗುವುದು, ಸಾಲಗಾರನಾಗುವುದು. ದುವಾಳಿಯ ಬಳಿಯವರು ಬೆಳವಣಿಗೆ ಹೊಂದುವುದಿಲ್ಲ.

ಇವೆಲ್ಲಾ ಮೂಡನಂಬಿಕೆಗಳು ಎಂದರೆ ಇವು ನಮ್ಮ ಹಿರಿಯರ ಅನುಭವದ ಮೂಲಕ ಬಂದಂಥವು. ಅಷ್ಟು ಸುಲಭವಾಗಿ ನಿರಾಕರಿಸಲಾಗದು ಎಂದು ಹಿರಿಕಿರಿಯರು ಹೇಳುತ್ತಾರೆ. ಇಂದು ಈ ರೀತಿಯ ನಂಬಿಕೆಗಳು ಮರೆಯ ಅಂಚಿಗೆ ಸರಿಯುತ್ತಿವೆ. ಹಿಂದಿನ ಕಾಲದಲ್ಲಿ ಪ್ರತಿಯೊಂದು ಮರಾಟಿಗರ ಮದುವೆಯಲ್ಲಿಯೂ ಉಡುಗೊರೆ ತಂದ ಸಂಬಂಧಿಕರನ್ನು ಓರ್ವ ಹಿರಿಯರು ಹೆಸರಿನ ಜತೆಗೆ ಬಳಿಯನ್ನು ಹೇಳುವಷ್ಟು ನಿಪುಣರಾಗಿದ್ದರಂತೆ. ವೈವಾಹಿಕ ಸಂಬಂಧಗಳನ್ನು ಬೆಳೆಸುವಲ್ಲಿ ಹಿಂದಿನ ಕಾಲದಿಂದಲೂ ತುಂಬಾ ಆಸ್ಥೆ ವಹಿಸುತ್ತಾ ಬಂದಿರುವುದು ಇದರಿಂದ ತಿಳಿಯುತ್ತದೆ. ಕೇವಲ ಬುಡಕಟ್ಟುಗಳಲ್ಲಿ ಮಾತ್ರ ಇಂಥ ನಂಬಿಕೆಗಳು ಮನೆಮಾಡಿವೆ ಎಂದು ಹೇಳಲಾಗದು. ಪ್ರತಿಯೊಂದು ಸಮಾಜದಲ್ಲಿಯೂ ಎಲ್ಲಾ ಸ್ತರದ ಬದುಕೂ ನಂಬಿಕೆಗಳಿಂದ ಆವೃತವಾಗಿವೆ.

**ಜನನ ಸಂಬಂಧಿ ಆಚರಣೆಗಳು**

ಹುಟ್ಟಿನಿಂದ ಸಾವಿನವರೆಗೆ ಪ್ರತಿಯೊಂದು ವಿಷಯಕ್ಕೂ ಸಂಬಂಧ ಪಟ್ಟಂತೆ ಅಸಂಖ್ಯಾತ ನಂಬಿಕೆ, ಆಚರಣೆಗಳು ಮಾನವನ ಬದುಕಿನಲ್ಲಿ ಹಾಸುಹೊಕ್ಕಾಗಿವೆ. ಜನಪದರು ಕಂಡುಂಡ ಅನುಭವಗಳ ಕಾರ್ಯ ಕಲ್ಪನೆಗಳು ಮುಂದೆ ಸಂಪ್ರದಾಯಗಳಾಗಿ, ಆಚರಣೆಗಳಾಗಿ ಸಮುದಾಯಗಳಲ್ಲಿ, ಸಮಾಜದಲ್ಲಿ ನೆಲೆಕಂಡವು. ಒಂದೊಂದು

ಸಮುದಾಯಗಳು ಅದರದ್ದೇ ಆದಂಥ ಆಚರಣೆ ಸಂಪ್ರದಾಯಗಳನ್ನು ಹೊಂದಿರುವುದು ನಮ್ಮ ಭಾರತೀಯ ಸಮಾಜದ ವೈಶಿಷ್ಟ್ಯ.

ಅಳುತ್ತಾ ಈ ಲೋಕಕ್ಕೆ ಬರುವ ಶಿಶುವನ್ನು ನಗುನಗುತ್ತಾ ಸ್ವಾಗತಿಸುವ ಸನ್ನಿವೇಶ ಅತ್ಯಂತ ಸಂತೋಷದಾಯಕವಾದುದು. ಮಗುವನ್ನು ಮನಸ್ಸಿನ ಮನುಕುಲದ ತಂದೆ ಎಂದು ಬಲ್ಲವರು ಹೇಳಿದಂತೆ ವಂಶವಾಹಿನಿಯ ಕುಡಿಯಾಗಿ ಆಗಮಿಸುವ ಮಗುವನ್ನು ಜತನದಿಂದ ಕಾಪಾಡುವ ಸಲುವಾಗಿ ಜನಪದ ಸಮಾಜ ತನ್ನದೇ ಆದ ಸಂಸ್ಕಾರ ಸಂಪ್ರದಾಯಗಳನ್ನು ಹೊಂದಿದೆ.

**ಜನನ ನಾಮಕರಣ**

ಜನನ ಸಂದರ್ಭದಲ್ಲಿ ಊರಿನ, ಹತ್ತಿರದ ಅನುಭವಸ್ಥ ಸೂಲಗಿತ್ತಿ ಸುಸೂತ್ರ ಹೆರಿಗೆಯನ್ನು ಮಾಡಿಸುತ್ತಾಳೆ. ಸೂಲಗಿತ್ತಿ ಕಾರ್ಯ ಇಲ್ಲಿ ಜಾತಿಯಿಂದ ಹೊರಗಾಗಿದೆ. ಯಾವುದೇ ಜಾತಿಯ ಸೂಲಗಿತ್ತಿ ಕೆಲಸ ನಿರ್ವಹಿಸುತ್ತಾಳೆ. ಹೆರಿಗೆ ಸಾಮಾನ್ಯವಾಗಿ ಮರಾಟಿಗರಲ್ಲಿ ಮನೆಯೊಳಗೆಯೇ ನಡೆಯುತ್ತದೆ. ಇತರೆ ಯಾವುದೇ ಗುಡಿಸಲುಗಳ ಅವಶ್ಯಕತೆ ಮರಾಟಿಗರಲ್ಲಿ ಕಂಡು ಬರುವುದಿಲ್ಲ. ಮಗು ಜನಿಸಿದ ಕೂಡಲೇ ಸಂಬಂಧಿಕರಿಗೆಲ್ಲಾ, ಆಪ್ತರಿಗೆ ಸುದ್ದಿ ಮುಟ್ಟಿಸಲಾಗುತ್ತದೆ. ಗಂಡು ಮಗು ಹುಟ್ಟಿದರೆ ಕಲ್ಲು ಸಕ್ಕರೆ ಜತೆಗೆ ತೆಂಗಿನಕಾಯಿ ಹರಳುಗಳನ್ನು ಹಂಚುತ್ತಾರೆ. ಮಗುವು ಹೆಣ್ಣಾಗಿದ್ದರೆ ಸಕ್ಕರೆ ಹಂಚುತ್ತಾರೆ. ಹೆರಿಗೆಯ ನಂತರದ ಕಸವನ್ನು ಕಾಸರಕನ ಮರದ ಹತ್ತಿರ ಹೊಂಡ ತೆಗೆದು ಹೂಳುತ್ತಾರೆ. ಜನಿಸಿದ ಮಗುವಿಗೆ ಸ್ನಾನಾದಿಗಳನ್ನು ಮಾಡಿಸಿ ತಾಯಿಯ ಮೊಲೆಹಾಲನ್ನು ಕುಡಿಸುತ್ತಾರೆ. ಅನುಭವಸ್ಥ ಹೆಂಗಸರು ಮಣೆಯ ಮೇಲೆ ಕುಳಿತು ಕಾಲುಗಳನ್ನು ನೀಡಿ ಮಗುವನ್ನು ಅಂಗಾತ ಮಲಗಿಸಿ ಸ್ನಾನ ಮಾಡಿಸುತ್ತಾರೆ. ತೂತಿರುವ ತೆಂಗಿನ ಗೆರಟೆಯಿಂದ ಉಗುರು ಬೆಚ್ಚಗಿನ ನೀರನ್ನು ಹೊಯ್ಯುತ್ತಾರೆ. ಇತರೆ ಯಾವುದೇ ರೀತಿಯ ಬಿಂದಿಗೆ (ಚೊಂಬು) ಗಳನ್ನು ಉಪಯೋಗಿಸುವುದಿಲ್ಲ. ತೆಂಗಿನ ಗೆರಟೆಯಿಂದ ಸಮತೋಲನವಾದ ಪ್ರಮಾಣದಲ್ಲಿ ನೀರು ಮಗುವಿನ ಶರೀರಕ್ಕೆ ಬೀಳುವುದು ಆರೋಗ್ಯಕರ ಎಂದು ಹಿರಿಯರ ಅಭಿಪ್ರಾಯವಾಗಿದೆ.

**ಅಮೆ**

ಮರಾಟಿಗರಲ್ಲಿ ಜನನದ ಸೂತಕ ಹನ್ನೊಂದು ದಿನಗಳಿರುತ್ತವೆ. ಸಾವಿನ ಸೂತಕಕ್ಕಿಂತ ಜನನದ ಸೂತಕ ಕಟ್ಟುನಿಟ್ಟಾಗಿ ಪಾಲಿಸಲ್ಪಡುತ್ತದೆ. ಹೆರಿಗೆಯಾದ ಹನ್ನೊಂದನೇ ದಿನ ' ಅಮೆ' ಆಚರಿಸಲಾಗುತ್ತದೆ. ಅಂದು ಮಗುವನ್ನು ತೊಟ್ಟಿಲಲ್ಲಿ ಹಾಕುತ್ತಾರೆ. ಅದುವರೆಗೂ ಮಗುವನ್ನು ನೆಲದಲ್ಲಿ ಹಾಸಿಗೆಯಲ್ಲಿ ಮಲಗಿಸುತ್ತಾರೆ. 'ಅಮೆ' ಕಾರ್ಯಕ್ರಮವು ರಾತ್ರಿಯ ಹೊತ್ತಲ್ಲಿಯೇ ನಡೆಯುತ್ತದೆ. ಮಹಿಳೆಯರೇ ಮುಖ್ಯ ಭೂಮಿಕೆಯಲ್ಲಿರುವ ಈ ಕಾರ್ಯಕ್ರಮಕ್ಕೆ ಆಮಂತ್ರಿತರಲ್ಲಿ ಕೂಡ ಮಹಿಳೆಯರೇ ಬಂದು ಸೇರುತ್ತಾರೆ. ಈಗ್ಗೆ ೧೦ ವರ್ಷಗಳ ಹಿಂದೆ ಪ್ರತಿಯೊಂದು ಅಮೆ ಕಾರ್ಯಕ್ರಮಕ್ಕೆ ಆಮಂತ್ರಿತರು ಒಂದು ಬಾಟಲಿ ತೆಂಗಿನ ಎಣ್ಣೆಯ ಜೊತೆಗೆ ತೆಂಗಿನ ಕಾಯಿಗಳನ್ನು ಉಡುಗೊರೆಯಾಗಿ ನೀಡುತ್ತಿದ್ದರು. ಇಂದು ಎಣ್ಣೆ ತೆಂಗಿನಕಾಯಿಗಳ ಬದಲಾಗಿ ಹಣ ಕೊಡುವುದರಲ್ಲಿ ಸಂತೋಷ ಪಡುತ್ತಾರೆ. ತೆಂಗಿನ ಎಣ್ಣೆ ಮಗು ಮತ್ತು ಬಾಣಂತಿಯ ಆರೋಗ್ಯ ಕಾಪಾಡುವ ಒಂದು ತೈಲವಾಗಿದ್ದು

ಮನೆಯವರಿಗೆ ಅನುಕೂಲವಾಗಲಿ ಎಂಬ ಆಶಯದಿಂದ ಉಡುಗೊರೆ ನೀಡುತ್ತಿದ್ದರು. ಅಂದು ಆಮಂತ್ರಿತರ ಸಮ್ಮುಖದಲ್ಲಿ ಮಗುವನ್ನು ತೊಟ್ಟಿಲಲ್ಲಿ ತೂಗುತ್ತಾರೆ. ಬಹುತೇಕ ಮರಾಟಿಗರ ಮನೆಯಲ್ಲಿ ಬೆತ್ತದಿಂದ ತಯಾರಿಸಿದ ತೊಟ್ಟಿಲುಗಳಿರುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನೋಡಿದ್ದೇನೆ. ಐವತ್ತು-ಅರವತ್ತು ವರ್ಷಗಳ ಬಾಳಿಕೆಯ ತೊಟ್ಟಿಲುಗಳು ತಲೆತಲಾಂತರದಿಂದ ಮಕ್ಕಳ ಪೋಷಣೆ, ಬೆಳವಣಿಗೆಯಲ್ಲಿ ಬಹುಮುಖ್ಯವಾದ ಕೊಡುಗೆಯನ್ನು ನೀಡಿದವುಗಳು. ಇದರ ಸ್ಥಾನಕ್ಕೆ ಇಂದು ಅಲ್ಯುಮಿನಿಯಂ ಮತ್ತು ಕಬ್ಬಿಣದ ತೊಟ್ಟಿಲುಗಳು ಬಂದಿವೆ. ಆರೋಗ್ಯದ ದೃಷ್ಟಿಯಿಂದ ನೋಡಿದರೆ ಕಾಡಿನಲ್ಲಿ ದೊರೆಯುವ ಬೆತ್ತದಿಂದ ತಯಾರಿಸಿದ ತೊಟ್ಟಿಲುಗಳೇ ಉತ್ತಮವಾದವುಗಳು. ಕಾರಣ ಅವು ಒಂದು ರೀತಿಯಲ್ಲಿ ಹವಾನಿಯಂತ್ರಿತವಾಗಿದ್ದು ಮಗು ಚೆನ್ನಾಗಿ ನಿದ್ದೆ ಮಾಡುತ್ತದೆ. ಆದರೆ ಇತರೆ ಲೋಹದ ತೊಟ್ಟಿಲುಗಳಲ್ಲಿ ಮಕ್ಕಳು ಚಡಪಡಿಸುವುದನ್ನು ಅನುಭವಸ್ಥ ವಕ್ತೃಗಳೆ ಕಂಡುಕೊಂಡಿದ್ದಾರೆ. ಮಗುವಿನ ತಂದೆ, ತಾಯಿ-ಅಜ್ಜ ಅಜ್ಜಿಯರ ಒಮ್ಮತದಂತೆ ತಾಯಿಯ ಮಡಿಲಲ್ಲಿ ಮಗುವನ್ನು ಮಲಗಿಸಿ ಹಿರಿಯರು ಕಿವಿಯ ಹತ್ತಿರ ಮೂರು ಸಾರಿ ಹೆಸರನ್ನು ಹೇಳುವ ಮೂಲಕ ನಾಮಕರಣ ಮಾಡುತ್ತಾರೆ. ಪಂಚಾಂಗ, ಜ್ಯೋತಿಷ್ಯ ಅಥವಾ ಹಿರಿಯರ ಒಪ್ಪಿಗೆಯಂತೆ ಹೆಸರನ್ನಿಡಲಾಗುತ್ತದೆ. ಹಿಂದಿನ ಕಾಲದಲ್ಲಿ ಸುಬ್ಬ, ರಾಮ, ಚೋಮ, ಬಾಲು, ಕುಂಞ, ಲಕ್ಷ್ಮಿ, ದೇವಕಿ, ಜಾನಕಿ ಎಂಬ ಹೆಸರುಗಳಿದ್ದರೆ ಇಂದು ಬದಲಾಗಿರುವುದು ಕಂಡು ಬರುತ್ತದೆ.

ಸ್ವಾತಂತ್ರ್ಯ ಪೂರ್ವದಲ್ಲಿ ಮರಾಟಿಗಲ್ಲಿಯೂ ಮೊದಲ ಸಲ ಮಗುವಿನ ತಲೆಕೂದಲು ಮತ್ತು ಕಿವಿ ಚುಚ್ಚುವ ಕಾರ್ಯಕ್ರಮ ಆಚರಣೆಯ ಮೂಲಕವೇ ನಡೆಯುತ್ತಿತ್ತು. ಅದನ್ನು ತುಳುವಿನಲ್ಲಿ 'ಕಜಂಬುದ ಮದಿಮೆ' ಎಂದು ಕರೆಯಲಾಗುತ್ತಿತ್ತು. ಸುಳ್ಯದ ಮಾಜಿ ಶಾಸಕರಾದ ಸುಬ್ಬಯ್ಯ ನಾಯ್ಕರು ತನಗೆ 'ಕಜಂಬುದ ಮದಿಮೆ' ಮಾಡಿರುವುದನ್ನು ನೆನಪಿಸಿಕೊಂಡಿದ್ದಾರೆ. ಒಂದು ದಿನ ನಿಗದಿಪಡಿಸಿ ಕ್ಷೌರಿಕ ಮತ್ತು ಅಕ್ಕಸಾಲಿಗರನ್ನು ಕರೆಸುತ್ತಿದ್ದರು. ಪ್ರಥಮ ಬಾರಿಗೆ ಮಗುವಿನ ತಲೆಗೆ ಕತ್ತರಿ ಹಾಕುತ್ತಿದ್ದರು. ಮತ್ತು ಎರಡು ಕಿವಿಯನ್ನು ಚುಚ್ಚಿಸಿ ಬೆಳ್ಳಿಯ ಅಥವಾ ಚಿನ್ನದ ಆಭರಣ ಹಾಕಿಸುತ್ತಿದ್ದರು. ಕಿವಿ ಚುಚ್ಚದೇ ಇರುವ ಮರಾಟಿ ಹುಡುಗರನ್ನು ಮುಸಲ್ಮಾನ ಎಂದು ಈಗಲೂ ಕೀಟಲೆ ಮಾಡುವುದು ಪ್ರಚಲಿತದಲ್ಲಿದೆ. ಜಿಲ್ಲೆಯ ಅನೇಕ ಹಿರಿಯ ಮರಾಟಿಗರಲ್ಲಿ ಇಂದೂ ಕೂಡ ಬಂಗಾರದ ಆಭರಣಗಳಿವೆ. ಹಿಂದಿನ ಕಾಲದಲ್ಲಿ ಕಿವಿ ಚುಚ್ಚದ ಹುಡುಗರಿಗೆ ಮದುವೆ ನಿರಾಕರಿಸಿದ ಉದಾಹರಣೆಗಳಿವೆ ಎಂದು ಹಿರಿಯರು ಹೇಳುತ್ತಾರೆ. ಈ ಸಂಪ್ರದಾಯಗಳೆಲ್ಲ ಇಂದು ಕಾಣಬರುವುದಿಲ್ಲ. ಸುಶ್ರುತನ ಪ್ರಕಾರ ಮಗುವಿನ ಕಿವಿ ಚುಚ್ಚುವುದರಿಂದ ರಕ್ಷಣೆ ಮತ್ತು ಸೌಂದರ್ಯ ವೃದ್ಧಿಯಾಗುವುದು. ಅಂಡವಾಯು ಮತ್ತು ಅಂಡವೃದ್ಧಿ ರೋಗಗಳು ಬರದಂತೆ ತಡೆಗಟ್ಟಬಹುದು. ಗಂಡು ಮಗುವಿಗೆ ಮೊದಲು ಬಲ ಕಿವಿ ಚುಚ್ಚಿದರೆ ಹೆಣ್ಣು ಮಕ್ಕಳಿಗೆ ಎಡಕಿವಿಯನ್ನು ಚುಚ್ಚಬೇಕೆಂಬ ಪದ್ಧತಿಯೂ ಇದೆ. ಚಿನ್ನದ ಮೇಲೆ ಬಿದ್ದ ನೀರು ದೇಹದ ಮೇಲೆ ಬೀಳುವುದು ಆರೋಗ್ಯಕರ ಎಂಬುದು ಕರ್ಣವೇಧದ ಮೂಲ ಉದ್ದೇಶಗಳಲ್ಲಿ ಒಂದು.

ತಾಯಿ ಹಾಲು ಜೊತೆಗೆ ಗಟ್ಟಿ ಆಹಾರವನ್ನು ಪ್ರಥಮ ಬಾರಿಗೆ ಮಗುವಿಗೆ ಉಣಿಸುವ ಆಚರಣೆಯೇ 'ಅನ್ನಪ್ರಾಶನ'. ಜಿಲ್ಲೆಯ ಪ್ರಸಿದ್ಧ ದೇವಸ್ಥಾನಗಳಾದ ಕಟೀಲು ಶ್ರೀ ದುರ್ಗಾಪರಮೇಶ್ವರಿ, ಕುಕ್ಕೆ ಸುಬ್ರಮಣ್ಯ, ಕಾಸರಗೋಡಿನ ಮಲ್ಲ ದುರ್ಗಾಪರಮೇಶ್ವರಿ ಇತ್ಯಾದಿ ಕ್ಷೇತ್ರಗಳಲ್ಲಿ ಅನೇಕ ಮರಾಟಿ ಕುಟುಂಬಸ್ಥರು ಮಕ್ಕಳಿಗೆ

ಅನ್ನಪ್ರಾಶನ ಮಾಡಿಸುತ್ತಾರೆ. ಇತರರು ತಮ್ಮ ಮನೆಯಲ್ಲಿ ಪ್ರತಿವರ್ಷ ನಡೆಯುವ ಹೊಸ ಅಕ್ಕಿ ಊಟದ (ಪುದ್ವಾರ್) ದಿನದಂದು ತಮ್ಮ ಮನೆಯ ಮಕ್ಕಳಿಗೆ ಪ್ರಥಮವಾಗಿ ಅನ್ನಪ್ರಾಶನ ಮಾಡಿಸುತ್ತಾರೆ.

**ಬಾಣಂತನ ಹಾಗೂ ನಿಷೇಧಗಳು**

ಸಾಂಪ್ರದಾಯಿಕವಾಗಿ ಬಾಣಂತಿಗೆ ಮತ್ತು ಮಗುವಿಗೆ ಅನೇಕ ರೀತಿಯ ಪಥ್ಯಗಳು, ನಿಷೇಧಗಳು ಇಂದಿಗೂ ದಕ್ಷಿಣ ಕನ್ನಡ ಜಿಲ್ಲೆಯ ಹಳ್ಳಿ ಹಳ್ಳಿಗಳಲ್ಲೂ ಕಂಡು ಬರುತ್ತದೆ. ಸಾಂಪ್ರದಾಯಿಕ ಚೌಕಟ್ಟನ್ನು ಮೀರಿ ಬದುಕುವವರು ಇಂದು ಬಹಳಷ್ಟಿದ್ದಾರೆ. ಮಗುವಿನ ಪ್ರಸವದ ನಂತರ ಬಾಣಂತಿಗೆ ಬೆಳ್ಳುಳ್ಳಿ, ಅರಸಿನ, ಓಲೆಬೆಲ್ಲ, ಕಾಳಜೀರಿಗೆ ಮೆಣಸು ಮತ್ತು ಉಪ್ಪು ಎಲ್ಲಾ ಸೇರಿಸಿ ಕಷಾಯ ಮಾಡಿ ಕೊಡುತ್ತಾರೆ. ಈ ರೀತಿಯ ಕಷಾಯವನ್ನು ಸತತವಾಗಿ ಮೂರು ದಿನ ಕೊಡಲಾಗುತ್ತದೆ. ಇದರಿಂದ ಪ್ರಸವದ ತೀವ್ರತರದ ನೋವು ಕಡಿಮೆಯಾಗುವುದು ಎಂದು ಹೇಳುತ್ತಾರೆ. ಹೆರಿಗೆಯ ನಂತರ ಹನ್ನೊಂದು ದಿನಗಳವರೆಗೆ ಅನ್ನಕ್ಕೆ ಸ್ವಲ್ಪ ತೆಂಗಿನೆಣ್ಣೆ ಸೇರಿಸಿ ಕೊಡುತ್ತಾರೆ. ಯಾವುದೇ ರೀತಿಯ ಸಾಂಬಾರು ಪದಾರ್ಥಗಳ ಸೇವನೆ ಸಲ್ಲದು. ಬದಲಾಗಿ ಮೆಣಸಿನಕಾಯಿ, ಹುಳಿ, ಉಪ್ಪು, ಬೆಳ್ಳುಳ್ಳಿ ಸೇರಿಸಿ ಮಾಡಿದ ಪಲ್ಯವನ್ನು ಮಾತ್ರ ಬಾಣಂತಿಗೆ ಕೊಡಲಾಗುತ್ತದೆ. ಹತ್ತು ದಿನಗಳವರೆಗೆ ಓಮ, ಮೆಣಸು, ಉಪ್ಪು, ತೆಂಗಿನಕಾಯಿ, ಚೇರೆ ಮರದ ಚಿಗುರು, ಸೀಗೆ, ಪೇರಳೆ, ದಡ್ಡಲ ಮರಗಳ ಚಿಗುರುಗಳನ್ನು ಸೇರಿಸಿ ಒಗ್ಗರಣೆ ಹಾಕಿ ತಿನ್ನಲು ಕೊಡುತ್ತಾರೆ. ಇದರಿಂದ ಹೊಟ್ಟೆ ಹುಣ್ಣು ಗುಣಮುಖವಾಗುತ್ತದೆ ಎಂದು ವಿವರಣೆ ನೀಡುತ್ತಾರೆ ವಕ್ತೃಗಳು. ಬಾಣಂತಿಗೆ ಒಂದು ತಿಂಗಳ ಕಾಲ ಓಮ, ಓಲೆಬೆಲ್ಲ, ಕರಿಮೆಣಸುಗಳನ್ನೆಲ್ಲಾ ಸೇರಿಸಿ ರುಬ್ಬಿ ಉಂಡೆಯ ರೀತಿಯಲ್ಲಿ ಮಾಡಿ ತೆಂಗಿನೆಣ್ಣೆಯಲ್ಲಿ ಕರಿಯುತ್ತಾರೆ. ಪ್ರತಿ ದಿನ ಖಾಲಿಹೊಟ್ಟೆಗೆ ಎರಡೆರಡು ಉಂಡೆಗಳನ್ನು ತಿನ್ನಲು ಕೊಡುತ್ತಿದ್ದರು. ಆದರೆ ಇಂದು ಈ ಪಥ್ಯದ ಬದಲಾಗಿ ಮಾರುಕಟ್ಟೆಯಲ್ಲಿ ಸಿಗುವ ಅರಿಷ್ಟ, ದಶಮೂಲಾರಿಷ್ಟವನ್ನು ಬಾಣಂತಿಗೆ ಕುಡಿಸುತ್ತಾರೆ.

ಜಿಲ್ಲೆಯ ಅನೇಕ ಹಳ್ಳಿಗಳಲ್ಲಿ ಬಾಣಂತಿಗೆ ಗೇರುಹಣ್ಣಿನಿಂದ ತಯಾರಿಸಿದ ದೇಶೀಯ ಮದ್ಯಪಾನೀಯವನ್ನು ಕೂಡ ಆರೋಗ್ಯದ ದೃಷ್ಟಿಯಿಂದ ಮಿತವಾಗಿ ಕೊಡುತ್ತಾರೆ. ಮಿತವಾಗಿ ಸೇವಿಸಿದರೆ ಆರೋಗ್ಯಕ್ಕೆ ಹಾನಿಕಾರಕವಲ್ಲ ಎಂಬುದು ವಕ್ತೃಗಳ ನಂಬಿಕೆಯಾಗಿದೆ. ಮೊದಲ ಒಂದು ತಿಂಗಳು ಬಾಣಂತಿಯ ಹೊಟ್ಟೆಗೆ ಉದ್ದವಾದ ಬಟ್ಟೆಯನ್ನು ಅಥವಾ ಸೀರೆಯನ್ನು ಸುತ್ತುತ್ತಾರೆ. ಆರು, ಏಳು, ತಿಂಗಳುಗಳಿಂದ ಉಬ್ಬಿದ್ದು ಹೆಚ್ಚಿದ ಗಾತ್ರ ಪುನಃ ಮೂಲ ಗಾತ್ರಕ್ಕೆ ಬರಬೇಕೆಂಬುದೇ ಇದರ ಉದ್ದೇಶ.

ನವಜಾತ ಮಗುವಿನ ಕಣ್ಣಿಗೆ 'ನಾಯಿಕರುಂಬು' ಎಂಬ ಗಿಡದ ದಂಡಿನ ರಸವನ್ನು ಬಿಡುತ್ತಾರೆ. ಈ ರಸ ಕಣ್ಣನ್ನು ಯಾವಾಗಲೂ ತಂಪಾಗಿಸುವಲ್ಲಿ ಸಹಕಾರಿ. ಮಗುವಿಗೆ ಮೊದಲ ಒಂದು ತಿಂಗಳು ಕೆಂಪು ಕಿಸ್ಕರ (ಕೇಪುಳ) ಹೂವು ಮತ್ತು ಕಾಯಿಯನ್ನು ಜೀರಿಗೆಯೊಂದಿಗೆ ರುಬ್ಬಿ ತೆಗೆದ ರಸವನ್ನು ಕೊಡುತ್ತಾರೆ. ಹಿಂದಿನ ಕಾಲದಲ್ಲಿ 'ಕೂರಂಬೇಲ' ಗಿಡದ ಚಿಗುರು, 'ದಡ್ಡಲ' ಮರದ ಚಿಗುರು, ಕಿಸ್ಕರ ಹೂವು, ಪೇರಳೆ ಮರದ ಚಿಗುರು, ಬಂದನಾರುಗಳ ಜತೆಗೆ ಬೆಳ್ಳುಳ್ಳಿ ಜೀರಿಗೆ ಮತ್ತು ಮೆಣಸನ್ನು ಸೇರಿಸಿ ರುಬ್ಬಿ ಮಾತ್ರೆಯಾಕಾರ ಮಾಡಿಡುತ್ತಿದ್ದರು. ಪ್ರತಿ ದಿನ ಈ

ಮಾತ್ರೆಯನ್ನು ಮಗುವಿಗೆ ಸುಮಾರು ಆರು ತಿಂಗಳ ಕಾಲ ಕೊಡುತ್ತಿದ್ದರು. ಇದರಿಂದ ಮಗುವಿಗೆ ಯಾವುದೇ ರೀತಿಯ ಕೆಮ್ಮು, ಕಫ ಬರುವುದಿಲ್ಲ ಎಂದು ಹಿರಿಯರು ಹೇಳುತ್ತಾರೆ.

ಮಗು ಜನಿಸಿದ ದಿನದಿಂದ ನಲುವತ್ತು ದಿನಗಳವರೆಗೆ ತಾಯಿ ಮಗು ಅತೀ ಜಾಗರೂಕತೆಯಿಂದಿರಬೇಕೆಂದು ಮರಾಟಿಗರು ನಂಬುತ್ತಾರೆ. ಹನ್ನೊಂದು ದಿನಗಳು ನಿಷೇಧ (ಸೂತಕ) ದ ದಿನಗಳಾದರೂ ನಲುವತ್ತು ದಿನಗಳು ಜಾಗ್ರತೆಯಿಂದಿರಬೇಕೆಂದಿದೆ. ಈ ದಿನಗಳಲ್ಲಿ ತಾಯಿ ಮತ್ತು ಮಗು ಮಲಗುವ ಚಾಪೆಯ ಕೆಳಗಡೆ ಒಂದು ಚಿಕ್ಕ ಕಬ್ಬಿಣದ ಕತ್ತಿ (ಕುಡುಗೋಲು), ಕಾಸರಕನ ಮರದ ಚಿಗುರು ಮತ್ತು ಚಿಕ್ಕ ಪೊರಕೆಯನ್ನು ಇಟ್ಟಿರುತ್ತಾರೆ. ಇದರಿಂದ ಯಾವುದೇ ಇತರ ದುಷ್ಟಶಕ್ತಿಗಳು (ಕಾಳಿ, ದೆವ್ವ, ಕುಲೆ) ಬರುವುದಿಲ್ಲ ಎಂಬ ನಂಬಿಕೆಯಿದೆ. ಆರೋಗ್ಯದ ದೃಷ್ಟಿಯಿಂದ ಈ ನಂಬಿಕೆಗಳು ಅತೀ ಮಹತ್ವವನ್ನು ಪಡೆಯುತ್ತವೆ. ಹೆರಿಗೆಯ ನಂತರ 'ಅಮೆ' ಮುಗಿಯುವವರೆಗೆ ಹನ್ನೊಂದು ದಿನಗಳವರೆಗೆ ಬಾಣಂತಿ ಹೊರಗೆ ಎಲ್ಲೂ ಅಡ್ಡಾಡುವಂತಿಲ್ಲ. ಅನಿವಾರ್ಯವಾಗಿ ಹೊರ ಹೋಗಬೇಕಿದ್ದರೆ ಒಂದು ಚಿಕ್ಕ ಕತ್ತಿ ಆಕೆಯ ಜತೆಯಲ್ಲಿರಬೇಕಾಗುತ್ತದೆ. ಅದನ್ನು 'ಅಮೆಕತ್ತಿ ಎಂದು ಹೇಳುತ್ತಾರೆ. ಒಂದು ರೀತಿಯಲ್ಲಿ ಯಾವುದಕ್ಕೂ ಹೆದರಬಾರದು. ಸೂಕ್ಷ್ಮತೆಯಿಂದ ಕೂಡಿದ ಆಕೆಯ ಶರೀರಕ್ಕೆ ನಂಜಾಗಬಾರದೆಂಬುದೇ ಇದರ ಆಶಯವಾಗಿದೆ.

ತಾಯಿ ಮಗುವಿನ ಭದ್ರತೆ ದೃಷ್ಟಿಯಿಂದ ಸ್ನಾನಮಾಡುವ ಸ್ನಾನಗೃಹದಲ್ಲಿಯೂ ಕಾಸರಕನ ಮರದ ಕೊಂಬೆ, ಕಬ್ಬಿಣದ ತುಂಡು ಇಟ್ಟಿರುತ್ತಾರೆ. ಬಿಸಿ ನೀರ ಹಂಡೆಗೂ ಚಿಕ್ಕ ಕಬ್ಬಿಣದ ತುಂಡನ್ನು ಹಾಕಿರುತ್ತಾರೆ. ಇವೆಲ್ಲವೂ ಭದ್ರತೆಯ ಸಲುವಾಗಿ ಮಾಡುತ್ತಾರೆ. ಪ್ರತಿದಿನ ಮಗುವಿಗೆ ಮತ್ತು ಮಗುವನ್ನು ಸ್ನಾನಮಾಡಿಸುವಾಕೆ 'ನಲಿಕೆ' ಸಮುದಾಯದವರಿಂದ ಮಂತ್ರಿಸಿ ತಂದಂಥ ಭಸ್ಮ (ಮಯಿ) ವನ್ನು ೪೦ ದಿನಗಳವರೆಗೆ ಹಾಕಿಕೊಳ್ಳಬೇಕು. ಮಗುವಿಗೆ ಸ್ನಾನದ ನಂತರ ಯಾರೊಬ್ಬರ ದೃಷ್ಟಿ ಬೀಳದಂತೆ ಹರಳು ಉಪ್ಪನ್ನು ಉರಿಯುವ ಒಲೆಗೆ ಹಾಕಿ ಮಡಕೆ ಮತ್ತು ಒಲೆಯ ಎರಡು ಬದಿಯ ಮಸಿಯನ್ನು ಮಗುವಿನ ಹಣೆಗೆ ತಿಲಕವಾಗಿ ಇಡುತ್ತಾರೆ. ಇದರಿಂದ ಮಗುವಿಗೆ ಬಿದ್ದ ದೃಷ್ಟಿಗಳು ಯಾವುದೇ ರೀತಿಯಲ್ಲಿ ಪರಿಣಾಮ ಬೀರುವುದಿಲ್ಲವೆಂದು ಮರಾಟಿಗರು ನಂಬುತ್ತಾರೆ.

ಮಗುವಿಗೂ ತೊಟ್ಟಿಲಿಗೂ ಮುಟ್ಟಿ (ಭದ್ರತೆ) ಮಾಡಲಾಗುತ್ತದೆ. ತೊಟ್ಟಿಲಿಗೆ ಮೂರು ಸುತ್ತು 'ಚೆನ್ನೆರೆ' ಬಳ್ಳಿಯನ್ನು ಕಟ್ಟುತ್ತಾರೆ. ಒಂದು ಪೊರಕೆಯ ಚಿಕ್ಕ ತುಂಡನ್ನು ಇಟ್ಟಿರುತ್ತಾರೆ. ನಲುವತ್ತು ದಿನಗಳವರೆಗೆ ರಾತ್ರಿಯೆಲ್ಲಾ ಸೀಮೆಎಣ್ಣೆ ದೀಪವನ್ನು ರಾತ್ರಿಯಿಡೀ ಉರಿಸುತ್ತಾರೆ. ಮರಾಟಿಗರು ಮರಣದ ಸೂತಕಕ್ಕಿಂತ ಜನನದ ಸೂತಕದ ಬಗೆಗೆ ಹೆಚ್ಚು ಆಸ್ಥೆ ವಹಿಸುವುದು ಕಂಡು ಬರುತ್ತದೆ. ಪ್ರತಿದಿನ ಬಾಣಂತಿ ಸೇವಿಸುವ ಆಹಾರದಲ್ಲಿ ಕಟ್ಟು ನಿಟ್ಟಿನ ಪಥ್ಯಗಳನ್ನು ಪಾಲಿಸಬೇಕಾಗುತ್ತದೆ. ಯಾವುದೇ ರೀತಿಯ ಎಣ್ಣೆ ಪದಾರ್ಥ ಮಾಂಸಾಹಾರ ಸೇವಿಸುವದಕ್ಕೆ ನಿಷೇಧವಿದೆ. ಸರಿಯಾಗಿ ನಲುವತ್ತು ದಿನ ಬಿಸಿನೀರಿನ ಸ್ನಾನ ಮಾಡಲೇಬೇಕು. ಹಾಗೆಯೇ ಪ್ರತಿದಿನ ಮಗುವಿಗೆ ಎಣ್ಣೆ ಹಚ್ಚಿ ಸ್ನಾನ ಮಾಡಿಸಬೇಕು. ಪ್ರಸವದ ನಂತರ ಸುಮಾರು ೪೦ ದಿನಗಳಲ್ಲಿ ಹನ್ನೊಂದನೇ ದಿನದ 'ಅಮೆ' ಕಾರ್ಯಕ್ರಮದಲ್ಲಿ ಬಾಣಂತಿ ಇಷ್ಟ ಪಟ್ಟ ತಿನಿಸು ತಿನ್ನಲು ಅವಕಾಶವಿದ್ದು, ಇತರೆ ಎಲ್ಲಾ ದಿನಗಳಲ್ಲಿ ಪಥ್ಯವನ್ನು ಮೀರುವಂತಿಲ್ಲ. ಇವೆಲ್ಲಾ ತಡೆ, ನಿಷೇಧಗಳು ತಾಯಿ ಮತ್ತು ಮಗುವಿನ ಆರೋಗ್ಯಕ್ಕೆ ಪೂರಕವಾಗಿರುತ್ತವೆ ಎನ್ನುವುದರಲ್ಲಿ ಎರಡು

ಮಾತಿಲ್ಲ. ಬದಲಾದ ಕಾಲಕ್ಕೆ ತಕ್ಕಂತೆ ಇಂದು ಎಲ್ಲಾ ಮರಾಟಿಗರ ಕುಟುಂಬಗಳಲ್ಲಿ ಈ ರೀತಿಯ ಸಾಂಪ್ರದಾಯಿಕ ವ್ಯವಸ್ಥೆಗಳು ಇರಲು ಸಾಧ್ಯವಿಲ್ಲ. ಪ್ರಕೃತಿ ಜನ್ಯವಾದ ಔಷಧಿಗಳ ಕೊರತೆಯೂ ಇಂದು ನಮ್ಮನ್ನು ಕಾಡುತ್ತಿವೆ. ಎಲ್ಲವೂ ರಾಸಾಯನಿಕಯುಕ್ತ ಆಹಾರ ಸೇವನೆಯಲ್ಲಿಯೇ ವಿಚಿತ್ರವಾದಂಥ ರೋಗಗಳೊಂದಿಗೆ ಜೀವಿಸುತ್ತಿರುವುದು ಇಂದಿನ ಯುವ ಪೀಳಿಗೆಯ ದೌರ್ಭಾಗ್ಯವೆಂದು ಹೇಳಬೇಕಾಗಿದೆ.

**ಋತುಮತಿ**

ಮರಾಟಿಗರಲ್ಲಿ ಹೆಣ್ಣು ದೊಡ್ಡವಳಾದಾಗ 'ಹೆಣ್ಣು ಮೈನೆರದಳು' (ಪೊಣ್ಣು ಮದ್ಮಲಾಯಲ್) ಎಂದು ಕರೆಯುತ್ತಾರೆ. ಆ ಸಂದರ್ಭದಲ್ಲಿ 'ಮದಿಮಲ ಮದಿಮೆ' ಎಂಬ ಕಾರ್ಯವನ್ನು ಮರಾಟಿಗರು ಮಾಡುತ್ತಾರೆ. ಹೆಣ್ಣು ಜೀವನದಲ್ಲಿ ಮೊಟ್ಟ ಮೊದಲಬಾರಿಗೆ ಪಡೆದುಕೊಳ್ಳುವ 'ಹೆಣ್ತನ'ದ ಶಾಸ್ತ್ರವೇ 'ಮದಿಮಲ ಮದಿಮೆ'. ಮರಾಟಿಗರು ಹುಡುಗಿ ಮೈನೆರೆಯುವುದನ್ನು ತಮ್ಮ ಭಾಷೆಯಲ್ಲಿ 'ಚೆಡು ನಾವ್‌ಲಾಗ್ಲೆ' ಎಂದು ಕರೆಯುತ್ತಾರೆ. ಹೆಣ್ಣಾಗಲಿ ಗಂಡಾಗಲೀ ತಮ್ಮ ಜೀವನದಲ್ಲಿ ಪ್ರೌಢಾವಸ್ಥೆಗೆ ಬರುವುದು ಸಹಜಕ್ರಿಯೆ. ನಮ್ಮ ಸಮಾಜದಲ್ಲಿ ಗಂಡು ಪ್ರೌಡಾವಸ್ಥೆಗೆ ಬಂದಾಗ ಯಾವುದೇ ರೀತಿಯ ಶಾಸ್ತ್ರ ನಿಷೇಧಗಳ ಕಟ್ಟುಪಾಡು ಸಂಪ್ರದಾಯಗಳಿಲ್ಲ. ಆದರೆ ಹೆಣ್ಣಿನ ವಿಚಾರದಲ್ಲಿ ಅನೇಕ ರೀತಿಯ ಸಂಪ್ರದಾಯಗಳು ಆಚರಣೆಗಳು ಹಿಂದಿನ ಕಾಲದಿಂದಲೂ ಮುಂದುವರಿದುಕೊಂಡೇ ಬಂದಿದೆ. ಸ್ತ್ರೀಯನ್ನು ಸಮೃದ್ಧಿಯ ಸಂಕೇತವಾಗಿ, ಸೃಷ್ಟಿಗೆ ಮುಖ್ಯ ಕಾರಣವಾಗಿ ಪವಿತ್ರತೆಯಿಂದ, ಗೌರವದಿಂದ ಕಂಡ ಜನಪದರು ಆಕೆಗೆ ಆಚರಣೆಯ ಮೂಲಕ ಜವಾಬ್ದಾರಿಯನ್ನು, ಎಚ್ಚರಿಕೆಯನ್ನು ನೀಡುವುದೇ ಆಗಿದೆ. ಹಿಂದಿನ ಕಾಲದಲ್ಲಿ ವಯಸ್ಸು ಮೀರಿದರೂ ಮೈನೆರೆಯದ ಹುಡುಗಿಗೆ ಅನೇಕ ಜನಪದೀಯ ಔಷಧಿಗಳನ್ನು ತಾಂತ್ರಿಕ ಆಚರಣೆಗಳನ್ನು ಮಾಡುತ್ತಿದ್ದರು ಎಂಬುದನ್ನು ಸಂಶೋಧನೆಗಳಿಂದ ತಿಳಿದಿದ್ದೇವೆ. ಅಂತಹ ಸಂದರ್ಭದಲ್ಲಿ ಇಂದು ವೈಜ್ಞಾನಿಕ ಕಾರಣಗಳನ್ನು ಕಂಡು ವೈದ್ಯರ ಮೂಲಕ ಬಗೆಹರಿಸುತ್ತಾರೆ.

ಸಾಮಾನ್ಯವಾಗಿ ಹುಡುಗಿ ಮೈನೆರೆದಾಗ ಸಂಬಂಧಿಕರನ್ನು ನೆರೆಹೊರೆಯ ನಾಲ್ಕಾರು ಮಂದಿಯನ್ನು ಕರೆದು ಆಚರಿಸುವ 'ಮದಿಮಲ ಮದಿಮೆ'ಯ ಮೂಲಕ ಜಾತಿಬಾಂಧವರಿಗೆಲ್ಲಾ ಮದುವೆಗೆ ಹುಡುಗಿ ಸಿದ್ಧವಾಗಿದ್ದಾಳೆ ಎಂದು ತೋರಿಸುವುದೇ ಜನಪದರ ಆಶಯವಾಗಿದೆ. ಹಿಂದಿನ ಕಾಲದಲ್ಲಿ 'ಬಾಲ್ಯ ವಿವಾಹ' ಪದ್ಧತಿಯಿದ್ದಾಗ ಮದುವೆಯಾದ ನಂತರದಲ್ಲಿ ಹೆಣ್ಣು ಮೈನೆರೆಯುತ್ತಿದ್ದಳು. ಅದುವರೆಗೂ ಆಕೆ ತವರಿನಲ್ಲಿಯೇ ಇರುತ್ತಿದ್ದಳು.

ಹುಡುಗಿ ಪ್ರಥಮ ಮುಟ್ಟಾದಾಗ ಯಾರ ಕಣ್ಣಿಗೂ ಕಾಣಬಾರದೆನ್ನುವುದು ಹಿರಿಯರ ನಂಬಿಕೆ. ಆಕೆ ಬಹಳ ನಾಚಿಕೆಯಿಂದ ಮನೆಯಿಂದ ಹೊರ ಹೋಗಿ ಯಾರೂ ಕಾಣದ ಕತ್ತಲೆ ಸ್ಥಳದಲ್ಲಿ ಕೊಟ್ಟಿಗೆಯಲ್ಲೋ, ಬಚ್ಚಲ ಮನೆಯಲ್ಲೋ ಕುಳಿತುಕೊಳ್ಳುತ್ತಾಳೆ. ಮನೆಯ ಹೆಂಗಸರಿಗೆ, ತಾಯಿಗೆ ವಿಷಯ ತಿಳಿದು ಪ್ರತ್ಯೇಕ ಸ್ಥಳದಲ್ಲಿ ಕುಳ್ಳಿರಿಸುತ್ತಾರೆ. ಮುಟ್ಟಾದ ಮೊದಲದಿನವೇ ಆಕೆಯ ಕೈಯಲ್ಲಿ ಒಂದು ಗೆಜ್ಜೆ ಕತ್ತಿ (ಕಿರುಗತ್ತಿ) ಕೊಡುತ್ತಾರೆ. ಆ ಕತ್ತಿ ಹೊರಗೆ ಹೋಗುವಾಗ ಅವಳ ಕೈಯಲ್ಲಿ ಇರಬೇಕು. ಸೂತಕದಲ್ಲಿರುವ ಒಂಟಿ ಹೆಣ್ಣಿಗೆ ಯಾವುದೇ ಭಯವಾಗದಂತೆ ಈ ಕಿರುಗತ್ತಿಯನ್ನು ಕೊಡುವ ರೂಢಿಯಾಗಿರಬೇಕು. ಹಿಂದೆ ಮುಟ್ಟಾದ ದಿನ ಮಲಗುವ ಸಂದರ್ಭದಲ್ಲಿಯೂ ಈ ಕಿರುಗತ್ತಿ ತಲೆದಿಂಬಿನಡಿಯಲ್ಲಿ ಇರುತ್ತಿತ್ತು. ತಾಯಿ ತಕ್ಷಣ ಆಕೆಯನ್ನು ಕೊಟ್ಟಿಗೆಯಲ್ಲಿ

ಕುಳ್ಳಿರಿಸುತ್ತಾಳೆ. ಮನೆಯೊಳಗೆ ಬರಲು ನಿಷೇಧವಿದೆ. ಹಿಂದಿನ ಕಾಲದಲ್ಲಿ ಕೊಟ್ಟಿಗೆಯ ಒಂದು ಮೂಲೆಯಲ್ಲಿರುವ 'ಕದಿಕೆ' ಯೊಳಗೆ ಕುಳ್ಳಿರಿಸುತ್ತಿದ್ದರು. ತಾಯಿ ಮತ್ತು ಮನೆಯವರು ನೆರೆಹೊರೆಯಲ್ಲಿರುವ ಕುಟುಂಬಿಕರು, ಸಂಬಂಧಿಕರನ್ನು, ಮಹಿಳೆಯರನ್ನು ಕರೆದು ವಿಷಯ ತಿಳಿಸುತ್ತಾಳೆ. ಹುಡುಗಿಯನ್ನು ಅಂಗಳದಲ್ಲಿ ಐದು ಅಥವಾ ಮೂರು ಬಲಿಯದ ತೆಂಗಿನಕಾಯಿಗಳ (ತುಳುಃ ಬನ್ನಂಗಾಯಿ) ಮೇಲೆ ಕುಳ್ಳಿರಿಸಿ ತಲೆಗೆ ನೀರು ಸುರಿಯುತ್ತಾರೆ. ನಂತರ ಸ್ನಾನಮಾಡಿಸುತ್ತಾರೆ. ತಿಂಗಳು ಒಳಗೆ 'ಮದಿಮಲ ಮದಿಮೆ' (ಮದುಮಗಳ ಮದುವೆ) ಮಾಡಬೇಕೆಂಬುದು ಸಂಪ್ರದಾಯ. ನೆಂಟರಿಷ್ಟರನ್ನು ನೆರೆಹೊರೆಯವರನ್ನು ಕರೆದು ನಿಗದಿತ ದಿನ ಹುಡುಗಿಗೆ ಮಡಕೆ ಮುಟ್ಟಿಸುವ ಶಾಸ್ತ್ರ ಮಾಡುತ್ತಾರೆ. ಕೆಲವು ಕುಟುಂಬದಲ್ಲಿ 'ಋತುಶಾಂತಿ' ಎಂದು ಕರಪತ್ರ ಕೊಟ್ಟು ಆಚರಿಸುವುದು ಇದೆ. 'ಸುತ್ಯೆ' ಇಡುವು ಮೂಲಕ ಅಂದು ಕಾರ್ಯಕ್ರಮ ಆರಂಭಿಸುತ್ತಾರೆ. ಮಡಿವಾಳ್ತಿಯು ಒಂದು ಸ್ವತ್ತಿಕವನ್ನಿಡುತ್ತಾಳೆ. ಬೆಳ್ತಿಗೆ ಅಕ್ಕಿಯ ಪುಡಿಯಿಂದ ಚೌಕಾಕಾರ ಮಾಡಿ ನಾಲ್ಕು ಮೂಲೆಗಳಲ್ಲಿ ನಾಲ್ಕು ವೃತ್ತಗಳನ್ನು ಮಾಡುತ್ತಾಳೆ. ಅವುಗಳಲ್ಲಿ ಬೈಹುಲ್ಲಿನಿಂದ ತಯಾರಿಸಿದ ಸಿಂಬಿಗಳನ್ನು (ತುಳುಃ ಚರಿಯೆ) ಇಟ್ಟು ಅದರಲ್ಲಿ ಮಣ್ಣಿನ ಚಿಕ್ಕ ಚಿಕ್ಕ ಕಲಶಗಳನ್ನಿಡಲಾಗುತ್ತದೆ. ಜತೆಗೆ ನೀರು ತುಂಬಿದ ಬಿಂದಿಗೆ (ಚೊಂಬು)ಗಳನ್ನು ಇಡಲಾಗುತ್ತದೆ. ಮಣ್ಣಿನ ಕಲಶಕ್ಕೆ ತೆಂಗಿನಕಾಯಿ ಐದು ವೀಳ್ಯದೆಲೆ, ಒಂದು ಅಡಿಕೆ ಮತ್ತು ಇಪ್ಪತ್ತೈದು ಪೈಸೆ ಇರುತ್ತಾರೆ. ಮಧ್ಯೆ ಭತ್ತದ ಚಿಕ್ಕ ಮುಡಿಯನ್ನಿರಿಸಿ ಅದರ ಮೇಲೆ ಐದು ಅಥವಾ ಮೂರು ಸುಲಿಯದ ತೆಂಗಿನ ಕಾಯಿಯನ್ನು ಇರಿಸುತ್ತಾರೆ. ಅವುಗಳ ಮೇಲೆ ಮೈನೆರೆದ ಹುಡುಗಿಯನ್ನು ಕುಳ್ಳಿರಿಸಿ ಐದು ಮಂದಿ ಮುತ್ತೈದೆಯರು ಕಲಶದ ನೀರನ್ನು ತಲೆಯಿಂದ ಕಾಲಿನವರೆಗೂ ಬೀಳುವಂತೆ ಸುರಿಯುತ್ತಾರೆ. ನಂತರ ಸ್ನಾನ ಮಾಡಿಸಿ ಹೊಸ ಸೀರೆಯನ್ನು ಉಡಿಸುತ್ತಾರೆ. ಬಾವಿಯಿಂದ ನೀರು ಸೇದಿ ತಂದು ಅಡುಗೆ ಮನೆಯಲ್ಲಿ ಮಡಕೆಯನ್ನು ಮುಟ್ಟಿ ನಮಸ್ಕರಿಸಲು ಹೇಳುತ್ತಾರೆ. ಹೊಸ ಸೀರೆಯಲ್ಲಿಯೇ ಆಕೆಗೆ ಉಡಿ ತುಂಬಿಸುತ್ತಾರೆ. (ತುಳುಃ ಮೊಟ್ಟೆ ತುಂಬಿಸುವುದು) ಉಡಿಯ ಜತೆಗೇ ನೀರು ತರಬೇಕು. ಮಣ್ಣಿನ ಮಡಕೆಗೆ ಮುಟ್ಟಿ ನಮಸ್ಕರಿಸಬೇಕು ಮತ್ತು ಹಿರಿಯರ ಕಾಲು ಮುಟ್ಟಿ ಆಶೀರ್ವಾದ ಪಡೆಯಬೇಕು. ಕೆಲವು ಕುಟುಂಬಗಳಲ್ಲಿ ಹಲಸು, ತೆಂಗು, ಅಡಿಕೆ ಮರಗಳಿಗೂ ನಮಸ್ಕರಿಸುವ ಪದ್ಧತಿ ಇದೆ. ಆರಂಭದಲ್ಲಿರಿಸಿದ ಸುತ್ಯೆಯ ಹತ್ತಿರವೇ ಉಡಿಯನ್ನು ತುದಿಯಿರುವ ಬಾಳೆಲೆಯಲ್ಲಿ ಕೆಲಗಿಳಿಸಲಾಗುತ್ತದೆ. ಉಡಿಯಲ್ಲಿನ ಅಕ್ಕಿಯನ್ನು ಯಾವುದೇ ಕಾರಣಕ್ಕೂ ಚೆಲ್ಲಬಾರದು ಎಂದು ಹಿರಿಯರು ಎಚ್ಚರಿಸುತ್ತಾರೆ. ಆಮಂತ್ರಿತರಿಗೆ ಪಾಯಸದೂಟ ಹಾಕುವುದರೊಂದಿಗೆ ಕಾರ್ಯಕ್ರಮ ಮುಕ್ತಾಯವಾಗುತ್ತದೆ.

ಹುಡುಗಿಯನ್ನು ಸೋದರ ಮಾವನು ತನ್ನ ಮನೆಗೆ ಕರೆದುಕೊಂಡು ಹೋಗಿ ಉಪಚರಿಸುವ ಸಂಪ್ರದಾಯ ಮರಾಟಿಗರಲ್ಲಿದೆ. ನಾಲ್ಕೈದು ದಿನಗಳು ಅಥವಾ ಒಂದುವಾರ ಸೋದರ ಮಾವನ ಮನೆಯಲ್ಲಿರಬೇಕು ಎಂಬುದು ಹಿರಿಯರಿಂದ ಬಂದಿರುವ ರೂಢಿ ಎಂದು ವಕ್ತೃಗಳು ಹೇಳುತ್ತಾರೆ. ಹುಡುಗಿ ಮೈನೆರೆಯುವ ತನಕ ಮಣ್ಣಿನ ಮಡಕೆಯಲ್ಲಿ ಅಡುಗೆ ಮಾಡಕೂಡದು ಎಂಬುದು ಜನಪದರ ಆಶಯ ಹಾಗಾಗಿ ಶಾಸ್ತ್ರೋಕ್ತವಾಗಿ ಮಣ್ಣಿನ ಮಡಕೆಯನ್ನು ಮುಟ್ಟಿಸುವ ಸಂಪ್ರದಾಯ ಬೆಳೆದಿದೆ.

ಉಡಿಯಲ್ಲಿ ಅಕ್ಕಿ ಇಟ್ಟುಕೊಳ್ಳುವ ಮೂಲಕ ಸಮೃದ್ಧಿಯನ್ನು ಸಂಕೇತಿಸಲಾಗುತ್ತದೆ. ಅಂದು ಹೊಸ ಸೀರೆ ಉಡುವ ಮೂಲಕ ಹುಡುಗಿ ಹೆಣ್ಣು ಎಂದು ಕರೆಯಲ್ಪಡುತ್ತಾಳೆ. ಋತುಶಾಂತಿ ದಿನದಂದು ಕಡ್ಡಾಯವಾಗಿ ಹೆಣ್ಣಿಗೆ ಅಡಿಕೆ ಹಿಂಗಾರವನ್ನು ಮುಡಿಸುತ್ತಾರೆ. ಹಿಂಗಾರದಲ್ಲಿ ಅಡಿಕೆಯ ಚಿಕ್ಕ ಬೀಜಗಳೇ ಮುಂದೆ ಅಡಿಕೆಗಳಾಗುತ್ತವೆ. ಪರೋಕ್ಷವಾಗಿ ಹಿಂಗಾರ ಮುಡಿವ ಹೆಣ್ಣು ಮುಂದೆ ವಂಶಾಭಿವೃದ್ಧಿಗೆ ಮೂಲವಾಗುತ್ತಾಳೆ ಎಂಬ ಆಶಯವಿರುವುದು ಕಂಡುಬರುತ್ತದೆ. ಸಾಮಾನ್ಯವಾಗಿ ಈ ಕಾರ್ಯಕ್ರಮದಲ್ಲಿ ಮಹಿಳೆಯರದೇ ಕಾರುಬಾರು.

ಇಂದು ಬಹುತೇಕ ಮರಾಟಿಗರು ಈ ಋತುಶಾಂತಿ ಆಚರಣೆಯನ್ನು ಆಚರಿಸುತ್ತಿಲ್ಲ. ಹೆಣ್ಣು ಮಕ್ಕಳು ಶಿಕ್ಷಣದ ಕಡೆಗೆ ಹೆಣ್ಣು ಒಲವು ತೋರಿಸುತ್ತಾ ಮುಜುಗರವನ್ನುಂಟು ಮಾಡುವ ಇಂಥ ಆಚರಣೆಗಳತ್ತ ಯಾವುದೇ ರೀತಿಯಲ್ಲಿ ವಿಶೇಷ ಗಮನ ಕೊಡುವುದಿಲ್ಲ. ಜಿಲ್ಲೆಯ ಕೆಲವು ಹಳ್ಳಿಗಳಲ್ಲಿ ಋತುಶಾಂತಿಯನ್ನು ಇಂದಿಗೂ ಸಂಪ್ರದಾಯದಂತೆ ಆಚರಿಸುತ್ತಾ ಬರುತ್ತಿದ್ದಾರೆ.

**ಮದುವೆ**

ಕುಟುಂಬ ಸಮಾಜದ ಮೂಲ ಘಟಕ. ಸಮುದಾಯ, ಸಮಾಜ, ಗ್ರಾಮ, ಜಿಲ್ಲೆ, ರಾಜ್ಯ, ರಾಷ್ಟ್ರ ಎಲ್ಲವೂ ಈ ಕುಟುಂಬದ ಆಧಾರದ ಮೇಲೆಯೇ ನಿಂತಿದೆ, ಜಗತ್ತಿನ ಎಲ್ಲಾ ಸಮಾಜಗಳಲ್ಲಿಯೂ ಯಾವುದಾದರೂ ಒಂದು ಬಗೆಯ ಕುಟುಂಬವು ಅಸ್ತಿತ್ವದಲ್ಲಿರುವುದು ಕಂಡು ಬರುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ಪ್ರಥಮತಃ ಕುಟುಂಬದ ಸದಸ್ಯ. ಜೀವನದ ಎಲ್ಲಾ ಚಟುವಟಿಕೆಗಳ ಕೇಂದ್ರವೇ ಕುಟುಂಬ. ಕುಟುಂಬದಲ್ಲಿ ಪರಸ್ಪರ ಅವಲಂಬಿಸಿದ ನಂತರ ಸಮಾಜದಲ್ಲಿನ ಅವಲಂಬನೆ ಮುಖ್ಯವಾಗಿರುತ್ತದೆ. ಹಾಗಾಗಿ Man is Social Animal ಎಂದು ಕರೆಯಲಾಗಿದೆ. ವ್ಯಕ್ತಿ ತನ್ನ ಜೀವನದ ಮೌಲ್ಯ, ಪ್ರೀತಿ, ರೀತಿ-ನೀತಿ, ನಡೆನುಡಿಗಳನ್ನು ಕುಟುಂಬದಿಂದಲೇ ಪಡೆಯುತ್ತಾನೆ.

ಕುಟುಂಬಕ್ಕೆ ಮದುವೆಯೇ ಮಹಾದ್ವಾರ. ಕೂಡಿ ಬಾಳುವ ವ್ಯವಸ್ಥೆ ಪಕ್ಷಿಗಳಲ್ಲಿ ಕಂಡು ಬರುತ್ತಿದೆಯಾದರೂ ಮದುವೆಯ ಮೂಲಕ ಕೂಡಿ ಬಾಳುವ ಬದುಕುವ ವ್ಯವಸ್ಥೆ ಮಾನವನಿಗಷ್ಟೇ ಇದೆ. ವಿವಾಹ ಮತ್ತು ಕುಟುಂಬ ವ್ಯವಸ್ಥೆಗಳು ಮಾನವನ ಶಾರೀರಿಕ ಮತ್ತು ಸಾಮಾಜಿಕ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವುದಕ್ಕಾಗಿ ಏರ್ಪಡಿಸಿಕೊಂಡಿರುವ ವ್ಯವಸ್ಥೆ. ಸಹಜ ಲೈಂಗಿಕ ಬಯಕೆಗಳನ್ನು ಈಡೇರಿಸಿ ಸಂಬಂಧಗಳನ್ನು ಸ್ಥಿರಪಡಿಸಿ ವಂಶವಾಹಿನಿಯನ್ನು ಮುಂದಕ್ಕೊಯ್ಯುವುದೇ ಇದರ ಮೂಲ ಉದ್ದೇಶ. ಪ್ರಾಚೀನ ಭಾರತೀಯರಲ್ಲಿ ವೈವಾಹಿಕ ಸಂಪ್ರದಾಯಗಳನ್ನು ಇಂದಿಗೂ ಪಾಶ್ಚಾತ್ಯರು ಬೆರಗುಗಣ್ಣಿನಿಂದ ನೋಡುತ್ತಿದ್ದಾರೆ. ಕಾರಣ ವೈಜ್ಞಾನಿಕವಾಗಿಯೂ ಈ ವ್ಯವಸ್ಥೆ ಸುದೃಢ ಕುಟುಂಬಕ್ಕೆ, ಸಮಾಜಕ್ಕೆ ಪೂರಕವಾಗಿರುವುದು. ''ಮನುಷ್ಯರಲ್ಲಿ ಕುಟುಂಬ ವ್ಯವಸ್ಥೆ ಪ್ರಾರಂಭವಾದಾಗ ಪ್ರಾಣಿಗಳಲ್ಲಿರುವಂತೆ ಲೈಂಗಿಕ ತೃಪ್ತಿಯೇ ಪ್ರೇರಣೆಯಾಗಿದ್ದಿರಬೇಕು. ವಂಶಾಭಿವೃದ್ಧಿಗೆ ಸಂತಾನ ಅನಿವಾರ್ಯವೆಂಬುದು ಪ್ರಕೃತಿ ನಿಯಮ. ಸಂತಾನೋತ್ಪತ್ತಿಗೆ ಲೈಂಗಿಕ ಕ್ರಿಯೆಯೇ ಸಾಧನ. ಲೈಂಗಿಕ ಕ್ರಿಯೆಗೆ ಪ್ರೇರಣೆ ದೊರೆಯುವುದು ಕಾಮದಿಂದ''[೪] ವಿವಾಹೇತರ ಲೈಂಗಿಕತೆಗೆ ನಮ್ಮ ಸಮಾಜದಲ್ಲಿ ಒಪ್ಪಿಗೆಯಿಲ್ಲ ಅದು ಅನೈತಿಕ ಎಂದೆನಿಸುತ್ತದೆ ''ಕುಟುಂಬವೊಂದರ ನಡಾವಳಿ (Behaviour) ಯನ್ನು ಮದುವೆಯ ವಿಧಿ ವಿಧಾನಗಳು

ಸಾಂಕೇತಿಕವಾಗಿ ಅಭಿವ್ಯಕ್ತಿಸಲೇ ಬೇಕಾಗುತ್ತದೆ. ಇಂಥ ಕಡೆ ಸಮಾನ ಆಚರಣೆ ಇರುವ ಒಂದು ಗುಂಪಿಗೆ, ಆ ಗುಂಪಿನ ಮದುವೆ ಕ್ರಮವು ಸಹಜವಾಗಿ ತೋರಿದರೆ, ಇತರರ ಆದರ್ಶಗಳು, ಭಾವನೆಗಳು ನಡಾವಳಿಗಳು ವಿಚಿತ್ರವೆಂದೋ, ಅಸಂಬದ್ಧವೆಂದೋ ತೋರಬಹುದು. ಒಂದು ಕುಟುಂಬದ ಆಹಾರ ನಿಯಮ, ಉಡುಪಿನ ಕ್ರಮಗಳು, ತೊಡುಗೆಗಳು, ಅಲಂಕಾರ, ವಿವಾಹ ಸಂಬಂಧಗಳು, ವ್ಯಕ್ತಿ ಸಂಬಂಧಗಳು, ಕೃಷಿ ಪದ್ಧತಿಗಳು ಹೀಗೆ ಸಕಲವೂ ಅದರ ಅಧ್ಯಯನದ ವ್ಯಾಪ್ತಿಗೆ ಬರುತ್ತದೆ. ದಯೆ, ಕರುಣೆ, ದ್ವೇಷ, ಭಕ್ತಿ, ವಿನಯ ಗೌರವ ಈ ಭಾವನೆಗಳನ್ನು ಯಾರು ಯಾರಲ್ಲಿ ಯಾವ ಮಟ್ಟದಲ್ಲಿ, ಏಕೆ ತೋರಬೇಕೆಂಬುದೂ ಇದರಲ್ಲಿ ಸೇರುತ್ತದೆ. ಹೊರ ಸಂಸ್ಕೃತಿಗಳ ಸಂಪರ್ಕವು ತೀವ್ರವಾದಂತೆ ಈ ಭಾವನೆ ಕಡಿಮೆಯಾಗುವುದು ಹೌದಾದರೂ ಪ್ರತಿ ಸಂಸ್ಕೃತಿಯಲ್ಲೂ ತನ್ನದು ಎಂಬುದಕ್ಕೆ ವಿಶಿಷ್ಟ ಸ್ಥಾನವೊಂದು ಇದ್ದೇ ತೀರುತ್ತದೆ. ಇದರಿಂದಾಗಿ ಒಂದು ಜನಾಂಗದ ಕುಟುಂಬ ವ್ಯವಸ್ಥೆಯು ತನ್ನ ವಿವಿಧ ರೀತಿಯ ಹೊಂದಾಣಿಕೆಗಳ ಪರಿಣಾಮವಾಗಿ ತನ್ನ ಆಶ್ರಯದಲ್ಲಿ ಇರುವವರಿಗೆ ತೃಪ್ತಿಯನ್ನೋ, ನಿರಾಶೆಯನ್ನೋ, ಸಮಚಿತ್ತತೆಯನ್ನೋ ನೀಡುತ್ತದೆ. ಇವುಗಳನ್ನು ಒಂದು ಕುಟುಂಬದ ಅಧ್ಯಯನದಲ್ಲಿ ಸ್ಪಷ್ಟವಾಗಿ ಗುರುತಿಸಲು ಸಾಧ್ಯ"[೫] ಲೈಂಗಿಕವಾಗಿ ಸ್ವಚ್ಛಂದವಾಗಿದ್ದ ಆದಿಮಾನವ ತನ್ನ ಅಲೆಮಾರಿ ಸ್ಥಿತಿಯಿಂದ ಬುಡಕಟ್ಟು ಪದ್ಧತಿಗೆ ಒಳಗಾದಾಗ ವಿವಾಹದಂಥ ಅನೇಕ ಕಟ್ಟು ಪಾಡುಗಳಿಗೆ ಬದ್ಧನಾಗಬೇಕಾಯಿತು. ಸುಸೂತ್ರ ಜೀವನಕ್ಕೆ ಪೂರಕವಾಗಿ ಕಂಡು ಬಂದವುಗಳನ್ನೆಲ್ಲಾ ಸಂಪ್ರದಾಯಗಳೆಂಬ ಒಂದು ಚೌಕಟ್ಟಿನೊಳಗೆ ಇರಿಸಲಾಗಿ ನೂರಾರು ಸಾವಿರಾರು ಸಂಪ್ರದಾಯಗಳು, ರೀತಿ-ನೀತಿಗಳು. ಪ್ರಚಲಿತದಲ್ಲಿರಲು ಕಾರಣವಾಯಿತು. ನಂಜಮ್ಮಣ್ಣಿ ಅವರು ವಿವಾಹದ ಬಗ್ಗೆ ಈ ರೀತಿ ವ್ಯಾಖ್ಯಾನಿಸುತ್ತಾರೆ. ''ವಿವಾಹ ಸಂಸ್ಥೆ ಮನುಷ್ಯನಷ್ಟೇ ಪ್ರಾಚೀನವಾದುದು. ಭಾರತದಲ್ಲಿ ವಿವಾಹವನ್ನು ಒಂದು ಧಾರ್ಮಿಕ ರೀತಿ ನೀತಿ ನಡವಳಿಕೆಗಳಿಗೆ ಅನುಸಾರವಾಗಿ ಸಂಪ್ರದಾಯಬದ್ಧವಾಗಿ ನಡೆಯುತ್ತದೆ. ವ್ಯಕ್ತಿ ಜೀವನದಲ್ಲಿ ವಿವಾಹ ಅತೀ ಮುಖ್ಯವಾದ ಸಂಸ್ಕಾರ. ಇದು ದೇವರಿಂದ ಕಟ್ಟಲ್ಪಟ್ಟ ಪವಿತ್ರ ಬಂಧನವೆಂಬ ನಂಬಿಕೆಯಿದೆ. ಮದುವೆಯಿಲ್ಲದೆ ಮೋಕ್ಷವಿಲ್ಲವೆಂಬ ನಂಬಿಕೆ ಇರುವುದರಿಂದ ಹಿಂದೂಗಳಲ್ಲಿ ವಿವಾಹ ಅನಿವಾರ್ಯ."[೬]

ಎಲ್ಲಾ ಸಮುದಾಯ, ಬುಡಕಟ್ಟುಗಳಲ್ಲಿರುವಂತೆ ಸಂಪ್ರದಾಯ ಆಚರಣೆ ನಂಬಿಕೆಗಳ ಮುಖಾಂತರವೇ ಮರಾಟಿಗಳಲ್ಲಿಯೂ ವಿವಾಹಶಾಸ್ತ್ರ ನಡೆಯುತ್ತದೆ. ಕಾಲಕ್ರಮೇಣ ಇತರ ಸಮುದಾಯಗಳ ಸಂಪ್ರದಾಯಗಳೂ ಮರಾಟಿಗರಲ್ಲಿಯೂ ಸೇರಿಕೊಂಡಿವೆ. ಐವತ್ತು ವರ್ಷಗಳ ಹಿಂದೆ ಮರಾಟಿಗರಲ್ಲಿ ಸುಮಾರು ಏಳು ದಿನಗಳ ವಿವಾಹ ಸಂಪ್ರದಾಯಗಳು ಇತ್ತೆಂದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ಹಾಗೆಯೇ ತುಳುನಾಡಿನಲ್ಲಿ ಬ್ರಾಹ್ಮಣರನ್ನು ಹೊರತುಪಡಿಸಿದರೆ ಅತೀಹೆಚ್ಚು ಸಂಪ್ರದಾಯಿಕ ಆಚರಣೆಗಳು ಮರಾಟಿಗರಲ್ಲಿ ಮಾತ್ರ ಕಂಡುಬರುತ್ತಿದೆ.

ಮರಾಟಿಗರ ಮೂಲ ಸಾಂಪ್ರದಾಯಿಕ ವಿವಾಹ ಆಚರಣೆಗಳನ್ನು ಕ್ಷೇತ್ರಕಾರ್ಯಗಳ ಮೂಲಕ ಸಂಗ್ರಹಿಸಲಾಗಿದೆ. ಇಂದು ಅನೇಕ ಆಚರಣೆಗಳು ಮರೆಯಾಗಿದ್ದರೂ ಕೆಲವೊಂದು ಬೆರಳೆಣಿಕೆಯ ಕುಟುಂಬಗಳು ತಮ್ಮ ಕುಟುಂಬದ ವಿವಾಹ ಮಹೋತ್ಸವದಲ್ಲಿ ತಪ್ಪದೇ ಆಚರಿಸಿಕೊಂಡು ಬರುತ್ತಿದ್ದಾರೆ.

### ಹೆಣ್ಣು ನೋಡುವುದು

ಸಾಮಾನ್ಯವಾಗಿ ಮರಾಟಿಗರು ಹೆಣ್ಣನ್ನು ಅನ್ಯಗೋತ್ರದಿಂದಲೇ ಆಯ್ಕೆ ಮಾಡುತ್ತಾರೆ. ಒಂದೇ ಬಳಿಯವರನ್ನು ಅಣ್ಣ ತಂಗಿ ಎಂದು ಸಂಬಂಧ ಕಲ್ಪಿಸಿ ವಿವಾಹಕ್ಕೆ ನಿಷೇಧ ಹೇರಲಾಗಿದೆ. ಸಮಾನ ಬಳಿಯಿಂದ ಹುಟ್ಟುವ ಸಂತತಿಗಿಂತ ಅನ್ಯ ಬಳಿಯಲ್ಲಿ ಹುಟ್ಟುವ ಸಂತತಿ ಉತ್ತಮ ಎಂಬುದೇ ಈ ನಿಷೇಧಕ್ಕೆ ಮುಖ್ಯ ಕಾರಣವೂ ಹೌದು. ಒಂದೇ ಬಳಿ ಮತ್ತು ಅತೀ ಹತ್ತಿರದ ಸಂಬಂಧಿಕರಲ್ಲಿ ವಿವಾಹವಾದರೆ ಅಂಗವೈಕಲ್ಯ ಮತ್ತು ಇತರೆ ಅನುವಂಶೀಯ ರೋಗಗಳೂ ಹೆಚ್ಚಾಗಿ ಬರುವುದಾಗಿ ಇತ್ತೀಚಿನ ಸಂಶೋಧನೆಗಳೂ ಎಚ್ಚರಿಸಿವೆ. ಒಂದು ಗಂಡು-ಹೆಣ್ಣಿನ ವೈವಾಹಿಕ ಜೀವನ ಉತ್ತಮವಾಗಿ ಸಾಮರಸ್ಯದಿಂದ ಮುಂದುವರಿಯಬೇಕಾದರೆ ಅನ್ಯಗೋತ್ರ ಅಥವಾ ಅನ್ಯ ಬಳಿಗಳ ಹೊಂದಾಣಿಕೆ ಪ್ರಶಸ್ತವಾದುದೆಂದು ಪುರಾತನ ಕಾಲದಿಂದಲೂ ಕಂಡುಕೊಂಡ ಜನಪದರು ಅದನ್ನು ಒಂದು ಸಂಪ್ರದಾಯವಾಗಿಸಿದ್ದಾರೆ. ಇಂತಹ ನಂಬಿಕೆ, ಸಂಪ್ರದಾಯಗಳು ಒಬ್ಬನಿಂದ ಅಥವಾ ಒಂದು ಕುಟುಂಬದಿಂದ ಹುಟ್ಟಿದವಲ್ಲ. ಅನೇಕ ತಲೆಮಾರುಗಳಿಂದ ನಡೆದು ಬಂದಿರುವ ಪ್ರಯೋಗ-ಫಲಿತಾಂಶಗಳ ನಿರ್ಣಯ.

ಬಳಿ (ಬರಿ) ಆಯ್ಕೆಯು ಮದುವೆಯ ಮೊದಲ ಮೆಟ್ಟಿಲು ಎಂದು ಹೇಳಬೇಕು. ಓರ್ವ ಮಧ್ಯವರ್ತಿ (ದಲ್ಲಾಳಿ) ಇದ್ದು ಆತ ಎರಡೂ ಕುಟುಂಬದ (ಹೆಣ್ಣು ಮತ್ತು ಗಂಡು) ಬಳಿಯ ವಿವರಗಳನ್ನು ತಿಳಿದುಕೊಂಡು ಗಂಡನ್ನು ಹೆಣ್ಣಿನ ಮನೆಗೆ ಕರೆದುಕೊಂಡು ಹೋಗುತ್ತಾನೆ. ಸಾಮಾನ್ಯವಾಗಿ ಮರಾಟಿಗರಲ್ಲಿ ದಲ್ಲಾಳಿ, ಗಂಡು ಅಥವಾ ಹೆಣ್ಣಿನ ದೂರದ ಸಂಬಂಧಿಯಾಗಿರುತ್ತಾನೆ. ಸಂಬಂಧಿಕರೇ ಇರಬೇಕೆಂದಿಲ್ಲ. ಇತರ ಸಮುದಾಯದವರೂ ಕೂಡ ಮದುವೆಯ ಮಧ್ಯವರ್ತಿಯಾಗಿ ಮದುವೆ ಸಂಬಂಧವೇರ್ಪಡುವುದೂ ಸಹ ಇದೆ. ಸಂಬಂಧಿಕರು ಗಂಡನ್ನು ಅಥವಾ ಹೆಣ್ಣನ್ನು ಹತ್ತಿರದಿಂದ ಬಲ್ಲವರಾಗಿದ್ದು, ಮನೆತನದ, ಕುಟುಂಬದ, ಗುಣನಡತೆಗಳ ಬಗ್ಗೆ ಚೆನ್ನಾಗಿ ಅರಿತವರಿರುತ್ತಾರೆ. ಆ ಮೂಲಕ ವೈವಾಹಿಕ ಜೀವನದಲ್ಲಿ ಎಡರು-ತೊಡರುಗಳಾಗುವುದನ್ನು ತಪ್ಪಿಸಲಾಗುತ್ತದೆ.

ಹೆಣ್ಣು ನೋಡುವ ಸಂದರ್ಭದಲ್ಲಿ ಗಂಡಿನ ಜತೆ ಆತನ ಭಾವನೋ ಗೆಳೆಯನೋ ಇರುವುದು ಸಂಪ್ರದಾಯ. ಇಬ್ಬರು ಅಥವಾ ಮೂವರು ಬಂದು ಹೆಣ್ಣು ನೋಡಿ ಹೋಗುತ್ತಾರೆ. ಒಪ್ಪಿಗೆಯಾದರೆ ಮಧ್ಯವರ್ತಿ ಮುಖೇನ ಹುಡುಗಿಯ ಮನೆಯವರಿಗೆ ಕೆಲವೇ ದಿನಗಳಲ್ಲಿ ತಿಳಿಸುತ್ತಾರೆ. ಆ ನಂತರವೇ ಹೆಣ್ಣಿನ ಮನೆಯವರು ಗಂಡಿನ ಮನೆಯ ಬಗ್ಗೆ, ಉದ್ಯೋಗದ ಬಗ್ಗೆ, ಮನೆತನದ ಬಗ್ಗೆ ಖುದ್ದಾಗಿ ನೋಡಿ ಒಪ್ಪಿಗೆಯನ್ನು ದಲ್ಲಾಳಿಯ ಮುಖಾಂತರವೇ ತಿಳಿಸುತ್ತಾರೆ. ಹುಡುಗಿಯ ತಂದೆ, ಅಣ್ಣ ಅಥವಾ ತಮ್ಮಂದಿರು ಅಥವಾ ಕುಟುಂಬದ ಹಿರಿಯರು ಹೋಗಿ ಹುಡುಗನ ಮನೆಯನ್ನು ಮನೆತನದ ಬಗ್ಗೆ ವಿವರಗಳನ್ನು ಪಡೆಯುತ್ತಾರೆ. ಎರಡನೆಯ ಬಾರಿಗೆ ಹುಡುಗನ ಕಡೆಯವರು ೫-೧೦ ಮಂದಿ ಮಹಿಳೆಯರ ಸಮೇತ ಹುಡುಗಿಯನ್ನು ನೋಡಲು ಹೋಗುತ್ತಾರೆ. ಹಾಗೆಯೇ ಹುಡುಗನ ಮನೆಯವರೂ ಬಂದು ನೋಡಿ ವಿಚಾರಿಸಿಕೊಂಡು ಹೋಗುತ್ತಾರೆ.

### ನಿಶ್ಚಯ ಸಮ್ಮಾನಗಳು

ಅಧಿಕೃತವಾಗಿ ಹೆಣ್ಣು-ಗಂಡು ಮಧ್ಯೆ ವೈವಾಹಿಕ ಸಂಬಂಧವೇರ್ಪಡುವುದೇ ಈ ನಿಶ್ಚಯ ಸಮ್ಮಾನಗಳ ಮೂಲಕ. ಒಂದು ರೀತಿಯಲ್ಲಿ ಎರಡು ಕುಟುಂಬಗಳ, ಮನೆತನಗಳ ಮಧ್ಯೆ ನಡೆಯುವ ಪ್ರಥಮ ಸನ್ಮಾನಗಳು, ಸತ್ಕಾರಗಳು,

ಇವಾಗಿವೆ ಎಂದು ಹೇಳಬೇಕು. ಪ್ರಥಮವಾಗಿ ಹೆಣ್ಣಿನ ಮನೆಯಲ್ಲಿ ನಿಗದಿತ ದಿನದಂದು 'ಸಮ್ಮಾನ'ಕ್ಕೆ ತಯಾರುಮಾಡಿ ಗಂಡಿನ ಮನೆಗೆ ಮತ್ತು ಹತ್ತಿರದ ಸಂಬಂಧಿಕರಿಗೆ ಮತ್ತು ನೆರೆಹೊರೆಯವರಿಗೆ ಆಮಂತ್ರಣ ನೀಡುತ್ತಾರೆ. ಅಡಿಕೆ ವೀಳ್ಯದೆಲೆಯ ಮೂಲಕ ಬಾಯ್ಮಾತಿನಲ್ಲಿ ಆಮಂತ್ರಣ ನೀಡಲಾಗುತ್ತದೆ. ಈ ಕಾರ್ಯಕ್ರಮಕ್ಕೆ ಗಂಡಿನ ಮನೆಯವರು, ಕುಟುಂಬಸ್ಥರು, ನೆಂಟರು ಸೇರಿ ೨೫ ರಿಂದ ೩೦ ಮಂದಿ ಬಂದಿರುತ್ತಾರೆ. ಸಂಪ್ರದಾಯದಂತೆ ಕೋಳಿಸಾಂಬಾರು, ಇಡ್ಲಿ ಮತ್ತು ಪಾಯಸ ಭೋಜನದಲ್ಲಿ ಮುಖ್ಯವಾಗಿರುತ್ತದೆ. ಇದು ಗಂಡಿನ ಮನೆಯವರಿಗೆ ಹೆಣ್ಣಿನ ಮನೆಯವರು ನೀಡುವ ಮೊದಲ ಆತಿಥ್ಯವಾಗಿರುತ್ತದೆ. ಅಂದು ಮಧ್ಯಾಹ್ನ ಹಿರಿಯರೆಲ್ಲ ಸೇರಿ ಎದುರುಬದುರು (ಮುಖಾಮುಖಿ) ಕುಳಿತು ವೀಳ್ಯವನ್ನು ಬದಲಾಯಿಸುತ್ತಾರೆ. ಆ ಮೂಲಕ ವೈವಾಹಿಕ ಸಂಬಂಧಕ್ಕೆ ಒಪ್ಪಿಗೆಯನ್ನು ನೀಡಲಾಗುತ್ತದೆ. ನಂತರ ಈ ಸಂಬಂಧವನ್ನು ನಿರಾಕರಿಸುವುದಾಗಲಿ, ಮುರಿಯುವುದಾಗಲಿ ಅಷ್ಟು ಸುಲಭವಲ್ಲ. ಹೆಣ್ಣಿನ ಮನೆಯಲ್ಲಿ ನಡೆಯುವ ಈ ಕಾರ್ಯಕ್ರಮಕ್ಕೆ ಹುಡುಗ ಮತ್ತು ಆತನ ತಾಯಿ (ಹುಡುಗಿಯ ಭಾವೀ ಅತ್ತೆ) ಭಾಗವಹಿಸಲು ನಿಷೇಧವಿದೆ.

ಇತರ ಸಮುದಾಯಗಳಲ್ಲಿ ಕಂಡು ಬರುವ ಉಂಗುರ ಧಾರಣೆ ಸಂಪ್ರದಾಯ ಮರಾಟಿಗರಲ್ಲಿಲ್ಲ. ಆದರೆ ಬದಲಾದ ಇಂದಿನ ಸಮಾಜದಲ್ಲಿ 'ನಿಶ್ಚಯ ಸಮ್ಮಾನ' ದಂದು 'ಉಂಗುರಧಾರಣೆ' ಹೆಚ್ಚುವರಿಯಾಗಿ ಸೇರಿಕೊಂಡಿದೆ. ಹಿರಿಯರು ಉಂಗುರಧಾರಣೆಯನ್ನು ಇಂದಿಗೂ ನಿರಾಕರಿಸುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನೋಡಿದ್ದೇನೆ. ಕೆಲವೊಂದು ಸಂಪ್ರದಾಯಗಳು ಬದಲಾಗುತ್ತಾ ಹೋಗುತ್ತಿವೆ. ಭೋಜನಾನಂತರ ಗಂಡಿನ ಮನೆಯವರೆಲ್ಲರೂ ಹೊರಡುತ್ತಾರೆ. ಈ ಸಂದರ್ಭದಲ್ಲಿ ತಮ್ಮ ಮನೆಯಲ್ಲಿನ ಸಮ್ಮಾನಕ್ಕೆ ಆಮಂತ್ರಣವನ್ನೂ ಕೆಲವರು ನೀಡುವುದೂ ಇದೆ.

**೨ನೇ ನಿಶ್ಚಯ ಸಮ್ಮಾನ**

ಹೆಣ್ಣಿನ ಮನೆಯಲ್ಲಿ ನಡೆದಂತೆಯೇ ಗಂಡಿನ ಮನೆಯಲ್ಲೂ ಈ ನಿಶ್ಚಯ ಸಮ್ಮಾನ ನಡೆಯಲೇಬೇಕು. ನಿಗದಿಪಡಿಸಿದ ಶುಭದಿನದಂದು ಈ ನಿಶ್ಚಯ ಸಮ್ಮಾನದಲ್ಲಿ ಗಂಡಿನ ಕುಟುಂಬದ ಸುಮಾರು ೨೫-೩೦ ಮಂದಿ ಆಮಂತ್ರಿತರಿರುತ್ತಾರೆ. ಅಂದು ಮಧ್ಯಾಹ್ನ ಎರಡೂ ಮನೆತನದ ಹಿರಿಯರೆಲ್ಲರೂ ಸೇರಿ ಒಪ್ಪಂದವೇರ್ಪಡಿಸಿ ವಿವಾಹದ ಬಗ್ಗೆ ಮಾತುಕತೆ ನಡೆಸುತ್ತಾರೆ. ೨೦ ವೀಳ್ಯದೆಲೆ ಮತ್ತು ೫ ಅಡಿಕೆಯನ್ನು ಬದಲಾಯಿಸಿ, ವಿವಾಹದ ಖರ್ಚು, ವೆಚ್ಚ ಒಡವೆ, ಸ್ಥಳ ದಿನಗಳ ಬಗ್ಗೆ ಎಲ್ಲಾ ವಿಚಾರಗಳನ್ನು ಚರ್ಚಿಸುತ್ತಾರೆ. ಬಹುತೇಕ ಬುಡಕಟ್ಟುಗಳಲ್ಲಿ ವರದಕ್ಷಿಣೆ ಇರುವುದಿಲ್ಲ. ಅಂತೆಯೇ ಮರಾಟಿ ಬುಡಕಟ್ಟಿನಲ್ಲೂ ವರದಕ್ಷಿಣೆಯ ಶಾಪ ಇದ್ದಿಲ್ಲ. ಆದರೆ ಬದಲಾವಣೆಯನ್ನು ಬಯಸುವ ಸಹಜ ಪ್ರಕ್ರಿಯೆಯಿಂದಾಗಿ ಇಂದಿನ ಮರಾಟಿ ಸಮಾಜದಲ್ಲಿ ವರದಕ್ಷಿಣೆ ವ್ಯಾಪಕವಾಗುತ್ತಿರುವುದು ವಿಷಾದನೀಯವೆನ್ನಬೇಕು. ಹಿಂದಿನ ಕಾಲದಲ್ಲಿ ವರದಕ್ಷಿಣೆಯ ಬದಲಾಗಿ ವಧುದಕ್ಷಿಣೆ ಪ್ರಚಾರದಲ್ಲಿತ್ತು ಎಂದು ಎಲ್ಲಾ ವಕ್ತೃಗಳೂ ಹೇಳುತ್ತಾರೆ. ವಧುದಕ್ಷಿಣೆಯನ್ನು 'ತೆರ' ಎಂದೂ ಕರೆಯಲಾಗುತ್ತದೆ. ಸಂಪ್ರದಾಯದಂತೆ ಹತ್ತು ರೂಪಾಯಿ ಇಪ್ಪತ್ತೈದು ಪೈಸೆ ತೆರ ಕೊಡಲೇಬೇಕು. ಇಂದು ವಧುದಕ್ಷಿಣೆ ಬದಲು ವರದಕ್ಷಿಣೆ ಜೊತೆಗೆ ಬಂಗಾರವನ್ನು ಕೊಡುವ ಪದ್ಧತಿ ಮರಾಟಿ ಸಮಾಜದಲ್ಲಿದೆ.

## ಮದುವೆ ಮನೆಯ ವಾತಾವರಣ

ನಿಶ್ಚಯ ಸಮ್ಮಾನದ ದಿನದಿಂದಲೇ ಮದುವೆ ಮನೆ ಹೊಸ ಕಳೆಯನ್ನೇ ಪಡೆದುಕೊಳ್ಳುತ್ತದೆ. ಸಾಂಪ್ರದಾಯಿಕ ಏಳು ದಿನಗಳ ಮದುವೆ ಇಂದು ಒಂದೆರಡು ದಿನಗಳಿಗೆ ಸೀಮಿತವಾದರೂ ಗೌಜಿಗದ್ದಲಗಳು ಹಿಂದಿನಂತೆಯೇ ಕಂಡುಬರುತ್ತದೆ. ಮನೆಯ ಅಂಗಳ ಚಪ್ಪರವನ್ನಾವರಿಸಿರುತ್ತದೆ. ಇಡೀ ಮನೆಗೆ ಸುಣ್ಣ ಬಣ್ಣ ಬಳಿದು ತಳಿರು-ತೋರಣಗಳಿಂದ ಅಲಂಕರಿಸಿ ಎಲ್ಲರನ್ನೂ ಸ್ವಾಗತಿಸಲು ಮನೆಯ ಎಲ್ಲಾ ಸದಸ್ಯರು ಉತ್ಸುಕರಾಗಿರುತ್ತಾರೆ. ಇಂದು ಬಹುತೇಕ ಮರಾಟಿಗರ ಮದುವೆ ಸಮಾರಂಭಗಳು ಪಟ್ಟಣಗಳ, ನಗರಗಳ ಕಲ್ಯಾಣ ಮಂಟಪಗಳಲ್ಲಿ, ಹತ್ತಿರದ ದೇವಾಲಯದ ಕಲ್ಯಾಣ ಮಂಟಪಗಳಲ್ಲಿ ನಡೆಯುತ್ತಿವೆ. ಆದರೂ ಮನೆಯ ವಾತಾವರಣ ಬದಲಾವಣೆಯಾಗುವುದರಲ್ಲಿ ವ್ಯತ್ಯಯ ಆಗಿಲ್ಲ. ಮನೆಯ ಸದಸ್ಯರಿಗೆ ಮನೆ ಮನೆಪರಿಸರವನ್ನು ಒಪ್ಪ ಓರಣವಾಗಿ ಮಾಡುವುದೇ ಆ ಸಂದರ್ಭದ ಮುಖ್ಯ ಕೆಲಸವೂ ಹೌದು. ಸ್ವಚ್ಛತೆಗೆ ಹೆಚ್ಚಿನ ಪ್ರಾಶಸ್ತ್ಯ ನೀಡುವುದು ಮರಾಟಿಗರಲ್ಲಿ ಕಂಡುಬರುತ್ತದೆ. ಶ್ರೀಮಂತರು ಮನೆ ನೆಲವನ್ನೆಲ್ಲಾ ಸಿಮೆಂಟ್‌ಗಾರೆಗಳಿಂದ ಅಲಂಕರಿಸಿದರೆ ಬಡವರು ಸಗಣಿ ಸಾರಿಸಿ ನೆಲವನ್ನು ಅಂದಗೊಳಿಸುತ್ತಾರೆ. ಮಳೆಗಾಲದಲ್ಲಿ ವಿವಾಹ ಸಮಾರಂಭಗಳು ನಡೆಯುತ್ತಿದ್ದರೆ ಮನೆಯ ಅಂಗಳದಲ್ಲಿ ವಿಶೇಷ ರೀತಿಯ ಚಪ್ಪರ ಹಾಕಿಸಬೇಕಾಗುವುದು. ಅಡಿಕೆ ಸೋಗೆಯನ್ನು ಹಾಕಿ ಮಳೆನೀರು ಒಳಬರದಂತೆ ತಡೆಯುತ್ತಾರೆ. ಇತರೆ ಸಂದರ್ಭಗಳಲ್ಲಿ ತೆಂಗಿನ ಗರಿಯ ತಟ್ಟಿಯನ್ನು ಹಾಕಿ ಅಂಗಳ ನೆರಳಾಗಿಸುತ್ತಾರೆ. ಚಪ್ಪರವನ್ನು ನೋಡಿಯೇ ಮದುವೆಮನೆಯನ್ನು ಸುಲಭವಾಗಿ ಗುರುತಿಸಲು ಸಾಧ್ಯ.

## ಮದುರಂಗಿ ಶಾಸ್ತ್ರ

ಮದುವೆ ಮಂಗಳಕಾರ್ಯ ಮದುರಂಗಿ ಶಾಸ್ತ್ರ ಮುಖೇನ ಆರಂಭವಾಗುತ್ತದೆ. ಸಂಪ್ರದಾಯದಂತೆ ಪ್ರತಿಯೊಬ್ಬ ಮರಾಟಿಗರ ಮದುವೆಯಲ್ಲಿ ಮದುರಂಗಿ ಶಾಸ್ತ್ರಕ್ಕೆ ವಿಶೇಷವಾದ ಮಹತ್ವ ಇದೆ. ಆ ನಂತರವೇ ಮರುದಿನ ಧಾರಾಕಾರ್ಯ ನಡೆಯುವುದು. ವಧು-ವರರ ಎರಡೂ ಮನೆಯಲ್ಲಿ ಪ್ರತ್ಯೇಕವಾಗಿ ಈ ಮದುರಂಗಿ ಶಾಸ್ತ್ರ ನಡೆಯುತ್ತದೆ ಮದುವೆಯ ಮುನ್ನಾದಿನ ಮಧ್ಯಾಹ್ನ ದೇವರ ಊಟ ನಡೆಯಬೇಕು. ಆರಂಭದಲ್ಲಿ ಗಣಪತಿ ಸುತ್ತೆಯಿಟ್ಟು ಹಿರಿಕಿರಿಯರೆಲ್ಲರೂ ಪ್ರಾರ್ಥನೆ ಮಾಡುತ್ತಾರೆ. ಓರ್ವ ಹೆಣ್ಣು ಮಗಳು ಸ್ನಾನಮಾಡಿ ಸಸ್ಯಾಹಾರ ಪಾಯಸದೂಟ ತಯಾರಿಸುತ್ತಾಳೆ. ದೇವರ ಊಟವಾದುದರಿಂದ ಮಾಂಸಾಹಾರ ನಿಷೇಧ. ಪ್ರತ್ಯೇಕವಾಗಿ ದೇವರ ಹೆಸರಿನಲ್ಲಿ ಇಬ್ಬರು ಮಕ್ಕಳಿಗೆ ವಿಶೇಷವಾಗಿ ಊಟ ಹಾಕಲಾಗುತ್ತದೆ. ಮಕ್ಕಳು ಕುಟುಂಬಸ್ಥ ಅಥವಾ ಹತ್ತಿರದ ಸಂಬಂಧಿಕರಿಂದ ಹೊರತಾಗಿರಬೇಕು.

ಮಧ್ಯಾಹ್ನದ ಭೋಜನಾನಂತರ ನಾಲ್ಕೈದು ಹೆಂಗಸರು ಸೇರಿ ಭತ್ತ ಕುಟ್ಟುವ ಸಂಪ್ರದಾಯವಿದೆ. ಇಂದು ಬಹುತೇಕವಾಗಿ ತೆರೆಯಮರೆಗೆ ಸರಿದಿರುವ ಈ ಆಚರಣೆಯಲ್ಲಿ ಒನಕೆಗೆ ಮಾವು, ಹಲಸು, ರೆಂಜೆ (Caesalpinia Puleherrima) ಮರದ ಎಲೆಗಳನ್ನು ಮೇಲಿಂದ ಕೆಳಗೆ ಐದು ಹಂತಗಳಲ್ಲಿ ಕಟ್ಟಿರುತ್ತಾರೆ. ಇತರ ಮಹಿಳೆಯರು ಸೋಬಾನೆ ಹಾಡುತ್ತಿದ್ದರೆ ಇವರು ಒಂದೇ ಒನಕೆಯನ್ನಿಡಿದು ಸಾಂಕೇತಿಕವಾಗಿ ಭತ್ತ ಕುಟ್ಟುತ್ತಾರೆ. ಇದು ಕೃಷಿ ಸಂಬಂಧಿಯಾದ ಆಚರಣೆಯಾಗಿ ಇದು ಕಂಡುಬರುತ್ತದೆ.

**ಎಣ್ಣೆ ಏರಿಸುವುದು**

ವಧು ವರರಿಗೆ ಅವರವರ ಮನೆಯಲ್ಲಿ ಐವರು ಹೆಂಗಸರು ಸೇರಿ ತೆಂಗಿನ ಎಣ್ಣೆಯನ್ನು ಚಾಕುವಿನ ತುದಿಯಿಂದ ತೆಗೆದು ವಧು/ವರ ನ್ನು ಕುಳ್ಳಿರಿಸಿ ಅವರ ತಲೆ, ಭುಜ, ಕೈ ಸೊಂಟ, ಕಾಲು, ಪಾದ ಮತ್ತು ನೆಲಕ್ಕೆ ಹೀಗೆ ನೆಲದಿಂದ ತಲೆಯವರೆಗೆ ಮುಟ್ಟಿಸುತ್ತಾರೆ. ಇದನ್ನು 'ಎಣ್ಣೆ ಏರಿಸುವುದು' ಎಂದು ಕರೆಯುತ್ತಾರೆ. ಇದು ಒಂದು ರೀತಿಯ ತಡೆಯಾಗಿರುತ್ತದೆ. ಯಾವುದೇ ದುಷ್ಟಶಕ್ತಿ ವಧು ಅಥವಾ ವರನಿಗೆ ಯಾವುದೇ ರೀತಿಯಲ್ಲಿ ಆವಾಹನೆಯಾಗಬಾರದೆಂಬ ನಂಬಿಕೆಯಿಂದ ಇಂದು ಕೂಡ ಆಚರಣೆಯಲ್ಲಿದೆ. ವಿವಾಹನಂತರ ಮರುದಿನ ಗಂಡನ ಮನೆಯಲ್ಲಿ 'ಎಣ್ಣೆ ಇಳಿಸುವ' ಕಾರ್ಯ ನಡೆಯುತ್ತದೆ.



**ಕಲಶ ಸ್ನಾನ**

ಇದು ಕೂಡ ಎರಡೂ ಮನೆಗಳಲ್ಲಿ ಮದುರಂಗಿ ಶಾಸ್ತ್ರದ ದಿನದಂದು ನಡೆಯುವಂಥ ಆಚರಣೆಯಾಗಿದೆ. ವಯಸ್ಸಾದ ಮಹಿಳೆಯ ಮಡಿಲಲ್ಲಿ ವಧು/ವರ ಕುಳಿತುಕೊಳ್ಳುತ್ತಾಳೆ/ನೆ. ಇತರೆ ಮಹಿಳೆಯರು ಅವರ ತಲೆ ಮೇಲೆ ಕುರ್ದಿ ನೀರು ನಾಲ್ಕೈದು ಸಾರಿ ಪ್ರದಕ್ಷಿಣಾಕಾರದಲ್ಲಿ ಬಂದು ಹಾಕುತ್ತಾರೆ. ನಂತರ ಆರತಿ ಬೆಳಗುತ್ತಾರೆ. ಈ ಕಲಶಸ್ನಾನದಿಂದ ವಧು/ವರರ ಮೇಲಿರುವ ಶನಿ ಅಥವಾ ಅನಿಷ್ಟ ವಯಸ್ಸಾದ ಮಹಿಳೆಯ ಮುಖಾಂತರ ಹಸ್ತಾಂತರಗೊಳ್ಳುತ್ತದೆ ಎಂಬ ನಂಬಿಕೆಯ ಫಲಿತಾಂಶವೇ ಈ ಕಲಶಸ್ನಾನ. ವಧು/ವರನ ಶನಿಗ್ರಹಚಾರಗಳು ವಯಸ್ಸಾದ ಮುದುಕಿಗೆ ಹಸ್ತಾಂತರಗೊಂಡು ಕಠಿಣವಾಗಿದ್ದರೆ ಆಕೆಯನ್ನೇ ಬಲಿತೆಗೆದುಕೊಳ್ಳುತ್ತದೆ ಎಂಬ ನಂಬಿಕೆ ಈ ಆಚರಣೆಯನ್ನು ಜೀವಂತವಾಗಿರಿಸಿದೆ. ಮುದುಕಿ ತನ್ನ ಜೀವನದ ಅಂತಿಮ ಹಂತದಲ್ಲಿರುತ್ತಾಳೆ ಮತ್ತು ವಧು/ವರರು ತಮ್ಮ ವೈವಾಹಿಕ ಜೀವನಕ್ಕೆ ಕಾಲಿಡುತ್ತಿರುವುದು ಕೂಡ ಇಲ್ಲಿ ಮುಖ್ಯವಾಗುತ್ತದೆ. ಕಲಶಸ್ನಾನಕ್ಕೆ ವಯಸ್ಸಾದ ಮಹಿಳೆಯರು ಸಿಗದೇ ಹೋದರೆ ಪರ್ಯಾಯವಾಗಿ ಕದಳಿ ಬಾಳೆಗಿಡವನ್ನು ಕಡಿಯಲಾಗುತ್ತದೆ. ವಧು/ವರ ಕದಳಿ ಬಾಳೆಗಿಡವನ್ನು ಎಡಗೈಯಲ್ಲಿ ಒಂದೆ ಏಟಿಗೆ ತುಂಡರಿಸಬೇಕು. ಶರೀರದಲ್ಲಿ ಅನಿಷ್ಟ ಶನಿ ಇದ್ದರೆ ಬಾಳೆಗಿಡ ಸಾಯುತ್ತದೆ. ಇಲ್ಲದೆಹೋದರೆ ಪುನಃ ಚಿಗುರಿ ಬಾಳೆಗೊನೆ ಹಾಕುತ್ತದೆ. ಆದರೆ ಇಂದು ಎಲ್ಲಾ ಮದುವೆ ಸಮಾರಂಭಗಳಲ್ಲಿ ಕಾಂಡ ರಹಿತ ಕದಳಿ ಬಾಳೆಗಿಡವನ್ನು ತಂದು ಸಾಂಕೇತಿಕವಾಗಿ ನೆಡುವುದು ಮತ್ತು ಕೆಲಸ ಮುಗಿದ ಕೂಡಲೇ ಎಸೆಯುವುದು ಕಾಣಬರುತ್ತದೆ.

ಕಲಶಸ್ನಾನದ ನಂತರ ವಧು/ವರ ಮನೆಯಿಂದ ಹೊರಗೆ ಹೋಗುವಂತಿಲ್ಲ. ಹೋಗುವುದಿದ್ದರೂ ವಧುವಿನ ಜೊತೆ ಅಕ್ಕ ಅಥವಾ ತಂಗಿ, ವರನ ಜೊತೆ ಭಾವ ಅಥವಾ ಅಳಿಯ ಇರುತ್ತಾರೆ. ಈ ರೀತಿ ಜತೆಗಿರುವುದನ್ನು 'ಮುಡ್ಡೋಳಿ' ಅಥವಾ 'ಬುಡ್ಯೊಳೊ' ಎಂದು ಕರೆಯುತ್ತಾರೆ.

ಮದುರಂಗಿ ಶಾಸ್ತ್ರಕ್ಕೆ ಊರಿನ ಮಡಿವಾಳ ಬಂದು 'ಮಡಿವಸ್ತ್ರ' ನೀಡಬೇಕು. ಚಪ್ಪರದ ಮಧ್ಯೆ ಮೇಲ್ಭಾಗದಲ್ಲಿ ಮಡಿವಸ್ತ್ರವನ್ನು ಮಡಿವಾಳ ಕಟ್ಟಿದ್ದು, ಅದರ ಕೆಳಗಡೆ ಮದುರಂಗಿ (ಮೇಹಂದಿ) ಹಚ್ಚುವ ಕಾರ್ಯ ನಡೆಯುತ್ತದೆ. ವರನ ಮನೆಗೆ ಕ್ಷೌರಿಕನೂ ಬಂದು ಮಧುಮಗನ ಗಡ್ಡ ತೆಗೆಯಬೇಕು. ಮಡಿವಾಳ ಮತ್ತು ಕ್ಷೌರಿಕರಿಬ್ಬರು ತಕ್ಕ ಸಂಭಾವನೆಯೊಂದಿಗೆ ಅಕ್ಕಿ ತೆಂಗಿನಕಾಯಿಗಳನ್ನು ಪಡೆಯುತ್ತಾರೆ.



ಕಲಶ ಸ್ನಾನ



ಮದುರಂಗಿ ಶಾಸ್ತ್ರ (ವಧುವಿನ ಮನೆಯಲ್ಲಿ)



ಮದುರಂಗಿ ಶಾಸ್ತ್ರ (ವರನ ಮನೆಯಲ್ಲಿ)



ಮದುಮಗಳು

ಮಧುರಂಗಿ ಶಾಸ್ತ್ರವು ರಾತ್ರಿ ಸಮಯದಲ್ಲಿ ನಡೆಯುವುದು ಮರಾಟಿಗರ ಸಂಪ್ರದಾಯವಾಗಿದೆ. ಆದರೆ ಇಂದು ಕೆಲಸಕಾರ್ಯ, ವಿಶ್ರಾಂತಿಗಳಿಗೋಸ್ಕರ ಮಧ್ಯಾಹ್ನ ಆಚರಿಸುವುದನ್ನು ಕಾಣಬಹುದು. ವಧುವಿನ ಮನೆಗೆ ಅಂದು ರಾತ್ರಿ ವರನ ಮನೆಯಿಂದ ಇಬ್ಬರು ಬರುತ್ತಾರೆ. ಅವರು ವಧುದಕ್ಷಿಣೆಯಾಗಿ ಹನ್ನೆರಡು ರೂಪಾಯಿ ಐವತ್ತು ಪೈಸೆ, ಹೂವು, ಅಡಿಕೆ ಹಿಂಗಾರ, ಹಳದಿ ಬಣ್ಣದ ಸೀರೆ, ರವಿಕೆ, ಕಾಲುಂಗುರ, ಮೂಗುಬೊಟ್ಟು, ಅಡಿಕೆ-ವೀಳ್ಯದೆಲೆ ಮತ್ತು ಐದು ಕೊಂಡೆ ಅಕ್ಕಿ ಇತ್ಯಾದಿ ತರುತ್ತಾರೆ. ಹಿಂದಿನ ಕಾಲದಲ್ಲಿ ಬಳೆ, ಕನ್ನಡಿ, ಹೀಗೆ ವಧು ಬಳಸುವ ಅಲಂಕಾರಿಕ ಎಲ್ಲಾ ಸಾಮಗ್ರಿಗಳನ್ನು ತರಲೇಬೇಕಾಗಿತ್ತು. ಇಲ್ಲದಿದ್ದರೆ ಜಗಳವೇ ಆರಂಭವಾಗುತ್ತಿತ್ತು ಎಂದು ಹಿರಿಯ ವಕ್ತ್ಯಬಾಂಧವರು ತಮ್ಮ ಅನುಭವದ ಮಾಹಿತಿ ನೀಡುತ್ತಾರೆ. ವರನ ತಮ್ಮ (ಮೈದುನ) ವಧುವಿಗೆ ಉಡಿ ತುಂಬಿಸುತ್ತಾನೆ. ಈ 'ಉಡಿ ತುಂಬಿಸುವುದು' ಅಥವಾ 'ಮೊಟ್ಟೆ ತುಂಬಿಸುವುದು' ಸಮೃದ್ಧಿಯ ಸಂಕೇತ. ಇಲ್ಲಿ ಸಮೃದ್ಧಿಯ ಸಂಕೇತ ಹಾಗೂ ಮೂಲಭೂತ ಆಹಾರ ಅಕ್ಕಿಯನ್ನು ಉಡಿಯಲ್ಲಿ ಇಟ್ಟುಕೊಂಡು ವಧು ತನ್ನ ಗಂಡನ ಮನೆ ಹೊಸ್ತಿಲು ದಾಟಬೇಕೆಂಬುದೇ ಜನಪದರ ಆಶಯ. ಭೋಜನದ ನಂತರ ವರನ ಕಡೆಯಿಂದ ಬಂದವರು ರಾತ್ರಿಯೇ ಹೋಗುತ್ತಾರೆ.

### ದಿಬ್ಬಣ

ಮರಾಟಿಗರಲ್ಲಿ ಹೆಣ್ಣಿನ ಮನೆಯಲ್ಲಿಯೇ ಧಾರಕಾರ್ಯ ನಡೆಯುವುದು ರೂಢಿಯಲ್ಲಿದೆ. ವರನ ಮನೆಯಿಂದ ವಾದ್ಯ ಮೇಳದೊಂದಿಗೆ ವಧುವಿನ ಮನೆಗೆ ಬಂದು ವಿವಾಹ ಮಹೋತ್ಸವ ನಡೆಯುವುದು. ಆದರೆ ಬದಲಾದ ಸಮಾಜದಲ್ಲಿ ಇಂದು ಯಾವುದೇ ರೀತಿಯ ವಾದ್ಯ ಮೇಳಗಳಿಲ್ಲ. ಕಾಲ್ನಡಿಗೆಯ ದಿಬ್ಬಣದ ವಾತಾವರಣವಿಲ್ಲ. ಹತ್ತಿರದ ದೇವಾಲಯದ ಕಲ್ಯಾಣಮಂಟಪ ಅಥವಾ ನಗರ ಪಟ್ಟಣಗಳಲ್ಲಿರುವ ಕಲ್ಯಾಣ ಮಂಟಪಗಳಲ್ಲಿ ಮುಗಿಸಿಕೊಂಡು ಹೋಗುತ್ತಿದ್ದಾರೆ. ದೊಡ್ಡ ದೊಡ್ಡ ಶಬ್ದಗಳುಂಟಾಗುವ ಗರ್ನಾಲುಗಳು ಯಥೇಚ್ಛವಾಗಿದ್ದರೆ ಇಂದು ಕೆಲವೇ ಬೆರಳೆಣಿಕೆಯ ಗರ್ನಾಲುಗಳಲ್ಲಿ ಮದುವೆಯೆ ಮುಗಿಯುತ್ತದೆ. ಇಂದು ಎಲ್ಲ ಸಮಾರಂಭಗಳು ಯಾಂತ್ರಿಕವಾಗಿ ಮುಗಿಯುತ್ತವೆ. ಹಿಂದಿನ ಕಾಲದ ಉತ್ಸಾಹ, ಸಂತೋಷ ಇಂದಿನ ಯಾವುದೇ ಸಮಾರಂಭಗಳಲ್ಲಿ ಕಾಣಲು ಅಸಾಧ್ಯ ಎಂದು ಹೇಳಬೇಕು.

ದಿಬ್ಬಣ ಹೊರಡುವ ಸಮಯದಲ್ಲಿ ವಧು ತನ್ನ ಮನೆಗೆ ಬೆನ್ನು ಹಾಕಿ ಹೋಗುತ್ತಾಳೆ. ಆಕೆ ತಿರುಗಿ ನೋಡಬಾರದೆಂಬ ನಂಬಿಕೆ ಮರಾಟಿಗರಲ್ಲಿದೆ. ಮದುವೆ ಚಪ್ಪರದಲ್ಲಿ ಮೇಲ್ಗಡೆ ತೂಗುವ ದೀಪಕ್ಕೆ ಕೈಮುಗಿದು ಬೆನ್ನುಹಾಕಿ ಐದು ವೀಳ್ಯದೆಲೆ ಒಂದು ಅಡಿಕೆಯನ್ನು ಚಪ್ಪರದ ಮಾಡಿನಲ್ಲಿ ಇಟ್ಟು ತಿರುಗಿ ನೋಡದೇ ವಧು ಹೋಗಬೇಕು. ಹಿರಿ ಕಿರಿಯರೆಲ್ಲ ಸೇರಿ ಪ್ರಾರ್ಥಿಸಿ ''ಕುಲದಿಂದ ಹೊರ ಹೋಗುವ ಹೆಣ್ಣು ಸುಖ ಶಾತಿಯಿಂದ ಬಾಳಲಿ ಗಂಡನ ಮನೆಗೂ, ತವರು ಮನೆಗೂ ಹೆಸರು ತರಲಿ ಎಂದು'' ಕುಲದೇವರಲ್ಲಿ, ದೈವಗಳಲ್ಲಿ ಗುರುಹಿರಿಯರಲ್ಲಿ ಪ್ರಾರ್ಥಿಸುತ್ತಾರೆ. ಇದನ್ನು 'ಹೆಣ್ಣು ಇಳಿಸಿಕೊಡುವುದು' ಎಂದು ಕರೆಯುತ್ತಾರೆ. ಮದುವೆ ವಿಧಿ ಆಚರಣೆಗಳು ಮುಗಿದ ನಂತರ ಮನೆತನದ ಗುರಿಕಾರ ಅಥವಾ ಮುಖಂಡ ಅಡಿಕೆಯನ್ನು ಬಿತ್ತಬೇಕು. ಅದು ಬೆಳೆದು ಗೊನೆ ಹಾಕಿ ಬೆಳೆಯನ್ನು ಪಡೆದಂತೆ ಮದುವೆಯಾದ ಹೆಣ್ಣು ಹೆತ್ತು ವಂಶಾಭಿವೃದ್ಧಿಯಾಗಬೇಕೆಂಬುದೇ ಇದರ ಹಿಂದಿರುವ

ಆಶಯವಾಗಿದೆ. ವೀಳ್ಯ ಮತ್ತು ಅಡಿಕೆ ಮಾರಾಟಿಗರ ಪ್ರತಿಯೊಂದು ಆಚರಣೆ ಸಂಪ್ರದಾಯಗಳಲ್ಲಿ ಪ್ರಧಾನ ಪಾತ್ರ ವಹಿಸುವುದು ಕಂಡುಬರುತ್ತದೆ. ವೀಳ್ಯ ಅಡಿಕೆ ಒಂದು ಕುಟುಂಬ ಮಧ್ಯೆ ಸಂಬಂಧವೇರ್ಪಡಿಸುತ್ತದೆ. ಸಂಧಾನಗಳನ್ನು ಯಶಸ್ವಿಗೊಳಿಸುತ್ತದೆ. ದಿನನಿತ್ಯದ ದಿನಚರಿಯಲ್ಲಿ ಅಡಿಕೆ-ವೀಳ್ಯದ ಉಪಸ್ಥಿತಿ ಪ್ರತಿಯೊಂದು ಮರಾಟಿಗರ ಮನೆಯಲ್ಲಿ ಇದ್ದೇಇರುತ್ತದೆ. ಸಂಪ್ರದಾಯಾತ್ಮಕ ಆಚರಣೆಗಳಿಗೆ ಆಮಂತ್ರಣ ಪತ್ರಿಕೆಯೊಂದಿಗೆ ಅಡಿಕೆ ವೀಳ್ಯ ಕೊಟ್ಟು ಆಮಂತ್ರಿಸಿದರೆ ಅದು ವಿಶೇಷ ಆಮಂತ್ರಣ ಎಂದು ಪರಿಗಣಿಸಲ್ಪಡುತ್ತದೆ.

**ಧಾರಾಕಾರ್ಯ**

ವಿವಾಹದ ಕೇಂದ್ರ ಬಿಂದು ಧಾರೆ ಮುಹೂರ್ತ. ಮದುವೆ ಮಂಟಪದಲ್ಲಿ ಮುಹೂರ್ತದ ಮೊದಲ ಕಾರ್ಯಕ್ರಮಗಳು ನೆರವೇರುತ್ತವೆ. ಅವುಗಳಲ್ಲಿ ಪ್ರಮುಖವಾದುದು 'ನವಗ್ರಹಪೂಜೆ'. ಮರಾಟಿಗರಲ್ಲಿ ನವಗ್ರಹಪೂಜೆಯನ್ನು ವಧುವರರ ಸಮ್ಮುಖದಲ್ಲಿ ಕರ್ಹಾಡ ಬ್ರಾಹ್ಮಣ ಪುರೋಹಿತನು ನೆರವೇರಿಸುತ್ತಾನೆ. ನವಗ್ರಹ ಪೂಜೆಯನ್ನು 'ಗೆರೆಪೂಜೆ' ಎಂದು ಕರೆಯುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕೇಳಿದ್ದೇನೆ. ಆದರೆ ಅದು 'ಗೆರೆಪೂಜೆ'ಯಲ್ಲ. ಇಲ್ಲಿ ಅನಕ್ಷರಸ್ಥ ಮರಾಟಿ ಹಿರಿಯರು ಗ್ರಹಪೂಜೆಯನ್ನು ತಪ್ಪಾಗಿ 'ಗೆರೆಪೂಜೆ'ಯೆಂದು ಉಚ್ಚರಿಸಲು ಸಾಧ್ಯವಿದೆ. ನವಗ್ರಹಗಳನ್ನು ಮೊದಲು ಪೂಜಿಸಿ ನಂತರ ವಧುವನ್ನು ಧಾರೆಯೆರೆದು ಕೊಡುವುದಾಗಿದೆ. ಮರಾಟಿಗರಲ್ಲಿ ನವಗ್ರಹಪೂಜೆಯನ್ನು ಮೊರ (ತುಳ:ತಡ್ಪೆ)ದಲ್ಲಿ ನೆರವೇರಿಸುವುದು ವಿಶೇಷವಾಗಿದೆ. ಇತರೆ ಎಲ್ಲಾ ಧಾರ್ಮಿಕ ಕಾರ್ಯಗಳಲ್ಲಿ ನವಗ್ರಹ ಪೂಜೆಯನ್ನು ನೆಲದಲ್ಲಿ ಮಾಡುತ್ತಾರೆ. ಮೊರದಲ್ಲಿ ನವಗ್ರಹ ಪೂಜೆ ನೆರವೇರಿಸುವ ಬಗ್ಗೆ ಭಿನ್ನ ಭಿನ್ನ ಅಭಿಪ್ರಾಯಗಳು, ಕಥೆಗಳು ಕಂಡುಬಂದಿವೆ. ಸುಳ್ಯ ತಾಲೂಕಿನ ಸುಬ್ಬಯ್ಯ ನಾಯ್ಕರ ''ಪ್ರಕಾರ ಸೈನಿಕರಾದ ಮರಾಟಿಗರು ಓಡಿ ಹೋದರು. ಅಲ್ಲಲ್ಲಿ ನೆಲೆನಿಂತು ಸೈನಿಕರಲ್ಲದವರಂತೆ ನಟಿಸುತ್ತಾ ಜೀವನ ಮಾಡಲಾರಂಭಿಸಿದರು ಸೂಕ್ಷ್ಮವಾಗಿ ಶಿವಾಜಿ ಸೈನಿಕರನ್ನು ಹುಡುಕುತ್ತಾ ಬಂದ ತುರ್ಕರಿಗೆ ಮರಾಟಿಗರು ವಿವಾಹ ಸಮಾರಂಭ ಕಂಡುಬಂದರೆ ಓಡಿಹೋಗಲು ಅನುಕೂಲವಾಗುವಂತೆ 'ಮೊರ'ದಲ್ಲಿ ನವಗ್ರಹ ಪೂಜೆ ಮಾಡಲಾರಂಭಿಸಿದರು. ಒಂದು ವೇಳೆ ಶತ್ರುಗಳು ಬಂದರೂ ಧಾರ್ಮಿಕ ವಿಧಿಯಾದ ನವಗ್ರಹ ಪೂಜೆಗೆ ಯಾವುದೇ ರೀತಿಯ ಭಂಗ ಉಂಟಾಗಲಾರದು. ಸುಲಭವಾಗಿ ಮೊರವನ್ನೇ ಎತ್ತಿಕೊಂಡು ಹೋಗಬಹುದೆಂದು ಈ ಪದ್ಧತಿಯನ್ನು ರೂಢಿಯಲ್ಲಿರಿಸಿಕೊಂಡರು'', ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಕೃಷಿಕರಿಗೆ 'ಮೊರ' ಅಕ್ಷಯಪಾತ್ರೆಯಿದ್ದಂತೆ. ಪ್ರತಿ ದಿನ ಅದರ ಬಳಕೆಯ ಮುಖೇನ ತಮ್ಮ ಹೊಟ್ಟೆ ತುಂಬಿಸಿಕೊಳ್ಳುವುದು ಕಟುಸತ್ಯ. ಹಾಗಾಗಿ ಮೊರ ಜನಪದರ ಪಾಲಿಗೆ ಶ್ರೇಷ್ಠವಾದುದು ಮತ್ತು ಗೌರವಯುತವಾದುದು. ಮೊರವನ್ನು ಕಾಲಿನಿಂದ ತುಳಿಯಬಾರದು, ದಾಟಬಾರದು ಎಂಬೆಲ್ಲಾ ನಂಬಿಕೆಗಳಿವೆ. ಹಿಂದಿನ ಕಾಲದಲ್ಲಿ ಕಡು ಬಡವರಾಗಿ ಕಾಡಿನ ಬದು ಪ್ರದೇಶಗಳಲ್ಲಿ ಸಣ್ಣ ಸಣ್ಣ ಗುಡಿಸಲುಗಳಲ್ಲಿ ನೆಲೆನಿಂತು ಬದುಕುತ್ತಿದ್ದ ಮರಾಟಿಗರು ಸಮತಟ್ಟಾದ ಮೊರದಲ್ಲಿಯೇ ನವಗ್ರಹ ಪೂಜೆ ಮಾಡುವುದು ಸಾಧ್ಯ ಎಂಬ ಊಹೆಗೂ ಇಲ್ಲಿ ಅವಕಾಶವಿದೆ. ಪುರೋಹಿತರು ವರನನ್ನು ಕುಳ್ಳಿರಿಸಿ ಎದುರು ಕುಳಿತು ಗ್ರಹಪೂಜೆಗಾಗಿನ ಮೊರವನ್ನು ಮಧ್ಯದಲ್ಲಿರಿಸಿಕೊಳ್ಳುತ್ತಾರೆ. ಮೊರದಲ್ಲಿ ಒಂದು ಸೇರು ಅಕ್ಕಿ, ತೆಂಗಿನಕಾಯಿ, ಅಡಿಕೆ ಮತ್ತು ವೀಳ್ಯದೆಲೆಯನ್ನು ಇಡುತ್ತಾರೆ. ಹಿಡಿ ಅಕ್ಕಿ, ವೀಳ್ಯದೆಲೆ, ಅಡಿಕೆ, ತೊಂಡೆಕಾಯಿ,



ನವಗ್ರಹ ಪೂಜೆ (ವರನ ಉಪಸ್ಥಿತಿ)



ನವಗ್ರಹ ಪೂಜೆ (ವಧುವಿನ ಉಪಸ್ಥಿತಿ)



ಹೂವಿನ ಹಾರ ಧಾರಣೆ



ನವಗ್ರಹ ಪೂಜೆ ಶಾಸ್ತ್ರ ಕಾರ್ಯದಲ್ಲಿ ವರ

ಅರಿಸಿನ ತುಂಡು, ಗರಿಕೆ ಹುಲ್ಲು ಮತ್ತು ಒಂದು ನೂಲಿನ ಉಂಡೆ, ಬಾಸಿಂಗವನ್ನು ಎಂಟು ಕಡೆ ಜೋಡಿಸಿಕೊಡುತ್ತಾರೆ. ಪುರೋಹಿತರು ವರನನ್ನು ತಿರುಗಿ ಕುಳ್ಳಿರಿಸಿ ಅವನ ಕೈಗೆ ವೀಳ್ಯ ಮತ್ತು ಅಡಿಕೆಯನ್ನು ಕೊಟ್ಟು ಹಿಮ್ಮುಖವಾಗಿ ಮೊರಕ್ಕೆ ಬೀಳುವಂತೆ ಹಾಕಿಸುತ್ತಾರೆ. ಹೀಗೆ ವಧುಕೂಡ ಮಾಡುತ್ತಾಳೆ. ಪುರೋಹಿತರು ಧಾರೆ ಎರೆಯುವ ಹಿತ್ತಾಳೆ ಅಥವಾ ತಾಮ್ರದ ಗಿಂಡಿಯ ಕಲಶಕ್ಕೂ ಪೂಜೆ ಸಲ್ಲಿಸುತ್ತಾರೆ.

ನವಗ್ರಹ ಪೂಜೆಯ ನಂತರ ವರನ ಕಡೆಯವರು ಧಾರೆ ಸೀರೆ, ರವಿಕೆ, ಹೂವು ಮತ್ತು ಇತರೆ ಶೃಂಗಾರ ಪರಿಕರಗಳನ್ನು 'ಹರಿವಾಣ'ದಲ್ಲಿ ಕೊಡುತ್ತಾರೆ. ವಧು/ವರರ ಹಿರಿಯ ಮುಖಂಡರ ಉಪಸ್ಥಿತಿಯಲ್ಲಿ ವಧು/ವರರನ್ನು ಮಣೆಯ ಮೇಲೆ ನಿಲ್ಲಿಸುತ್ತಾರೆ. ಇವರ ಮಧ್ಯೆ ಬಿಳಿ ಬಟ್ಟೆಯನ್ನು ಹಿಡಿದು, ವಧುವಿನ ಕಡೆಯ ಮುಖ್ಯಸ್ಥರು ವಧುವಿನ ಕಡೆಯ ಯಜಮಾನನಿಗೆ ದೀಪದ ಜೊತೆಗೆ ಧಾರೆಸೀರೆಯನ್ನು ಹರಿವಾಣದಲ್ಲಿಟ್ಟು ಕೊಡುತ್ತಾರೆ. ಆ ಮೂಲಕ ವಧು ಧಾರೆ ಸೀರೆಯನ್ನು ಪಡೆದು ಉಟ್ಟುಕೊಂಡು ಧಾರಾಕಾರ್ಯಕ್ಕೆ ತಯಾರಾಗುತ್ತಾಳೆ.

ಮುಹೂರ್ತ ಸಮೀಪಿಸುತ್ತಿದ್ದಂತೆ ವರನನ್ನು ಆತನ ಭಾವ, ಮತ್ತು ವಧುವನ್ನು ಸೋದರಮಾವ ಧಾರೆ ಮಂಟಪಕ್ಕೆ ಕರೆತರುತ್ತಾರೆ. ವರನು ಪಂಚೆಯ ಕಚ್ಚೆ ಹಾಕಿ, ತಲೆಗೆ ಪೇಟ ಧರಿಸಿದ್ದು, ಎದೆ ಮತ್ತು ಬೆನ್ನಿಗೆ ಕತ್ತರಿಯಾಕಾರದಲ್ಲಿ ಸುತ್ತಿದ ರೇಶ್ಮೆ ಶಾಲು, ಬಾಸಿಂಗವನ್ನು ಧರಿಸಿರುತ್ತಾನೆ. ಸಂಪ್ರದಾಯದಂತೆ ಸೊಂಟದಲ್ಲಿ 'ಬಾಂಕ್' ಧರಿಸುವುದೂ ಇದೆ. (ಬಾಂಕ್-ಅರಸಿನ ತಾಗಿಸಿದ ಬಟ್ಟೆಯಿಂದ ಸುತ್ತಿರುವ ಚಾಕು, ಚಾಕುವಿನ ತುದಿಗೆ ಸುಳಿದ ಅಡಿಕೆಯನ್ನು ಇಟ್ಟಿರುತ್ತಾರೆ.) ಧಾರೆ ಎರೆದು ಕೊಡಲು ವರನ ತಂದೆ ಮತ್ತು ವಧುವಿನ ತಂದೆ ಅಥವಾ ಸೋದರ ಮಾವ ಇಬ್ಬರೂ ಅಂಗಿ ಧರಿಸಬಾರದು. ಬದಲಾಗಿ ಹೆಗಲಿಗೆ ಒಂದು ಶಾಲು ಅಥವಾ ಪಂಚೆಯನ್ನು ಹಾಕಿಕೊಂಡಿರುತ್ತಾರೆ. ತಲೆಗೆ ಮುಂಡಾಸು ಧರಿಸಿರುತ್ತಾರೆ. ಧಾರಾಕಂಬದ ಹತ್ತಿರ ಪೂರ್ವ ಪಶ್ಚಿಮವಾಗಿ ಎದುರು ಬದುರಾಗಿ ವಧು ವರರನ್ನು ನಿಲ್ಲಿಸುತ್ತಾರೆ. ಅವರ ಮಧ್ಯ ಬಿಳಿ ಬಟ್ಟೆಯನ್ನು ಪರದೆಯನ್ನಾಗಿ ಹಿಡಿಯುತ್ತಾರೆ. ಪುರೋಹಿತರ ಮಂತ್ರೋಚ್ಚಾರಣೆಯ ಮಧ್ಯೆ ವಧುವು ವರನ ಕೊರಳಿಗೆ ಮತ್ತು ವರನು ವಧುವಿನ ಕೊರಳಿಗೆ ಹೂವಿನ ಹಾರವನ್ನು ಹಾಕುತ್ತಾರೆ. ಪರದೆಯನ್ನು ತೆಗೆಯಲಾಗುತ್ತದೆ. ಪುರೋಹಿತರಿಂದ ಪಡೆದ ಧಾರೆಯ ಗಿಂಡೆಯನ್ನು ವಧುವಿನ ತಂದೆ ತಾಯಿ ನಮ್ಮ ಹುಡುಗಿಯನ್ನು ಧಾರೆ ಎರೆದು ಕೊಡುತ್ತೇವೆ ಎಂದು ಹೇಳುತ್ತಾರೆ. ವರನ ಎರಡು ಕೈಯಲ್ಲಿ ವಧುವಿನ ಕೈಯನ್ನಿರಿಸಿ ಮೇಲೆ ತೆಂಗಿನ ಕಾಯಿ, ವೀಳ್ಯದೆಲೆಯನ್ನಿಟ್ಟು ಅದರ ಮೇಲಿಂದ ಧಾರೆ ಗಿಂಡಿಯಲ್ಲಿರುವ ನೀರನ್ನು ವಧುವಿನ ತಂದೆ ತಾಯಿ ಅಥವಾ ಸೋದರಮಾವ ಅಥವಾ ದೊಡ್ಡಪ್ಪ, ಚಿಕ್ಕಪ್ಪ ಎರೆಯುತ್ತಾರೆ. ವಧುವರರ ಕೈ ಕೆಳಗೆ ಹರಿವಾಣವನ್ನು ಹಿಡಿದು ಬಿದ್ದ ನೀರನ್ನು ತಡೆಯುತ್ತಾರೆ. ಹೀಗೆ ಐದು ಬಾರಿ ಕಲಶ ನೀರಿನಿಂದ ಧಾರೆ ಎರೆಯುತ್ತಾರೆ. ಪುರೋಹಿತರಿಂದ ಕರಿಮಣಿ (ಮಾಂಗಲ್ಯ ಸರ)ಯನ್ನು ಪಡೆದು ವರನು ವಧುವಿನ ಕೊರಳಿಗೆ ಕಟ್ಟುತ್ತಾನೆ. ನೆರೆದವರೆಲ್ಲರೂ ಅಕ್ಷತೆಕಾಳು ಹಾಕಿ ವಧೂವರರನ್ನು ಹರಸುತ್ತಾರೆ.

**ಕಂಕಣಧಾರೆ**

ಪುರೋಹಿತರು ವಧೂವರರ ಎದೆಯ ಭಾಗಕ್ಕೆ ಬಿಳಿ ಬಣ್ಣದ ನೂಲನ್ನು ಐದು ಸುತ್ತು ಸುತ್ತುತ್ತಾರೆ. ಸೊಂಟದಿಂದ ಕೆಳಗೆ ಹಾಗೆಯೇ ಮೂರು ಸುತ್ತು ನೂಲನ್ನು ಸುತ್ತುತ್ತಾರೆ. ಎದೆಯ ಭಾಗದ ನೂಲನ್ನು ಕೆಳಗೆ ಕಾಲಿನ ಮೂಲಕ

ತೆಗೆದು ಅದಕ್ಕೆ ಅರಸಿನ ತುಂಡನ್ನು ಕಟ್ಟಿ ವರನು ಅದನ್ನು ವಧುವಿನ ಕೈಗೆ ಕಟ್ಟುತ್ತಾನೆ. ಸೊಂಟದ ಭಾಗದಲ್ಲಿದ್ದ ದಾರವನ್ನು ತಲೆಯ ಮೂಲಕ ತೆಗೆದು ಅದಕ್ಕೂ ಅರಸಿನ ಒಂದು ತುಂಡನ್ನು ಕಟ್ಟಿ ವಧು ವರನ ಕೈಗೆ ಕಟ್ಟುತ್ತಾಳೆ. ವಧುವು ಪ್ರಥಮ ಬಾರಿಗೆ ವರನ ಮನೆಗೆ ಗೃಹಪ್ರವೇಶದ ಮೂಲಕ ಹೋಗಿ ಅಲ್ಲಿ ವಧು ವರನ ಕೈಗೆ ಕಟ್ಟಿರುವ ಕಂಕಣವನ್ನು ಒಂದೇ ಕೈಯಲ್ಲಿ ಬಿಚ್ಚಬೇಕು. ಹಾಗೆಯೇ ವರನೂ ಕೂಡ ವಧುವಿನ ಕೈಯಲ್ಲಿರುವ ಕಂಕಣವನ್ನು ಒಂದೇ ಕೈ ಬಳಸಿ ಬಿಚ್ಚಬೇಕು.

ವಧುವಿಗೆ ಉಡಿ ತುಂಬಿಸಲಾಗುತ್ತದೆ. ವಧುವಿನ ಸೊಂಟಕ್ಕೆ ಬಿಳಿ ಪಂಚೆಯನ್ನು ಕಟ್ಟಿ ವರನು ಅವಳ ಮಡಿಲಿಗೆ ಹರಿವಾಣದಿಂದ ಅಕ್ಕಿ ವೀಳ್ಯ ಮತ್ತು ಅಡಿಕೆಯನ್ನು ತನ್ನ ಬೊಗಸೆಯಲ್ಲಿ ಮೂರು ಸಾರಿ ಹಾಕುತ್ತಾನೆ. ಉಳಿದ ಅಕ್ಕಿಯನ್ನು ಮಡಿಲಿಗೆ ಹಾಕಲಾಗುತ್ತದೆ. ವರನು ವಧುವಿನ ಕೈ ಹಿಡಿದು ಧಾರಾ ಮಂಟಪಕ್ಕೆ ಮೂರು ಸುತ್ತು ಪ್ರದಕ್ಷಿಣೆ ಬರುತ್ತಾರೆ. ವಧುವಿನ ಧಾರಾಸೀರೆಯ ಸೆರಗಿನ ತುದಿಗೆ ವರನ ಶಾಲಿನ ತುದಿಯನ್ನು ಕಟ್ಟುತ್ತಾರೆ. ಪುರೋಹಿತರು ಮಂಡಲ ಬರೆದು ಹತ್ತಿರದಲ್ಲಿ ವಧೂವರರನ್ನು ಕುಳ್ಳಿರಿಸುತ್ತಾರೆ. ಮಂಡಲದ ಮೇಲೆ ಹಲಸಿನ ಚಿಕ್ಕ ತುಂಡನ್ನು ಹಾಕಿ 'ಹೋಮ' ಮಾಡುತ್ತಾರೆ. ಹಾಲು, ಜೇನು, ತುಪ್ಪ, ಗಂಧಗಳನ್ನು ಹಾಕಿದ ನಂತರ ವಧೂವರರು ಹೂ ದಳವನ್ನು ಹೋಮಕ್ಕೆ ಹಾಕುತ್ತಾರೆ. ವಧೂವರರು ಹೋಮಕ್ಕೆ ಪ್ರದಕ್ಷಿಣೆ ಬಂದು ಕೈ ಮುಗಿಯುತ್ತಾರೆ. ವಧೂ ವವರನ್ನು ಕೋಣೆಗೆ ಕರೆದುಕೊಂಡು ಹೋಗಿ ಹಾಲು ಮತ್ತು ಬಾಳೆಹಣ್ಣು ತಿನ್ನಲು ಕೊಡುತ್ತಾರೆ. ಅಲ್ಲಿಗೆ ವಿವಾಹದ ಒಂದು ಹಂತಹ ವಿಧಿ ಆಚರಣೆಗಳು ಮುಗಿಯುತ್ತದೆ.

**ದೇಸೆ**

ವಧೂವರರನ್ನು ದೇಸೆ (ಸೇಸೆ)ಗೆ ಕೂರಿಸುವುದು ವಿವಾಹದ ಪ್ರಮುಖ ಸಂಪ್ರದಾಯಗಳಲ್ಲಿ ಒಂದು. ನವದಂಪತಿಗಳನ್ನು ಕುಳ್ಳಿರಿಸಿ ಎದುರು ದೀಪ ಹಚ್ಚುತ್ತಾರೆ. ಹರಿವಾಣದಲ್ಲಿ ಅಕ್ಕಿ ಕಾಳು ಇಟ್ಟಿರುತ್ತಾರೆ. ಕುಟುಂಬದ ಮುಖಂಡ "ವಧೂವರರ ಕೈ ಹಿಡಿದು ಸಮಸ್ತ ಸಭೆಗೆ ವಧೂ ವರರನ್ನು ದೇಸೆಗೆ ಕುಳ್ಳಿರಿಸುತ್ತಿದ್ದೇನೆ." ಎಂದು ಮೂರು ಸಾರಿ ಹೇಳಿದಾಗ ಸಭೆಯ 'ದೇವರ ಅಪ್ಪಣೆ' ಎಂದು ಹೇಳುತ್ತಾನೆ.

ಮೊದಲು ಐದು ಮಂದಿ ಮುತ್ತೈದೆಯರು ಅಕ್ಕಿ ಕಾಳನ್ನು ವಧೂವರರ ಮೊಣಕಾಲು, ಹೆಗಲು, ತಲೆಗೆ ಮುಟ್ಟಿಸಿ ಅಕ್ಷತೆ ಕಾಳು ಹಾಕುತ್ತಾರೆ. ನಂತರದವರು ತಲೆ ಮೇಲೆ ಅಕ್ಷತೆ ಕಾಳು ಹಾಕುತ್ತಾರೆ. ಉಡುಗೊರೆ ಕೊಡುವವರು ವರ /ವಧುವಿನ ಕೈಯಲ್ಲಿ ಕೊಡುತ್ತಾರೆ. ಹಿಂದಿನ ಕಾಲದಲ್ಲಿ ಗುರಿಕಾರನು ಅಥವಾ ಕುಟುಂಬದ ಗೌಡನು ಕುಳಿತುಕೊಂಡು ನೆಂಟರಿಷ್ಟರು ಹಾಕಿದ ಸಹಾಯದನ, ಉಡುಗೊರೆಯನ್ನು ಸಭೆಗೆ ಜೋರಾಗಿ ಹೇಳುತ್ತಿದ್ದನು. ಸಂಬಂಧಿಕರು ಜಾತಿ ಬಾಂಧವರು, ಸಹಾಯಧನ ಹಾಕಿದಾಗ ಗುರಿಕಾರನು ಅವರ ಹೆಸರಿನ ಜೊತೆಗೆ ಬಳಿಯನ್ನು ಸಭೆಗೆ ಹೇಳುವ ಸಂಪ್ರದಾಯವಿತ್ತು ಎಂದು ಹಿರಿಯರು ಹೇಳುತ್ತಾರೆ. ಅಂದಿನ ಕಾಲದಲ್ಲಿ ಗುರಿಕಾರ ನಂತಹವರು ಇಡೀ ಸಭೆಗೆ ಬಂದ ಜಾತಿ ಬಾಂಧವರ ಪ್ರತಿಯೊಬ್ಬರ 'ಬಳಿ'ಯ ಹೆಸರನ್ನು ತಿಳಿದವರಿರುತ್ತಿದ್ದರಂತೆ. ಯಾವುದೇ ತಪ್ಪಿಲ್ಲದಂತೆ ಹೇಳುವಷ್ಟು ನಿಪುಣರಾಗಿದ್ದರು ಎಂದು ವಕ್ತೃಗಳು ಹೇಳುತ್ತಾರೆ. ಇಂದು ಈ ರೀತಿಯ ಪದ್ಧತಿ ಮರೆಯಾಗಿದೆ. ಪ್ರತಿಯೊಬ್ಬರೂ ಕವರಿನೊಳಗೆ ಹಣವನ್ನು ಇಟ್ಟು ಹೆಸರು ಬರೆದಿರುವುದು ಮಾತ್ರ ಕಾಣಬರುತ್ತದೆ.

ಹಿಂದಿನ ಕಾಲದಲ್ಲಿ ಒಂದೇ ಕಂಚಿಯಿಟ್ಟು (ಹರಿವಾಣ) ವಧೂವರನ ಮನೆಯವರು ಸಮಾನಾಗಿ ಹಂಚಿಕೊಳ್ಳುತ್ತಿದ್ದರೆ. ಅಥವಾ ಬೇರೆ ಬೇರೆ ಕಂಚಿಯಿಟ್ಟು ವರನ ಸಂಬಂಧಿಕರು ವರನ ಕಡೆಗಿರುವ ಕಂಚಿಯಲ್ಲಿ ಹಾಕಿದರೆ ವಧುವಿನ ಸಂಬಂಧಿಕರು ವಧುವಿನ ಕಡೆಗಿರುವ ಕಂಚಿಯಲ್ಲಿ ಹಣ ಹಾಕುತ್ತಿದ್ದರು. ಇಂದು ಯಾವುದೇ ರೀತಿಯಲ್ಲಿ 'ಹಣ'ದ ಉಡುಗೊರೆಯನ್ನು ಬಹಿರಂಗ ಪಡಿಸುವುದಿಲ್ಲ. ಕೊನೆಗೆ ಮುಖಂಡನೇ "ದೇಸೆಯನ್ನು ಇಳಿಸುತ್ತಿದ್ದೇನೆ" ಎಂದು ಹೇಳಿ ಊಟಕ್ಕೆ ಎಲ್ಲರನ್ನು ಆಮಂತ್ರಿಸುತ್ತಾನೆ. ಮರಾಟಿಗರ ವಿವಾಹ ಮಹೋತ್ಸವದಲ್ಲಿ ಸಸ್ಯಹಾರದ ಊಟವೇ ರೂಢಿಯಲ್ಲಿದೆ. ಇತರೆ ಮಾಮಿ ಸನ್ಮಾನ, ನಿಶ್ಚಿತಾರ್ಥಗಳಲ್ಲಿ ಮಾಂಸ (ಮೀನು ಕೋಳಿ) ಬಳಕೆಯಾದರೆ ವಿವಾಹದ ದಿನ ಅದು ನಿಷಿದ್ಧವಾಗಿದೆ.

ಹಿಂದಿನ ಕಾಲದ ಮದುವೆಗಳೆಲ್ಲಾ ವಧುವಿನ ಮನೆಯಲ್ಲಿ ಜರುಗಿದರೆ ಇಂದು ಕಲ್ಯಾಣ ಮಂಟಪಗಳಲ್ಲಿ, ದೇವಸ್ಥಾನದ ಕಲ್ಯಾಣ ಮಂಟಪಗಳಲ್ಲಿ ನಡೆಯುವುದು ಸಾಮಾನ್ಯವಾಗಿದೆ. ವಧುವಿನ ಮನೆಯಲ್ಲಿ ಧಾರಾಕಾರ್ಯ ನಡೆದು ವರನು ತನ್ನ ಮನೆಗೆ ವಧುವನ್ನು ದಿಬ್ಬಣ ಸಮೇತ ಕರೆದುಕೊಂಡು ಬರುತ್ತಾನೆ. ಈಗ ಕಲ್ಯಾಣ ಮಂಟಪದಿಂದ ನೇರವಾಗಿ ವಧು ವರನ ಜೊತೆಗೆ ವರನ ಮನೆಗೆ ಬರುತ್ತಾಳೆ. ಪ್ರಥಮ ಬಾರಿಗೆ ಗಂಡನ ಮನೆ ಪ್ರವೇಶ ಮಾಡುತ್ತಾಳೆ. ಗೃಹ ಪ್ರವೇಶ ಮಾಡುವಾಗ ವಧುವಿಗೆ ವರನ ತಂಗಿ ಕಾಲಿಗೆ ನೀರೆರೆದು, ಆರತಿ ಎತ್ತಿ ಬರಮಾಡಿಕೊಳ್ಳುತ್ತಾಳೆ. ವಧು ಹೊಸ್ತಿಲು ದಾಟುವಾಗ ಐದು ಕಡೆ ಸ್ವಲ್ಪ ಅಕ್ಕಿ ಹಾಕಿ ಅದರ ಮೇಲೆ ಬಿಳಿ ವಸ್ತ್ರವನ್ನು ಹಾಸುತ್ತಾರೆ. ಅದರ ಮೇಲೆ ನಡೆದು ಬಂದು ದೇವರಕೋಣೆಯಲ್ಲಿ ದೇವರಿಗೆ ನಮಸ್ಕರಿಸುತ್ತಾಳೆ. ಇತರ ಸಮುದಾಯಗಳಲ್ಲಿ ಕಂಡುಬರುವ ಒಂದು ಸೇರು ಅಕ್ಕಿಯನ್ನು ಕಾಲಿನಿಂದ ದೂಡಿ ಗೃಹಪ್ರವೇಶ ಮಾಡುವ ಪದ್ಧತಿ ಮರಾಟಿಗರಲ್ಲಿ ಇಲ್ಲ. ಅಕ್ಕಿಯಂತಹ ಶ್ರೇಷ್ಠ ಆಹಾರವನ್ನು ಮತ್ತು 'ಸೇರು'ನ್ನು ಕಾಲಿನಿಂದ ಮುಟ್ಟುವುದು ಹಿತಕರವಲ್ಲ ಎಂದು ಹಿರಿಯರು ಅಭಿಪ್ರಾಯಪಡುತ್ತಾರೆ. ಹೊರಗೆ ಚಪ್ಪರದಲ್ಲಿ ಅವನ್ನು ಇಳಿಸುತ್ತಾಳೆ. ದೇಸಿಯ ಸಂದರ್ಭದಲ್ಲಿ ಸೆರಗಿನ ತುದಿಯಲ್ಲಿ ಅಕ್ಕಿಕಾಳನ್ನು ಕಟ್ಟುತ್ತಾರೆ. ಅದನ್ನು ಗಂಡನ ಮನೆಗೆ ಬಂದು ಅನ್ನಮಾಡಿ ಗಂಡನಿಗೆ ಬಡಿಸಬೇಕು ಎಂಬ ಪದ್ಧತಿಯೂ ಮರಾಟಿಗರಲ್ಲಿದೆ.

**ವಿನೋಧಾಚರಣೆ**

ನವ ದಂಪತಿಗಳು ವಿವಾಹದ ಮರುದಿನ ದಿನ ಕೆಲವು ವಿನೋದಗಳಿಂದ ಕೂಡಿದ ಆಚರಣೆಗಳಲ್ಲಿ ಪಾಲ್ಗೊಳ್ಳಬೇಕಾಗುತ್ತದೆ. ಓಕುಳಿ ನೀರಲ್ಲಿ ಬಂಗಾರ ಉಂಗುರ ಹುಡುಕುವುದು, ಅಡಿಕೆಯಾಟ, ಮೀನು ಹಿಡಿಯುವುದು, ಜೇನು ತೆಗೆಯುವುದು ಇತ್ಯಾದಿ ಆಟಗಳು ನವ ದಂಪತಿಗಳ ನಾಚಿಕೆ ಸ್ವಭಾವವನ್ನು ದೂರಮಾಡಲು ಸಹಕಾರಿಯಾಗುತ್ತದೆ. ಹಿಂದಿನ ಕಾಲದಲ್ಲಿ ನವ ದಂಪತಿಗಳು ಅಪರಿಚಿತರಾಗಿಯೇ ಇರುತ್ತಿದ್ದರು. ಹೆಣ್ಣು ಗಂಡನ್ನು ಸರಿಯಾಗಿ ನೋಡಿ ಮಾತನಾಡಿಸುವುದೇ ಮದುವೆಯ ನಂತರ. ಹಾಗಾಗಿ ಭಯ, ನಾಚಿಕೆ, ಸಹಜವಾಗಿರುತ್ತದೆ. ಇವನ್ನೆಲ್ಲಾ ಹೋಗಲಾಡಿಸಿ ಸುಗಮ ದಾಂಪತ್ಯದ ಸಲುವಾಗಿ ಈ ರೀತಿಯ ವಿನೋದ ಕ್ರಿಡೆಗಳ ಮೂಲಕ ನವ ದಂಪತಿಗಳನ್ನು ಹತ್ತಿರರನ್ನಾಗಿಸುವ ಆಶಯ ಜನಪದರದ್ದು. ಓಕುಳಿ ನೀರಲ್ಲಿ ಚಿನ್ನದ ಉಂಗುರವನ್ನು ಹಾಕುತ್ತಾರೆ. ಒಂದು ಬದಿಯಿಂದ ಪತಿ ಒಂದು ಕೈಹಾಕಿ ಹುಡುಕಿದರೆ ಮತ್ತೊಂದು ಬದಿಯಿಂದ ಪತ್ನಿ ಎರಡು ಕೈ ಹಾಕಿ ಓಕುಳಿ

ಸೀರಿಸಿಂದ ಉಂಗುರವನ್ನು ಹುಡುಕಿ ತೆಗೆಯಬೇಕು. ಯಾರು ಹೆಚ್ಚು ಸಾರಿ ತೆಗೆದರೋ ಅವರು ವಿಜಯಿ ಎಂದು ನಿರ್ಧರಿಸುತ್ತಾರೆ. ನೆರೆದ ನೆಂಟರಿಷ್ಟರು ತಮಾಷೆಗಳ ಮಧ್ಯೆ ಈ ಆಟ ಮುಂದುವರಿಯುತ್ತದೆ. ಕೆಲವೊಂದು ಸಾರಿ ಉಂಗುರ ಹಾಕುವವನು ಉಂಗುರ ಹಾಕದೆ ಹಾಕಿದಂತೆ ನಟಿಸುತ್ತಾನೆ. ಪತಿ ಪತ್ನಿಯರಿಬ್ಬರೂ ತಿಳಿಯದೇ ಅವರವರ ಕೈ ಮುಟ್ಟುತ್ತಾ ಉಂಗುರ ಹುಡುಕುತ್ತಾ ಇದ್ದರೆ ನೆರೆದವರು ತಮಾಷೆಯಲ್ಲಿ ಮುಳುಗಿರುತ್ತಾರೆ. ಹಿಂದಿನ ಕಾಲದ ಮದುವೆಗಳಲ್ಲಿ ವಿಚಿತ್ರ ತಮಾಷೆಗಳ ಮೂಲಕ ಪತಿ ಪತ್ನಿಯರ ಮಧ್ಯೆ ಸಲುಗೆಯನ್ನು ಉಂಟುಮಾಡುತ್ತಿದ್ದರಂತೆ. ಜೇನು ತೆಗೆಯುವ ನಟನೆಯನ್ನು ಗಂಡ-ಹೆಂಡತಿ ಮಾಡಬೇಕು. ಉರಿ (ಒಂದು ಜಾತಿಯ ಇರುವೆ) ಮೂಟೆಯನ್ನು ತಿಳಿಯದಂತೆ ಚೆನ್ನಾಗಿ ಬಟ್ಟೆಯಲ್ಲಿ ಸುತ್ತಿ ನವ ದಂಪತಿಗಳಿಗೆ ಕೊಟ್ಟು ಬಿಚ್ಚಲು ಹೇಳುತ್ತಿದ್ದರು. ಅವರು ತಿಳಿಯದೇ ಬಿಚ್ಚಿದ ತಕ್ಷಣ ಇರುವೆಗಳೆಲ್ಲಾ ಇಬ್ಬರ ಮೈಮೇಲೆ ಬಂದು ಕಚ್ಚುತ್ತಿದ್ದವು. ಅವರಿಬ್ಬರೂ ಕೊಸರಿಕೊಂಡರೆ ನೆರೆದವರು ನಗೆಗಡಲಲ್ಲಿ ಮುಳುಗುತ್ತಿದ್ದರು ಎಂದು ಹಿರಿಯರು ಅನುಭವಗಳನ್ನು ಬಿಚ್ಚಿಡುತ್ತಾರೆ.

ಅರಸಿನ ಬಣ್ಣದ ನೀರನ್ನು ಪತಿ-ಪತ್ನಿಯರಿಬ್ಬರೂ ಎದುರು ಬದುರು ಕುಳಿತುಕೊಂಡು ಎರಚಾಡುವುದು ಈ ಸಮಯದ ಒಂದು ಆಟ. ಯಾರು ಹೆಚ್ಚು ತೋಯುತ್ತಾರೋ ಅವರು ಸೋತಂತೆ. ಪ್ರತಿಯೊಂದು ಕ್ರೀಡೆಯಲ್ಲಿಯೂ ಪತಿ ಒಂದೇ ಕೈ ಉಪಯೋಗಿಸಬೇಕು. ಪತ್ನಿ ಮಾತ್ರ ಎರಡು ಕೈ ಉಪಯೋಗಿಸಬಹುದು.

ಈ ರೀತಿಯ ಹಾಸ್ಯ ವಿನೋದಗಳಿಂದ ಅಪರಿಚಿತರಾಗಿದ್ದ ನವದಂಪತಿಗಳು ಒಂದೆರಡು ದಿನಗಳಲ್ಲಿಯೇ ಪರಿಚಿತರಾಗುತ್ತಾರೆ. ಆ ಮೂಲಕ ತಾನು ಹುಟ್ಟಿ ಬೆಳೆದ ಮನೆಯನ್ನು ಬಿಟ್ಟು ಬಂದ ಬೇಸರ ಅಗಲಿಕೆಯ ತೀರ್ವತೆಯನ್ನು ಕಡಿಮೆ ಮಾಡಿಕೊಳ್ಳುತ್ತಾಳೆ. ಕೆಲವೇ ದಿನಗಳಲ್ಲಿ ಹೊಸ ಮನೆಗೆ (ಗಂಡನ ಮನೆ) ಪರಿಚಿತಳಾಗಿಬಿಡುತ್ತಾಳೆ. ಮರಾಟಿಗರಲ್ಲಿ ಸೊಸೆಗೆ ಅತ್ತೆಯು ಹೊಸ ಹೆಸರಿಡುವ ಪದ್ಧತಿಯಿದೆ. ಹಾಗಾಗಿ ಮರಾಟಿ ಹೆಂಗಸರು ತಂದೆಯ ಮನೆಯ ಹೆಸರಿನೊಂದಿಗೆ ಗಂಡನ ಮನೆಯ ಹೆಸರನ್ನು ಪಡೆಯುತ್ತಾರೆ. ಒಂದು ರೀತಿಯಲ್ಲಿ ಹೊಸ ಜೀವನವನ್ನು ಸಂಕೇತಿಸುತ್ತದೆ ಎಂದು ಹೇಳಬಹುದು.

**ಮಾಮಿ ಸಮ್ಮಾನ (ಅತ್ತೆ ಸಮ್ಮಾನ)**

ಮರಾಟಿಗರಲ್ಲಿ ಸಂಬಂಧ ಬೆಳೆಸುವ ಸಂದರ್ಭದಲ್ಲಿ ಅತ್ತೆ ವಧುವಿನ ತಾಯಿಗೆ ವಿಶೇಷವಾದ ಸ್ಥಾನಮಾನವಿದೆ. (ತುಳು:ಮಾಮಿ) ಅತ್ತೆಯು ಸಂಬಂಧ ನೋಡುವ ಮದುವೆಯ ಸಂದರ್ಭಗಳಲ್ಲಿ ಅಳಿಯನ ಮನೆಗೆ ಬರಲು ನಿಷೇಧವಿದೆ. ವಿಶೇಷವಾಗಿ 'ಅತ್ತೆ ಸಮ್ಮಾನ'ದ ಮೂಲಕವೇ ಆಕೆ ಬರುತ್ತಾಳೆ. ಮದುವೆಯಾದ ಒಂದೆರಡು ವಾರದೊಳಗೆ ಗಂಡನ ಮನೆಯವರು ಹೆಂಡತಿಯ ಮನೆಗೆ ಬಂದು ಆಮಂತ್ರಣ ವೀಳ್ಯ, ಅಡಿಕೆಯ ಮುಖಾಂತರ ಕೊಡುತ್ತಾರೆ. ಸಂಪ್ರದಾಯದಂತೆ ಮದುವೆಯಾಗಿ ೮ ದಿನಗಳೊಂಳಗೆ ಅಥವಾ ೮ನೇ ದಿನ 'ಮಾಮ್ಮಿ ಸಮ್ಮಾನ' ನಡೆಯುವುದು. ಮಾಮಿ (ಅತ್ತೆ)ಯನ್ನು ಸತ್ಕರಿಸುವ ಸಲುವಾಗಿ ಅಂದು ವಿಶೇಷವಾಗಿ ದೋಸೆ, ಕೋಳಿ ಪದಾರ್ಥ ಮತ್ತು ಪಾಯಸದೂಟ ಮಾಡಬೇಕೆಂಬುದು ಪರಂಪರಾತವಾಗಿ ಬಂದ ಪದ್ಧತಿ. ಮಾಮಿ ಸಮ್ಮಾನ ಮಾಡದೇ ಇದ್ದರೆ ಅತ್ತೆ ತನ್ನ ಮಗಳನ್ನು ಕರೆದುಕೊಂಡು ಹೋಗಲು ಅಳಿಯನ ಮನೆಗೆ ಬರುವುದೇ ಇಲ್ಲ ಎಂದು ಹೇಳುತ್ತಾರೆ. ಇದೊಂದು ಅತ್ತೆಗೆ ಗೌರವ ನೀಡುವ ಪದ್ಧತಿಯಾಗಿದ್ದು ಮಹತ್ವವನ್ನು ಪಡೆದುಕೊಂಡಿದೆ.

**ವಿಧವಾ ವಿವಾಹ**

ಮರಾಟಿಗರಲ್ಲಿಯೂ ವಿಧವಾ ವಿವಾಹಗಳಾದ ಉದಾಹರಣೆಗಳಿವೆ. ವಿಧವೆಗೆ ಇತರೆ ನಿಷೇಧಗಳು ಇಂದೂ ಹಳ್ಳಿ ಗ್ರಾಮೀಣ ಪ್ರದೇಶಗಳಲ್ಲಿ ಜಾರಿಯಲ್ಲಿವೆ. ಕುಟುಂಬದ ದೇವತಾ ಕಾರ್ಯಗಳಲ್ಲಿ ಧಾರ್ಮಿಕ ಆಚರಣೆಗಳೆಲ್ಲ ಆಕೆ ಪಾತ್ರ ಏನಿರುವುದಿಲ್ಲ. ಪತಿ ಸತ್ತು ಪತ್ನಿ ಬದುಕಿದ್ದರೆ ವಿಧವೆಯಾಗಿ ಜೀವನ ಸಾಗಿಸಬೇಕು. ಆದರೆ ಪತ್ನಿ ಸತ್ತು ಪತಿ ಬದುಕಿದ್ದರೆ ಆತ ಇನ್ನೊಂದು ಮದುವೆಯಾಗಿ ಸಂಸಾರ ನಡೆಸಬಹುದು ಎನ್ನುವ ನಿಯಮ ನಿಬಂಧನೆಗಳು ಮರಾಟಿ ಸಮಾಜದಲ್ಲಿ ಇಂದಿಗೂ ಇವೆ. ಪತ್ನಿ ಸತ್ತು ಪತಿ ಇನ್ನೊಂದು ಮದುವೆಯಾಗುವುದು ಧಾರಾಕಾರ್ಯದ ಮುಖೇನ ವಲ್ಲ. ಈ ಮದುವೆಯನ್ನು ತುಳು ಭಾಷೆಯಲ್ಲಿ 'ಕೈ ಪತ್ತಾಪುನೆ' (ಕೈ ಹಿಡಿಸುವುದು) ಎಂದು ಹೇಳುತ್ತಾರೆ. ಈ ಕೈ ಹಿಡಿಸುವುದು (ಕೂಡಿಕೆ) ಮದುವೆಯಲ್ಲಿ ಪುರುಷನಿಗೆ ಎರಡನೇ ಮದುವೆಯಾದರೆ ಸ್ತ್ರೀಗೆ ಮೊದಲನೇ ವಿವಾಹ ಇದಾಗಿರಬಹುದು. ಅಥವಾ ವಿಧವೆಯೂ ಆಗಿರಬಹುದು. ಮರಾಟಿಗರಲ್ಲಿ ಒಬ್ಬ ಪುರುಷನಿಗೆ ಏಳು ಸಾರಿ ಧಾರೆಯ ಮೂಲಕ ಮದುವೆಯಾಗಬಹುದು ಆದರೆ ಸ್ತ್ರೀ ಒಂದೇ ಸಾರಿ ಧಾರೆಯ ಮೂಲಕ ಮದುವೆಯಾಗಬಹುದೆಂಬ ಸಂಪ್ರದಾಯವಿದೆ ಎಂದು ಹಿರಿಯರು ಹೇಳುತ್ತಾರೆ.

ಪುರುಷರು ಧಾರಾಕಾರ್ಯದ ಮೂಲಕ ಎಷ್ಟು ಒಂದಕ್ಕಿಂತ ಹೆಚ್ಚು ಮದುವೆಯಾಗಬಹುದು. ಆದರೆ ಸ್ತ್ರೀ ಜೀವನದಲ್ಲಿ ಒಂದೇ ಬಾರಿ ಧಾರಾಕಾರ್ಯದ ಮೂಲಕ ಮದುವೆಯಾಗಲು ಅನುಮತಿಯಿದೆ. ಇಲ್ಲಿ ಲಿಂಗತಾರತಮ್ಯವನ್ನು ಕಾಣಬಹುದು. ಮರಾಟಿ ಬುಡಕಟ್ಟಿನಲ್ಲಿ ಕೆಲವೊಂದು ಸಂಪ್ರದಾಯ ನಂಬಿಕೆಗಳು ಲಿಂಗತಾರತಮ್ಯವನ್ನು ನಿರಂತರವಾಗಿ ಸಮಾಜದಲ್ಲಿ ಜೀವಂತಿಕೆಯಲ್ಲಿರಿಸಿಕೊಳ್ಳುತ್ತಿರುವುದು ಇಂದಿಗೂ ಇದೆ.

**ಸೀಮಂತ (ಬಯಕೆ)**

'ಬಯಕೆ' ಎನ್ನುವ ಪದವು 'ಆಶೆ' ಎಂಬರ್ಥವನ್ನು ನೀಡುತ್ತದೆ. ಸಂಸ್ಕೃತದಲ್ಲಿ ಬಯನ, ವಯನ ಅಂದರೆ ಸಿಹಿ ತಿಂಡಿಯ ಉಡುಗೊರೆ ಎಂದರ್ಥವನ್ನು ನೀಡುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಹುತೇಕ ಎಲ್ಲಾ ಜಾತಿ ಸಮುದಾಯಗಳಲ್ಲಿಯೂ ಈ 'ಬಯಕೆ' ಆಚರಣೆಯನ್ನು ಕಾಣಬಹುದು. ಹಿಂದಿನ ಕಾಲದಲ್ಲಿ ಓರ್ವ ವಿವಾಹಿತ ಮಹಿಳೆ ಗರ್ಭಿಣಿಯಾದಾಗಲೆಲ್ಲಾ ಈ ಬಯಕೆಯನ್ನು ನೆರವೇರಿಸಿದರೆ, ಇಂದು ನವವಿವಾಹಿತೆ ಮೊದಲಬಾರಿ ಗರ್ಭಿಣಿಯಾದಾಗ ಮಾತ್ರ 'ಬಯಕೆ' ಮಾಡುತ್ತಾರೆ. 'ತಾಯ್ತನ' ಎನ್ನುವುದು ಪ್ರಕೃತಿಯು ನೀಡಿದ ವಿಸ್ಮಯದ ಪ್ರಕ್ರಿಯೆಯೂ ಹೌದು.

ಮದುವೆಯಾಗಿ ಮೊದಲ ಬಾರಿಗೆ ಗರ್ಭವತಿಯಾದ ಏಳನೇ ತಿಂಗಳಿಗೆ ಸೀಮಂತವನ್ನು ಮಾಡಲಾಗುತ್ತದೆ. ನವವಿವಾಹಿತೆಯ ತವರು ಮನೆಯವರು ಮತ್ತು ಗಂಡನ ಮನೆಯ ಹಿರಿಯರೆಲ್ಲರೂ ಸೇರಿ ಒಂದು ಒಳ್ಳೆಯ ದಿನವನ್ನು ಗೊತ್ತುಪಡಿಸುತ್ತಾರೆ. ಅಂದು ಹೆಣ್ಣಿನ ತವರು ಮನೆಯವರು ಸಿಹಿತಿಂಡಿಗಳೊಂದಿಗೆ ಬರುತ್ತಾರೆ. ಸಿಹಿ ತಿಂಡಿಯ ಜೊತೆ ಪ್ರಮುಖವಾಗಿ ಅಡಿಕೆ, ಹಿಂಗಾರ, ಹೊದ್ಲು (ತುಳು:ಪೊರಿ) ಅವಲಕ್ಕಿ ಮತ್ತು ಬಾಳೆಹಣ್ಣು ತೆಂಗಿನಕಾಯಿಗಳು ಇರಬೇಕೆಂಬ ಸಂಪ್ರದಾಯವಿದೆ. ಸೀಮಂತಕ್ಕೆ ಕುಟುಂಬದವರನ್ನು, ನೆರೆಹೊರೆಯವರನ್ನು, ಹತ್ತಿರದ ಸಂಬಂಧಿಕರನ್ನು ಆಹ್ವಾನಿಸಲಾಗುತ್ತದೆ.

ಗಂಡನ ಮನೆಯವರು ತಂದಂಥ ಸೀರೆ, ರವಿಕೆ, ಹಿಂಗಾರ, ಮಲ್ಲಿಗೆ, ಕುಂಕುಮವನ್ನು ಒಂದು ಹರಿವಾಣದಲ್ಲಿಟ್ಟು ಕುಟುಂಬದ ಗುರಿಕಾರನ ಅಥವಾ ಕುಟುಂಬದ ಹಿರಿಯರ ಸಮ್ಮುಖದಲ್ಲಿ ಗಂಡಿನ ಕಡೆಯ ಮುಖ್ಯಸ್ಥರಿಗೆ ಕೊಡಲಾಗುತ್ತದೆ. ಗರ್ಭಿಣಿ ಸೀರೆ, ರವಿಕೆ ತೊಟ್ಟು ಬಳೆ, ಬಂಗಾರ ಇಟ್ಟು ತುರುಬಿಗೆ ವಿವಿಧ ರೀತಿಯ ಹೂಗಳನ್ನು ಮುಡಿಯುತ್ತಾಳೆ. ಮುತ್ತೈದೆಯರೆಲ್ಲಾ ಆಕೆಗೆ ಶೃಂಗಾರದಲ್ಲಿ ಸಹಕರಿಸುತ್ತಾರೆ. ಗರ್ಭಿಣಿ ಅಡಿಕೆ ಹಿಂಗಾರವನ್ನು ತಪ್ಪದೆ ಮುಡಿಯಬೇಕೆಂಬ ನಂಬಿಕೆ ಮರಾಟಿಗರಲ್ಲಿದೆ. ಹಿಂಗಾರದ ಒಳಗಡೆ ಇರುವ ಅಡಿಕೆ ಹೂಗಳು, ಚಿಕ್ಕ ಚಿಕ್ಕ ಕಾಯಿಗಳು ಸಂತಾನದ ಸಂಕೇತವೆಂಬ ನಂಬಿಕೆಯೇ ಹಿಂಗಾರ ಮುಡಿಸುವುದರ ಆಶಯ, ಚಿಕ್ಕ ಕಾಯಿಗಳು (ತುಳು-:ನಲ್ಲಿ) ಇಲ್ಲದ ಹಿಂಗಾರವನ್ನು ಯಾವುದು ಶುಭಕಾರ್ಯಗಳಲ್ಲಿ ಬಳಸುವುದಿಲ್ಲ, ಅದು 'ಬಂಜೆ' ಎಂಬ ಭಾವನೆಯಿದೆ.

ದೇವರ ಕೋಣೆಯಲ್ಲಿ ದೀಪ ಉರಿಸಿ ನೆರೆದ ಹಿರಿಯರೆಲ್ಲರ ಮುಂದೆ ಗರ್ಭಿಣಿ ದೇವರಿಗೆ ಕೈಮುಗಿಯುತ್ತಾಳೆ. ಆಕೆಯನ್ನು ಮಣೆಯ ಮೇಲೆ ಕುಳ್ಳಿರಿಸಲಾಗುತ್ತದೆ. ಎಡ ಬಲಕ್ಕೆ ಗಂಡು ಹೆಣ್ಣುಮಕ್ಕಳನ್ನು ಕುಳ್ಳಿರಿಸಲಾಗುತ್ತದೆ. ತವರು ಮನೆಯವರು ಗಂಡನ ಮನೆಯವರು ತಂದಂಥ ಎಲ್ಲಾ ಸಿಹಿತಿಂಡಿಗಳನ್ನು ಬಾಳೆಲೆಯಲ್ಲಿ ಬಡಿಸಲಾಗುತ್ತದೆ. ಮೊದಲು ಅತ್ತೆ ಬಡಿಸಿದರೆ, ನಂತರ ಐದು ಮಂದಿ ಮುತ್ತೈದೆಯರು ಐದೈದು ಸಾರಿ ಸಿಹಿತಿಂಡಿ-ತಿನಿಸುಗಳನ್ನು ಗರ್ಭಿಣಿಗೆ ಬಡಿಸುತ್ತಾರೆ. ಹಿರಿಯ ಮುಖಂಡರು ಹಿತ್ರೈಷಿಗಳ ಸಮ್ಮುಖದಲ್ಲಿ ದೇವರಲ್ಲಿ ಪ್ರಾರ್ಥನೆ ಮಾಡುತ್ತಾರೆ. ಯಾವುದೇ ತಾಪತ್ರಯವಿಲ್ಲದೆ ಸುಗಮ ಹೆರಿಗೆಯಾಗುವಲ್ಲಿ ಕುಲದೇವರು, ಊರಿನ ದೈವ-ದೇವರುಗಳು, ಗತಿಸಿದ ಗುರುಹಿರಿಯರು ನೋಡಿಕೊಳ್ಳಬೇಕೆಂದು ಪ್ರಾರ್ಥಿಸುತ್ತಾರೆ. ಗಂಡನ ಮನೆಯವರು ಮತ್ತು ತವರು ಮನೆಯವರು ಯಾವುದೇ ರೀತಿಯಲ್ಲಿ ಕಷ್ಟಗಳು ಅನುಭವಿಸದೆ ಹೆರಿಗೆಯಾಗಿ ತಾಯಿ ಮಗು ಸುಖದಿಂದಿರಬೇಕೆಂದು ವಿವಿಧ ರೀತಿಯ ಹರಕೆಗಳನ್ನು ಈ ಸಂದರ್ಭದಲ್ಲಿ ಹೇಳಿಕೊಳ್ಳುತ್ತಾರೆ. ಗರ್ಭವತಿಗೆ ಅತಿಯಾದ ವಿವಿಧ ಬಯಕೆಗಳಿರುತ್ತವೆ. ಹಾಗೆಯೇ ತಲೆಮಾರುಗಳ ಹಿಂದಿನ ಸಮಾಜದಲ್ಲಿ ಅತೀ ಹೆಚ್ಚು ಮಹಿಳೆಯರು ಪ್ರಸವ ಸಮಯದಲ್ಲಿ ಅಕಾಲ ಮರಣವನ್ನಪ್ಪುತ್ತಿರುವುದರ ಕಾರಣಗಳಿಂದಾಗಿ ಸೀಮಂತ ಆಚರಣೆ ರೂಢಿಯಲ್ಲಿದೆ. ಆಮಂತ್ರಿತರಿಗೆ ಊಟೋಪಚಾರದ ವ್ಯವಸ್ಥೆ ಇರುತ್ತದೆ.

ತವರಿಗೆ ಕಳುಹಿಸುವ ಸಂದರ್ಭದಲ್ಲಿ 'ಗರ್ಭವತಿಗೆ ಮಡಿಲು ತುಂಬಿಸುವ' ಪದ್ಧತಿ ಮರಾಟಿಗರಲ್ಲಿದೆ. ಗರ್ಭಿಣಿಯನ್ನು ಪೂರ್ವಾಭಿಮುಖವಾಗಿ ಕುಳ್ಳಿರಿಸಿ ಸೊಂಟಕ್ಕೆ ಬಿಳಿ ಬಟ್ಟೆಯನ್ನು ಕಟ್ಟಿ, ಅತ್ತೆ ಮತ್ತು ಮುತ್ತೈದೆಯರು ಅಕ್ಕಿ, ಕರಿಮೆಣಸು, ಓಲೆ ಬೆಲ್ಲ (ತಾಳೆ ಬೆಲ್ಲ) ಕರಿ ಜೀರಿಗೆ ಮತ್ತು ಅರಸಿನದ ತುಂಡನ್ನು ಉಡಿಯಲ್ಲಿ ತುಂಬಿಸುತ್ತಾರೆ. ಇವೆಲ್ಲಾ ಹೆರಿಗೆಯ ಸಂದರ್ಭ ಮತ್ತು ಬಾಣಂತನಕ್ಕೆ ಅವಶ್ಯವಾಗಿ ಬೇಕಾದ ಔಷಧಿಗಳಾಗಿವೆ. ಮತ್ತೊಮ್ಮೆ ಗುರುಹಿರಿಯರ ಸಮ್ಮುಖದಲ್ಲಿ ಮುಖಂಡರೊಬ್ಬರು ''ಆರೋಗ್ಯವಾಗಿ ಹೋಗಿ ಸುಖ ಪ್ರಸವವಾಗಿ ತೊಟ್ಟಿಲ ಮಗುವಿನ ಜೊತೆ ಬಾ. ಆಗ ಹೇಳಿದ ಹರಕೆಗಳನ್ನು ತೀರಿಸುತ್ತೇವೆ''. ಎಂದು ಪ್ರಾರ್ಥಿಸುತ್ತಾರೆ. ಗರ್ಭವತಿ ಹಿರಿಯರ ಮತ್ತು ಗಂಡನ ಪಾದ ಮುಟ್ಟಿ ನಮಸ್ಕರಿಸುತ್ತಾಳೆ. ತವರು ಮನೆಯವರು ಕರೆದುಕೊಂಡು ಹೋಗುತ್ತಾರೆ. ಅಂದರೆ ಏಳನೇ ತಿಂಗಳಲ್ಲಿ ಸೀಮಂತ ನಡೆದು ಹೆರಿಗೆಯಾಗುವವರೆಗೆ ಸರಿಸುಮಾರು ನಾಲ್ಕೈದು ತಿಂಗಳು ತವರುಮನೆಯಲ್ಲಿಯೇ

ಇರುತ್ತಾಳೆ. ಜಿಲ್ಲೆಯಲ್ಲಿ ಇತರ ಸಮುದಾಯಗಳಲ್ಲಿರುವಂತೆಯೇ ಮರಾಟಿಗರಲ್ಲಿಯೂ ಚೊಚ್ಚಲ ಹೆರಿಗೆ ತವರಿನಲ್ಲಿ ನಡೆಯುತ್ತದೆ. ಇಂದು ಆಸ್ಪತ್ರೆಗಳ ಸೌಲಭ್ಯಗಳನ್ನು ಪಡೆಯುತ್ತಾರೆ. ತವರುಮನೆಯಲ್ಲಿ ಹೆರಿಗೆಯಾಗುವುದು ತಾಯಿಯ ಜೊತೆಯಲ್ಲಿರುವಾಗ ಮಗಳಿಗೆ ಮಾನಸಿಕವಾದ ತೃಪ್ತಿಯುಂಟಾಗುತ್ತದೆ. ಇದರಿಂದ ನಿರಾಯಾಸವಾಗಿ ಹೆರಿಗೆಯಾಗುತ್ತದೆ. ಒಂದು ವೇಳೆ ಹೆಚ್ಚು ಕಡಿಮೆಯಾದರೆ ತಾಯ್ತನವನ್ನೆಲ್ಲಾ ಅನುಭವಿಸಿದ ತಾಯಿಯ ಆರೈಕೆ ಮಗಳಿಗೆ ಸುಲಭವಾಗಿ ದೊರಕುತ್ತದೆ.

**ಗರ್ಭಿಣಿಗೆ ಸಂಬಂಧಿಸಿದಂತೆ ಕೆಲವು ನಂಬಿಕೆ ನಿಷೇಧಗಳಿವೆ.**

೧. ಪತ್ನಿ ತುಂಬು ಗರ್ಭಿಣಿಯಾಗಿದ್ದ ಸಂದರ್ಭದಲ್ಲಿ ಪತಿಯಾದವನು ಗಡ್ಡ ತೆಗೆಯಬಾರದು ಎಂಬ ನಂಬಿಕೆ ಮರಾಟಿಗರಲ್ಲಿದೆ.

೨. ಪತ್ನಿಗೆ ಏಳು ತಿಂಗಳು ತುಂಬಿದ ಸಮಯದಲ್ಲಿ ಗಂಡನು ಶಬರಿಮಲೆ ಅಯ್ಯಪ್ಪನ ವ್ರತ ಕೈಗೊಳ್ಳುವುದಕ್ಕೆ ನಿಷೇಧವಿದೆ.

೩. ಏಳು ಮತ್ತು ಒಂಭತ್ತನೇ ತಿಂಗಳಲ್ಲಿ ಹೆರಿಗೆಯಾದರೆ ಮಗು ಸುರಕ್ಷಿತವಾಗಿರುತ್ತದೆ. ಆದರೆ ಎಂಟನೆಯ ತಿಂಗಳಲ್ಲಿ ಹೆರಿಗೆಯಾದರೆ ಮಗು ಸಾಯುವುದು.

೪. ಹೆರಿಗೆ ಸಮೀಪಿಸುವ ಸಂದರ್ಭದಲ್ಲಿ ಗರ್ಭಿಣಿಯನ್ನು ಯಾವ ಕಾರಣಕ್ಕೂ ಒಂಟಿಯಾಗಿ ಬಿಡಬಾರದು. ಮತ್ತು ಆಕೆ ಕೇಳಿದುದನ್ನೆಲ್ಲಾ ಪೂರೈಸಬೇಕು.

ಮೇಲಿನ ನಂಬಿಕೆ ನಿಷೇಧಗಳ ಹಿಂದಿನ ಉದ್ದೇಶಗಳೂ ಸ್ಪಷ್ಟವಾಗಿಯೇ ಇವೆ. ಹಿಂದಿನ ಕಾಲದಲ್ಲಿ ಶಬರಿಮಲೆಗೆ ವ್ರತ ಹಿಡಿದು ಹೋಗಲು ಕಾಲುದಾರಿಯೇ ಇತ್ತು, ಕಾಡಿನ ಮಧ್ಯೆ ಹೋಗುವುದು ಸಾಹಸದ ಕೆಲಸ. ಅನೇಕರು ಕಾಡು ಪ್ರಾಣಿಗಳಿಗೆ ಬಲಿಯಾದ ಉದಾಹರಣೆಗಳಿವೆ. ಈ ನಿಟ್ಟಿನಲ್ಲಿ ಗಂಡನು ಹೋಗಿ ಪ್ರಾಣಾಪಾಯಕ್ಕೆ ತುತ್ತಾಗಬಾರದು ತನ್ನ ವಂಶದ ಕುಡಿ ಜನ್ಮತಾಳುವ ಸಂದರ್ಭ, ಆ ಸಮಯದಲ್ಲಿ ಗಂಡನು ಜೊತೆಗಿದ್ದರೆ ಪತ್ನಿಯಾದವಳಿಗೆ ನೆಮ್ಮದಿ, ಧೈರ್ಯ ಬರುತ್ತದೆ.

ಕೆಲವು ಗರ್ಭಿಣಿಯರಿಗೆ ಏಳನೇ ತಿಂಗಳಿಗೆ ಹೆರಿಗೆಯಾದರೆ ಮತ್ತು ಬಹುತೇಕ ಗರ್ಭಿಣಿಯರಿಗೆ ಒಂಭತ್ತನೇ ತಿಂಗಳಲ್ಲಿ ಹೆರಿಗೆಯಾಗುತ್ತದೆ. ಅದು ಸಾಮಾನ್ಯ. ಆದರೆ ಅಪರೂಪಕ್ಕೆ ಎಂಟನೇ ತಿಂಗಳಲ್ಲಿ ಹೆರಿಗೆಯಾಗುವುದೂ ಇದೆ. ಆದ್ದರಿಂದ ಯಾವಾಗ ಹೆರಿಗೆಯಾಗುತ್ತದೆ ಎಂದು ತಿಳಿದುಕೊಳ್ಳುವ ವೈದ್ಯಕೀಯ ಸೌಲಭ್ಯಗಳಿಲ್ಲದ ಕಾರಣ ತುಂಬು ಗರ್ಭಿಣಿಯನ್ನು ಒಂಟಿಯಾಗಿ ಬಿಡಬಾರದು ಎಂಬುದು ಸ್ಪಷ್ಟವಾಗಿದೆ. ಕರಾವಳಿ ಪ್ರದೇಶದಲ್ಲಿ ಒಂದು ಮಾತಿದೆ ''ಮಳೆ ಬರುವುದನ್ನು ಗರ್ಭಿಣಿ ಹೆರುವ ಸಮಯವನ್ನು ಹೇಳಲಿಕ್ಕಾಗದು' ಎಂದು ಆದರೆ ಇಂದು ವಿವಿಧ ರೀತಿಯ ವೈದ್ಯಕೀಯ ಸೌಲಭ್ಯಗಳಿವೆ.ಎಂಟನೇ ತಿಂಗಳಲ್ಲಿ ಜನಿಸಿದ ಮಗು ಸಾಯುತ್ತದೆ ಎಂಬುದನ್ನು ವೈಜ್ಞಾನಿಕವಾಗಿ ವೈದ್ಯಕ್ಷೇತ್ರದಲ್ಲಿ ಯಾವುದೇ ಕಾರಣಗಳಿಲ್ಲ.

## ಮರಣ

'ಜಾತಸ್ಯ ಮರಣಂ ಧ್ರುವಂ' ಎಂಬಂತೆ ಸೃಷ್ಟಿಯ ಪ್ರತಿಯೊಂದು ಜೀವ ಜಾಲಕ್ಕೂ ಸಾವು ಅನಿವಾರ್ಯ. ಒಂದಲ್ಲ ಒಂದು ದಿನ ಸಾಯಲೇಬೇಕು, ಅದು ಪ್ರಕೃತಿ ನಿಯಮವೂ ಹೌದು. ಇದರಿಂದ ಯಾರೂ ತಪ್ಪಿಸಿಕೊಳ್ಳಲಾರರು. ಮರಣ ಕಟುಸತ್ಯವಾದರೂ 'ಸಾವು' ಎಂದಾಕ್ಷಣ ಬದುಕಿರುವ ಎಲ್ಲರಿಗೂ ಒಂದು ರೀತಿಯ ಭಯವನ್ನು ಉಂಟುಮಾಡುತ್ತದೆ. ಎಲ್ಲಾ ಬುಡಕಟ್ಟು ಸಮುದಾಯಗಳಲ್ಲಿಯೂ ಜೀವಂತವಿದ್ದಾಗ ಮಾಡುವ ಕ್ರಿಯಾಚರಣೆಗಳನ್ನು ಆತ/ಆಕೆ ಸತ್ತಾಗಲೂ ಅಷ್ಟೇ ಗೌರವಗಳಿಂದಲೇ ಮಾಡುವುದನ್ನು ಕಾಣಬಹುದು. ಸತ್ತವರ ದೇಹಕ್ಕೆ ಸಲ್ಲಿಸುವ ಅಂತಿಮ ಗೌರವವೇ ಶವಸಂಸ್ಕಾರ ಸದ್ಗತಿ ಕಾರ್ಯಗಳು. ಈ ನಂಬಿಕೆಗಳಿರುವುದರಿಂದಲೇ ಪ್ರತಿಯೊಂದು ಸಮಾಜದಲ್ಲಿ ಸತ್ತವರಿಗೆ ಆಯಾ ಸಮಾಜ ಸಮುದಾಯಕ್ಕನುಗುಣವಾದ ಸಂಪ್ರದಾಯಗಳೊಂದಿಗೆ ಉತ್ತರ ಕ್ರಿಯೆಗಳನ್ನು ನಡೆಸಲಾಗುತ್ತದೆ.

ಮರಾಟಿಗರ ಕುಟುಂಬದಲ್ಲಿ ಸಾವು ಸಂಭವಿಸಿದಾಗ ಹತ್ತಿರದ ಸಂಬಂಧಿಕರಿಗೆ ವಿಷಯ ತಿಳಿಸಲಾಗುತ್ತದೆ. ಅಂತೆಯೇ ಊರಿನ ನೆರೆಹೊರೆಯವರೆಲ್ಲರೂ ದುಃಖತಪ್ತ ಕುಟುಂಬದಲ್ಲಿ ಭಾಗಿಗಳಾಗುತ್ತಾರೆ. ಮರಾಟಿಗರಲ್ಲಿ ಸುಮಾರು ಹನ್ನೆರಡು ವರ್ಷಕ್ಕಿಂತ ಕಡಿಮೆ ವಯಸ್ಸಿನ ಹುಡುಗ ಅಥವಾ ಹುಡುಗಿ ಸತ್ತರೆ ಹೆಣವನ್ನು ಹೂಳಲಾಗುತ್ತದೆ. ಇತರೆ ಗಂಡು-ಹೆಣ್ಣು ವೃದ್ಧರನ್ನೆಲ್ಲಾ ವಿಧಿವತ್ತಾಗಿ ದಹನಮಾಡಲಾಗುತ್ತದೆ. ಒಟ್ಟು ಸಾವಿಗೆ ಸಂಬಂಧಿಸಿದ ಸಂಸ್ಕಾರಗಳೆಲ್ಲವನ್ನು 'ಸಾವು' ಎಂದು ಕರೆಯಲಾಗುತ್ತದೆ. ಸಾವನ್ನು ಸಮೀಪಿಸಿದ ವ್ಯಕ್ತಿಯನ್ನು ಮನೆಯ ಒಳಗಡೆಯೇ ಮಲಗಿಸಲಾಗುತ್ತದೆ. ಯಾವುದೇ ರೀತಿಯಲ್ಲಿ ಸ್ಥಳ ಬದಲಾವಣೆಯನ್ನು ಮಾಡುವುದಿಲ್ಲ. ಉಸಿರಾಟ ಕಷ್ಟವಾದಂತೆಲ್ಲಾ ಮನೆಯವರೆಲ್ಲಾ ಕೈಯಿಂದಲೇ ನೀರು ಕೊಡುತ್ತಾರೆ. ತಕ್ಷಣ ಕುಟುಂಬದ ಇತರ ಸದಸ್ಯರೆಲ್ಲರಿಗೂ ಸುದ್ದಿ ಮುಟ್ಟಿಸಲಾಗುತ್ತದೆ. ಅವರೆಲ್ಲರೂ ಬಂದು ಮೃತರ ಬಾಯಿಗೆ ನೀರು ಕೊಡುತ್ತಾರೆ. ಜೀವ ಹೋದ ತಕ್ಷಣ ಮನೆಯ ವಾತಾವರಣವೇ ಬದಲಾಗುವುದು. ಕುಟುಂಬದ ಸದಸ್ಯರೆಲ್ಲರ ಅಳು, ದುಃಖ ಒಂದು ರೀತಿಯಲ್ಲಿ ಭಯದ ವಾತಾವರಣವನ್ನೇ ಸೃಷ್ಟಿಸುತ್ತದೆ. ಶವವನ್ನು ಚಾಪೆಯ ಮೇಲೆ ಉತ್ತರ ದಕ್ಷಿಣವಾಗಿ ಮಲಗಿಸಿ ತಲೆ ಮತ್ತು ಕಾಲಿನ ಹತ್ತಿರ ಹಸಿ ತೆಂಗಿನ ಕಾಯಿಯಲ್ಲಿ ದೀಪ ಉರಿಸಲಾಗುತ್ತದೆ. ಶವದ ತಲೆಯಿರಿಸಿದ ಮೇಲ್ಗಡೆ ಮನೆಯ ಛಾವಣಿಯಲ್ಲಿ ಒಂದು ಹೆಂಚನ್ನು ತೆಗೆದಿಡುತ್ತಾರೆ. ಆ ತೂತಿನ ಮೂಲಕ ಆತ್ಮ ಹೊರಹೋಗುತ್ತದೆ ಎಂಬ ನಂಬಿಕೆ ಮರಾಟಿಗರಲ್ಲಿದೆ. ಶವ ಒಂಟಿಯಾಗಿದ್ದರೆ ದುಷ್ಟ ಶಕ್ತಿಗಳು ಬಂದು ನಿರ್ಜೀವ ದೇಹವನ್ನು ಸೇರಿಕೊಳ್ಳುತ್ತವೆ ಎಂಬ ನಂಬಿಕೆಯಿರುವುದರಿಂದ ಆಪ್ತರು, ಹತ್ತಿರದ ಸಂಬಂಧಿಕರು ಶವದ ಹತ್ತಿರವೇ ಕುಳಿತುಕೊಳ್ಳುತ್ತಾರೆ. ಶವಕ್ಕೆ ಬಿಳಿ ಬಟ್ಟೆಯನ್ನು ಹೊದಿಸಲಾಗುತ್ತದೆ. ಅಗರಬತ್ತಿಯನ್ನು ಶವದ ಹತ್ತಿರವೇ ಉರಿಸಲಾಗುತ್ತದೆ.

## ಅಂತಿಮ ಸ್ನಾನ

ಸಂಬಂಧಿಕರಿಗೆ, ನೆಂಟರಿಷ್ಟರಿಗೆಲ್ಲಾ ಸಾವಿನ ಸುದ್ದಿಯನ್ನು ತಲುಪಿಸಲಾಗುತ್ತದೆ. ಅಕ್ಕ, ತಂಗಿ, ತಮ್ಮ, ಮಗ, ತಂದೆ, ತಾಯಿಯಂತಹ ಹತ್ತಿರದ ಸಂಬಂಧಿಕರನ್ನು ಬೇಗನೆ ಕರೆಸಲು ವಾಹನ ಸೌಲಭ್ಯವನ್ನು ಉಪಯೋಗಿಸುತ್ತಾರೆ.

ಒಂದು ಕಡೆ ಸಂಬಂಧಿಕರು, ನೆರೆಹೊರೆಯವರು, ಊರಿನವರೆಲ್ಲಾ ಸೇರಿ ಹೆಣ ಸುಡಲು ಕಟ್ಟಿಗೆಯ ಸಂಗ್ರಹವನ್ನು ಜರೂರಾಗಿ ಮಾಡುತ್ತಾರೆ. ಶವ ಸುಡಲು ಸರಿಯಾದ ಸಮತಟ್ಟಾದ ಸ್ಥಳವನ್ನು ನಿರ್ಮಿಸುತ್ತಾರೆ. ಈ ಸಂದರ್ಭದಲ್ಲಿ ಯಾವುದೇ ರೀತಿಯಲ್ಲಿ ಜಾತಿ-ನೀತಿ ಬಗ್ಗೆ ವಿಚಾರಿಸದೇ ಎಲ್ಲ ಸಮುದಾಯದವರೂ ಸಹಕರಿಸುವುದು ಕಂಡುಬರುತ್ತದೆ. 'ಜೀವಿತಾವದಿಯಲ್ಲಿ ಕೋಪತಾಪಗಳಿದ್ದರೂ ಸತ್ತ ಸಂದರ್ಭದಲ್ಲಿ ಅವುಗಳನ್ನು ಮರೆತು ಸಹಕಾರ ನೀಡಬೇಕು.'' ಎಂಬ ಮಾತು ಜಿಲ್ಲೆಯ ಎಲ್ಲ ಸಮುದಾಯಗಳಲ್ಲಿಯೂ ಜನಜನಿತವಾಗಿದೆ. ಎಲ್ಲಾ ಸಂಬಂಧಿಕರು ಬಂದ ನಂತರ ಶವಸ್ನಾನದ ತಯಾರಿಮಾಡುತ್ತಾರೆ. ಶವವನ್ನು ಮನೆಯೊಳಗಿಂದ ಹೊರಗೆ ಅಂಗಳದಲ್ಲಿ ತಂದು ಬಿಸಿ ನೀರಿನಿಂದ ಸ್ನಾನ ಮಾಡಿಸುತ್ತಾರೆ. ಶವವನ್ನು ಬೆಂಚು ಅಥವಾ ಹಲಗೆಯ ಮೇಲೆ ಮಲಗಿಸುತ್ತಾರೆ. ಮೃತರ ಹತ್ತಿರದ ಸಂಬಂಧಿಕರು ಶವಕ್ಕೆ ಅರಶಿನ ಎಣ್ಣೆಯನ್ನು ಮೂರು ಬಾರಿ ಹಚ್ಚುತ್ತಾರೆ. ತೂತು ಮಾಡಿರುವ ತೆಂಗಿನ ಗೆರಟೆಯಿಂದ ಸ್ನಾನ ಮಾಡಿಸಿ ನಮಸ್ಕರಿಸುವುದು ಸಂಪ್ರದಾಯ. ಮೃತರಿಗೆ ಕೊನೆಯ ಸ್ನಾನವಾದುದರಿಂದ ಗೌರವಯುತವಾಗಿ ಕಾಲು ಮುಟ್ಟಿ ನಮಸ್ಕರಿಸುವುದು ಕಂಡುಬರುತ್ತದೆ. ಹೆಣವನ್ನು ಚಟ್ಟದ ಮೇಲೆ ಮಲಗಿಸುತ್ತಾರೆ. ಬಿದರಿನ ಬೊಂಬಿನಿಂದ ತೆಂಗಿನ ಗರಿಯನ್ನು ಉಪಯೋಗಿಸಿ ಚಟ್ಟ ತಯಾರಿಸುತ್ತಾರೆ. ತೆಂಗಿನ ಹಸಿ ಗರಿಯನ್ನು ಸ್ವಲ್ಪವಾದರೂ ಹೆಣೆದು ಹಾಕಬೇಕೆಂಬುದು ಮರಾಟಿಗರ ಸಂಪ್ರದಾಯ. ಚಟ್ಟದ ಮೇಲೆ ಮಲಗಿಸಿ ಶವಕ್ಕೆ ಸಂಬಂಧಿಕರು ಊರಿನವರು, ಹಿತೈಷಿಗಳು ತಂದಂಥ ಬಿಳಿ ಬಟ್ಟೆ, ಹೂವಿನ ಹಾರ, ಗಂಧದ ಹಾರಗಳನ್ನೆಲ್ಲಾ ಒಂದರ ಮೇಲೆ ಒಂದರಂತೆ ಹೊದಿಸುತ್ತಾರೆ. ಮೃತರು ಮನೆಯ ಯಜಮಾನನಾಗಿದ್ದುದಾದರೆ ಹೆಂಡತಿಯ ಮಾಂಗಲ್ಯದ ಚಿನ್ನದ ಚಿಕ್ಕ ತುಂಡನ್ನು ತೆಗೆದು ಹೆಣದ ನಾಲಗೆಯ ಅಡಿಯಲ್ಲಿಡುತ್ತಾರೆ. ಶವದ ತಲೆಯ ಬದಿಯಲ್ಲಿ ಒಂದು ಬಟ್ಟೆಯಲ್ಲಿ ಎರಡು ಪಾವು ಅಕ್ಕಿ ಮತ್ತು ನಾಲ್ಕಾಣೆ ಹಣವನ್ನು ಕಟ್ಟಿ ಇಡುವ ಪದ್ಧತಿ ಮರಾಟಿಗರಲ್ಲಿದೆ. ಇದಕ್ಕೆ ಮೊದಲು ಶವಕ್ಕೆ ಸಿಂಗರಿಸುತ್ತಾರೆ. ಗಂಡಸಾಗಿದ್ದರೆ ತಲೆಗೆ ಮುಂಡಾಸು, ದೋತಿಯನ್ನು ಉಡಿಸುತ್ತಾರೆ. ಹೆಂಗಸಾದರೆ ಸೀರೆ ರವಿಕೆಯನ್ನು ತೊಡಿಸಿ ತಲೆಗೆ ಹೂಮುಡಿಸುವುದೂ ಕಂಡು ಬರುತ್ತದೆ. ಸಂಬಂಧಿಕರೆಲ್ಲರೂ ಹೆಣದ ಬಾಯಿಗೆ ಅಂತಿಮವಾಗಿ ಸ್ವಲ್ಪ ಅನ್ನವನ್ನು ಇಡುತ್ತಾರೆ. ಹಳದಿ ಪುಡಿ ಸೇರಿಸಿ ಬೇಯಿಸಿದ ಅನ್ನ ತಯಾರಿಸುತ್ತಾರೆ. ಸಾಂಕೇತಿಕವಾಗಿ ಹತ್ತಿರದ ಸಂಬಂಧಿಕರು ಶವಕ್ಕೆ ಅನ್ನ ನೀಡುವ ಮೂಲಕ ಬೀಳ್ಕೊಡುತ್ತಾರೆ.

ಕುಟುಂಬದಲ್ಲಿ ಸಾವು ಸಂಭವಿಸಿದಾಗ ಮನೆಯ ಹಿರಿಮಗ ಅಥವಾ ಕಿರಿಮಗನು ಅಂತ್ಯಕ್ರಿಯೆಯ ಹಕ್ಕು ಹೊಂದಿರುತ್ತಾನೆ. ಆತನನ್ನು 'ಕ್ರಿಯೆ ಹಿಡಿಯುವವನು' (ಕಿರಿಯೊ ಪತ್ತುನಾಯೆ) ಎಂದು ಕರೆಯುತ್ತಾರೆ. ತೆಂಗಿನ ಕಾಯಿಯೊಂದನ್ನು ಮನೆಯ ಮೆಟ್ಟಿಲಿಗೆ ಹೊಡೆದು ಪುಡಿ ಮಾಡುತ್ತಾರೆ. ಹಾಗೆಯೇ ತೆಂಗಿನ ಗೆರಟೆಯಲ್ಲಿ ದೀಪ ಉರಿಸಿ ಚಟ್ಟದ ಮೇಲೆ ಬೀಳದಂತೆ ಇಡುತ್ತಾರೆ. ಶವದ ತಲೆ ಬದಿಯಿಂದ ಗಂಡುಮಕ್ಕಳು ಮತ್ತು ಇತರರು ಕಾಲಿನ ಬದಿಯಿಂದ ಚಟ್ಟವನ್ನು ಹೆಗಲ ಮೇಲೆ ಇಟ್ಟುಕೊಳ್ಳುತ್ತಾರೆ. ಓರ್ವ 'ಸೂಕರ' (ಸೂತಕದ ಮಡಕೆ) ಯನ್ನು ಹಿಡಿದುಕೊಳ್ಳುತ್ತಾನೆ.

**ಕಾಟಕ್ಕೆ ಬೆಂಕಿ ಕೊಡುವುದು**

ಚಿತೆಯನ್ನು ಉತ್ತರ ದಕ್ಷಿಣಾಭಿಮುಖವಾಗಿ ಮಾಡಿ ಶವವನ್ನು ಅದರ ಮೇಲಿಡುತ್ತಾರೆ. ಮೃತರ ಮಕ್ಕಳೆಲ್ಲರೂ ಹೆಣದ ಮೇಲೆ ಕಟ್ಟಿಗೆಯನ್ನು ಇಡುತ್ತಾರೆ. ಇತರರು ಅವರಿಗೆ ಸಹಕರಿಸುತ್ತಾರೆ. ಹಿರಿಮಗನು (ಕ್ರಿಯೆ ಹಿಡಿದವನು) ಚಿತೆಗೆ ಮೂರು ಸಾರಿ ಪ್ರದಕ್ಷಿಣೆ ಬಂದು ತಲೆಯ ಭಾಗಕ್ಕೆ ಬೆಂಕಿಯನ್ನು ಕೊಡುತ್ತಾನೆ. ಉಳಿದ ಮಕ್ಕಳು ಸಂಬಂಧಿಕರು ಚಿತೆಗೆ ಅಗ್ನಿ ಸ್ಪರ್ಶ ಮಾಡುತ್ತಾರೆ. ಹೆಣ ಪೂರ್ತಿ ಸುಡುವವರೆಗೆ ಎಲ್ಲರೂ ಅಲ್ಲಿಯೇ ಇರುತ್ತಾರೆ. ಶವದೊಂದಿಗೆ (ಸೂಕರ) ಮಡಕೆಯಲ್ಲಿ ತಂದಿದ್ದ ನೀರನ್ನು ಕ್ರಿಯೆ ಹಿಡಿಯುವವನು ಹೆಗಲ ಮೇಲಿಟ್ಟು ಚಿತೆಯ ಸುತ್ತ ಅಪ್ರದಕ್ಷಿಣೆಯಾಗಿ ಮೂರು ಸುತ್ತು ಬರುತ್ತಾನೆ. ಸುತ್ತಿಗೊಂದರಂತೆ ಕತ್ತಿ (ಕುಡುಗೋಲು) ಯಿಂದ ಹಿರಿಯರೊಬ್ಬರು ಮೂರು ತೂತು ಮಾಡುತ್ತಾರೆ. ನಂತರ ಚಿತೆಗೆ ಬೆನ್ನು ಹಾಕಿ ಮಡಕೆಯನ್ನು ಹಿಂದಕ್ಕೆ ಬಿಡುತ್ತಾನೆ. ಹಿರಿಯರ ಮಾತಿನಂತೆ ಮೃತರ ಆತ್ಮಕ್ಕೆ ಚಿರಶಾಂತಿ ಸಿಗಲಿ ಎಂದು ಪ್ರಾರ್ಥಿಸುತ್ತಾರೆ. ಕೆಲವು ಕುಟುಂಬಗಳಲ್ಲಿ ಒಂದು ಹಿಡಿ ಭತ್ತವನ್ನು ಚಿತೆಯ ಮುಂದೆ ಮಣ್ಣಿನಲ್ಲಿ ಹುಗಿಯುವ ಸಂಪ್ರದಾಯವೂ ಇದೆ. ಚಿತೆಯ ತಯಾರು ಮಾಡುವಲ್ಲಿ ಉಪಯೋಗಿಸಿದ ಹಾರೆ, ಗುದ್ದಲಿ, ಕತ್ತಿ, ಗರಗಸಗಳನ್ನೆಲ್ಲಾ ಚಿತೆಯ ಒಂದು ಮಗ್ಗುಲಿಂದ ಇನ್ನೊಂದು ಮಗ್ಗುಲಿಗೆ ಬಿಸಾಡುತ್ತಾರೆ. ಇತರರ ಮನೆಯಿಂದ ತೆಗೆದುಕೊಂಡು ಹೋಗಿದ್ದರೆ ಸೂತಕದ ನಂತರವೇ ವಾಪಾಸ್ಸು ಪಡೆಯುತ್ತಾರೆ. ಅಷ್ಟರವರೆಗೆ ಸೂತಕದ, ಮೃತರ ಮನೆಯಲ್ಲಿಯೇ ಇರುತ್ತದೆ.

ಜಿಲ್ಲೆಯ ಬಹುತೇಕ ಮರಾಟಿ ಕುಟುಂಬದವರು ಸತ್ತಾಗ ದಹನ ಮಾಡಿದರೆ 'ಕುಸುಮ' ಬಳಿಯ ಮರಾಟಿ ಕುಟುಂಬದಲ್ಲಿ ಮಾತ್ರ ದಫನ ಮಾಡಲಾಗುತ್ತದೆ. ಸಂಪ್ರದಾಯದಂತೆ ಕುಸುಮ ಬಳಿಯ ಮೃತರನ್ನು ಕೈಕಾಲು ಮುರಿದು ದಫನ ಮಾಡಲಾಗುತ್ತದೆ ಎಂದು ವಕ್ತೃಗಳು ಮಾಹಿತಿ ನೀಡುತ್ತಾರೆ. 'ಕುಸುಮ' ಅಂದರೆ 'ಹೂವಿನ ಮಕರಂದ' ಬಹಳ ಸೂಕ್ಷ್ಮವಾಗಿ, ನುನುಪಾಗಿರುವಂಥದ್ದು, ಹಾಗಾಗಿ ಅಂತಹುದನ್ನು ಬೆಂಕಿಗೆ ಹಾಕಬಾರದೆಂಬ ಜನಪದರ ನಂಬಿಕೆಯಿಂದ ಈ ರೀತಿಯ ಪದ್ಧತಿ ಬೆಳೆದುಬಂದಿದೆ ಎಂದು ಹೇಳಬಹುದು. ವಕ್ತೃಗಳ ಮಾಹಿತಿಯಂತೆ ಈಗ ಕೆಲವೊಂದು ಕುಸುಮ ಬಳಿಯ ಕುಟುಂಬದಲ್ಲಿ ಸಾವು ಸಂಭವಿಸಿದಾಗ ದಹನ ಮಾಡಿದ ಉದಾಹರಣೆಗಳನ್ನು ನೀಡುತ್ತಾರೆ. ಹಿರಿಯರ ನಂಬಿಕೆಯಂತೆ 'ದಹನ ಮಾಡಿದರೆ ಇಡೀ ಕುಟುಂಬ ನಾಶವಾಗುತ್ತದೆ' ಎನ್ನುವುದು ಸುಳ್ಳಾಗಿದೆ.

ಶವ ಸಂಸ್ಕಾರದಲ್ಲಿ ಪಾಲ್ಗೊಂಡವರೆಲ್ಲಾ ಸ್ನಾನಮಾಡಿ ಮನೆಯೊಳಗೆ ಪ್ರವೇಶಿಸುತ್ತಾರೆ. ಕುಟುಂಬಿಕರು, ಸಂಬಂಧಿಕರು ಮನೆಯಲ್ಲಿ ಉಳಿದುಕೊಂಡರೆ ಇತರರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋಗುತ್ತಾರೆ.

ಮನೆಯ ಹೊಸ್ತಿಲನ್ನು ಸೆಗಣಿಯಿಂದ ಸಾರಿಸಿ, ಸೆಗಣಿ ನೀರಿಗೆ 'ನೆಕ್ಕಿ' ಗಿಡದ ಕೊಂಬೆಯನ್ನು ಇಟ್ಟಿರುತ್ತಾರೆ. ಕೊಂಬೆಯಿಂದ ಸೆಗಣಿ ನೀರನ್ನು ಪ್ರೋಕ್ಷಿಸಿಕೊಂಡು ಶುದ್ಧರಾಗಿ ಮನೆಯೊಳಗೆ ಪ್ರವೇಶ ಮಾಡುತ್ತಾರೆ. ಮೃತರ ಜೀವ ಹೋದ ಸ್ಥಳದಲ್ಲಿ ಒಂದು ಮಣೆಯಲ್ಲಿ ಒಂದು ಬಿಂದಿಗೆ ನೀರು, ಅದಕ್ಕೆ ಮಸಿ ಹಾಕಿಡುತ್ತಾರೆ. ನೆಲಕ್ಕೆ ಬೂದಿಯನ್ನು ಚೆಲ್ಲುತ್ತಾರೆ. ಮೃತರ ಆತ್ಮ ಬಂದು ನೀರು ಕುಡಿದಿದೆ, ಬೂದಿಯಲ್ಲಿ ಹೆಜ್ಜೆ ಕಾಣುತ್ತದೆ ಎಂಬ ಎಂದು ಹೇಳುತ್ತಾರೆ. ನೀರಿನಲ್ಲಿನ ಮಸಿ ನೀರನ್ನು ಆವರಿಸಿಕೊಂಡಾಗ ಬಿಂದಿಗೆಯ ನೀರಿನ ಪ್ರಮಾಣ

ಕಡಿಮೆಯಾಗುವುದು ಮತ್ತು ಕ್ರಿಮಿ ಕೀಟಗಳ ಚಲನೆಯಿಂದ ಚೆಲ್ಲಿದ ಬೂದಿ ಮೇಲೆ ಹೆಜ್ಜೆ ಗುರುತುಗಳು ಮೂಡಿರುವುದು ಇದರ ಹಿಂದೆ ಇರುವ ವೈಜ್ಞಾನಿಕ ಕಾರಣಗಳು. ನಂಬಿಕೆಗಳು ಮಾನಸಿಕವಾಗಿ ಮೃತರು ತಮ್ಮ ಜತೆಗೆ ಇದ್ದಾರೆ. ತಮಗೆ ಯಾವುದೇ ರೀತಿಯ ತೊಂದರೆ ಕೊಡುವುದಿಲ್ಲ ಎಂಬುದನ್ನು ಗಟ್ಟಿಗೊಳಿಸುತ್ತವೆ. ಹಾಗಾಗಿ ಭಯ ಮಿಶ್ರಿತ ವಾತಾವರಣ ಇದ್ದಾಗಲೂ ಮನೆಮಂದಿಯೆಲ್ಲಾ ಒಂದು ರೀತಿಯ ಸಾಂತ್ವನದಲ್ಲಿರುವುದು ಕಂಡು ಬರುತ್ತದೆ.

ಶವ ಸಂಸ್ಕಾರದ ಮರುದಿನ ಕುಟುಂಬಿಕರೆಲ್ಲರೂ ಬೆಳಿಗ್ಗೆ ಮತ್ತೆ ಹೆಣ ಸುಟ್ಟ ಸ್ಥಳಕ್ಕೆ ಬರುತ್ತಾರೆ. ಕಟ್ಟಿಗೆಗಳ ಜತೆ ಹೊತ್ತಿ ಉರಿಯದೆ ಇರುವ ಭಾಗಗಳನ್ನೆಲ್ಲಾ ಮತ್ತೆ ಒಟ್ಟು ಸೇರಿಸುತ್ತಾರೆ. ಅದರಿಂದ ಸುಡದೇ ಇರುವ ಶವದ ಭಾಗಗಳಾಗಲಿ, ಕಟ್ಟಿಗೆಗಳಾಗಲೀ ಮತ್ತೆ ಸುಟ್ಟು ಭಸ್ಮವಾಗುತ್ತದೆ. ಇದನ್ನು ತುಳು ಭಾಷೆಯಲ್ಲಿ "ಕೊಳ್ಳಿ ಕೂಟುನೆ" (ಕೊಳ್ಳಿ ಸೇರಿಸುವುದು) ಎಂದು ಕರೆಯುತ್ತಾರೆ.

**ಬೂದಿ ಮುಚ್ಚುವುದು**

ಮೂರನೇ ದಿನ ಕುಟುಂಬಸ್ಥರು, ನೆಂಟರೆಲ್ಲರೂ ಮೃತರ ಮನೆಗೆ ಬಂದು ಸೇರುತ್ತಾರೆ. ಶವ ಸುಟ್ಟ ಸ್ಥಳಕ್ಕೆ ಬಂದು "ಪಿಂಡ ಬಿಡುವ" ಸಲುವಾಗಿ ಶವ ಸುಟ್ಟ ಸ್ಥಳದಲ್ಲಿ ತಲೆಭಾಗ, ಮಧ್ಯಭಾಗ ಮತ್ತು ಕಾಲಿನ ಭಾಗಗಳಲ್ಲಿರುವ ಎಲುಬು ತುಂಡುಗಳನ್ನು ಸಂಗ್ರಹಿಸಿ ಪ್ರತ್ಯೇಕವಾಗಿ ಕಟ್ಟಿ ಒಂದು ಮರದಲ್ಲಿ ತೂಗುಹಾಕುತ್ತಾರೆ. ಪಿಂಡ ಬಿಡುವ ಸಮಯದಲ್ಲಿ ಅದನ್ನು ಹರಿಯುವ ನದಿಗೆ ಅಥವಾ ದೊಡ್ಡ ಕೆರೆಗೆ ಹಾಕುವುದು ಸಂಪ್ರದಾಯ. ಉಳಿದ ಭಸ್ಮ ಮಣ್ಣನ್ನೆಲ್ಲಾ ಒಟ್ಟು ಸೇರಿಸಿ ಪಕ್ಕದ ಮಣ್ಣನ್ನು ಸೇರಿಗೆ ತ್ರಿಕೋನಾಕಾರದ ಗೋರಿ ರೀತಿಯಲ್ಲಿ ಮಾಡುತ್ತಾರೆ. ಮೃತರ ಮಕ್ಕಳು ಸೇರಿ ಮಾಡಬೇಕೆಂಬ ಪದ್ಧತಿಯಿದೆ. ತುಳು ಭಾಷೆಯಲ್ಲಿ 'ದೂಪೆ ಮೆತ್ತುನೆ' ಎಂದು ಹೇಳುತ್ತಾರೆ. ದೂಪೆಗೆ ಸರೋಳಿ ಗಿಡದ ಗೆಲ್ಲು (ಕೊಂಬೆ) ಗಳನ್ನು ನೆಡುತ್ತಾರೆ. ಹಾಗೆಯೇ ತುಳಸಿ ಗಿಡವನ್ನು ನೆಡುತ್ತಾರೆ. ದೂಪೆಯ ದಕ್ಷಿಣ ದಿಕ್ಕಿಗೆ ಮೆಟ್ಟಿಲಾಕಾರ ಮಾಡಿ ಒಂದು ಎಳನೀರನ್ನು ತೂತುಮಾಡಿ ಇಡುತ್ತಾರೆ. ದೀಪವನ್ನು ಹಚ್ಚುತ್ತಾರೆ. ಮರಾಟಿಗರಲ್ಲಿ ಸತ್ತ ವ್ಯಕ್ತಿಯ ದಹನ ಸ್ಥಳದಲ್ಲಿ ಯಾವುದೇ ರೀತಿಯ ಸ್ಮಾರಕಗಳನ್ನು ನಿರ್ಮಿಸುವ ಸಂಪ್ರದಾಯವಿಲ್ಲ. ಬೂದಿ ಮುಚ್ಚುವ ಕಾರ್ಯಗಳೆಲ್ಲ ಮುಗಿದು ಪ್ರಾರ್ಥನೆಯನ್ನು ಮಾಡಿ ಮನೆಗೆ ಬಂದು ಸ್ನಾನಮಾಡಿ ಪುಣ್ಯಾರ್ಚನೆಯನ್ನು ಪಡೆಯುತ್ತಾರೆ.

**ಕರ್ಮ ಹಿಡಿಯುವುದು**

ಮರಾಟಿಗರಲ್ಲಿನ ಮೃತರು ವಿವಾಹಿತರಾದರೆ ಅವರ ಮಕ್ಕಳಲ್ಲಿ ಹಿರಿಮಗನು ಕರ್ಮಹಿಡಿಯುತ್ತಾನೆ. ಹಿರಿಮಗ ಶವ ದಹನ ಸಮಯದಲ್ಲಿ 'ಸೂಕರ' (ಸೂತಕದ ಮಡಕೆ) ವನ್ನು ಹಿಡಿಯುವುದರಿಂದ ಶವಕ್ಕೆ ಅಗ್ನಿ ಸ್ಪರ್ಶ ಮಾಡುವ ಕ್ರಿಯೆಗಳೆಲ್ಲಾ ಆತನಿಂದಲೇ ನೆರವೇರಲ್ಪಡುತ್ತದೆ. ತದನಂತರದಲ್ಲಿ ನಿಷೇಧದ ಸಮಯದಲ್ಲಿ ಪ್ರತಿದಿನ ಒಂದು ಹೊತ್ತು ಸ್ನಾನಮಾಡಿ ಊಟ ಮಾಡಬಹುದು. ರಾತ್ರಿ ಹೊತ್ತು ಫಲಾಹಾರ ಮಾಡಬೇಕು. ಆಹಾರದಲ್ಲಿ ತೆಂಗಿನಕಾಯಿ ಮತ್ತು ಎಣ್ಣೆ ಬಳಸಿದ ಆಹಾರ ಸೇವನೆಗೆ ನಿಷೇಧವಿದೆ. ಚಹಾಕ್ಕೆ ಹಾಲು ಬೆರೆಸಿ ಕುಡಿಯುವಂತಿಲ್ಲ. ಯಾವುದೇ

ರೀತಿಯ ಮಾದಕ ಪದಾರ್ಥಗಳ ಸೇವನೆಗೆ ಅವಕಾಶವಿಲ್ಲ. ವಿವಾಹಿತನಾಗಿದ್ದರೆ ಸತಿಯೊಡನೆ ದೈಹಿಕವಾಗಿ ಸೇರುವಂತಿಲ್ಲ. ಹನ್ನೊಂದು ದಿನಗಳೂ ಕೂಡ ಮನೆಯೊಳಗಡೆ ಶವವಿರಿಸಿದ ಸ್ಥಳದಲ್ಲಿ ಸಂಜೆ ಆರರ ನಂತರ ದೀಪವಿರಿಸಿ ಒಂದು ಚೊಂಬು ನೀರು ಇಡಬೇಕಾದುದು ಕರ್ಮ ಹಿಡಿಯುವವನ ಸಾಂಪ್ರದಾಯಿಕ ಕರ್ತವ್ಯಗಳಲ್ಲಿ ಒಂದು. ನಿಷೇಧದ ಹನ್ನೆರಡು ದಿನಗಳವರೆಗೂ ಆತ ತಲೆಯಲ್ಲಿ ಯಾವುದೇ ರೀತಿಯ ಹೊರೆ ಹೊರುವಂತಿಲ್ಲ. ತಲೆಗೆ ಸಂಪ್ರದಾಯದ 'ಮುಟ್ಟಾಳೆ' ಧರಿಸುವಂತಿಲ್ಲ. ಈ ಎಲ್ಲಾ ನಿಷೇಧ ನಂಬಿಕೆಗಳನ್ನು ಕಟ್ಟು ನಿಟ್ಟಾಗಿ ಪಾಲಿಸಬೇಕಾಗುತ್ತದೆ. ಈ ನಿಟ್ಟಿನಲ್ಲಿ ಕುಟುಂಬದ ಅಥವಾ ಮನೆತನದ ಹಿರಿಯರು ಮಾರ್ಗದರ್ಶನ ನೀಡುತ್ತಾರೆ.

**ಹನ್ನೆರಡನೇ ದಿನದ ಸಾವು**

ವ್ಯಕ್ತಿಯು ಮೃತಪಟ್ಟು ಹನ್ನೊಂದನೇ ದಿನದಂದು ಸಾಮಾನ್ಯವಾಗಿ ಮರಾಟಿಗರಲ್ಲಿ ಸದ್ಗತಿ ಕಾರ್ಯ ನಡೆಯುತ್ತದೆ. ಪ್ರಾದೇಶಿಕವಾಗಿ ಕೆಲವು ಕುಟುಂಬಗಳಲ್ಲಿ ಹನ್ನೆರಡನೇ ದಿನ 'ಸುದ್ಧ' ದ ದಿನವಾಗಿಯೂ ಹದಿಮೂರನೇ ದಿನವನ್ನು ಉತ್ತರಕ್ರಿಯೆಯ ದಿನವಾಗಿಯೂ ಮಾಡುವುದಿದೆ. ಬಹುತೇಕ ಮರಾಟಿಗರಲ್ಲಿ ಹನ್ನೊಂದನೇ ದಿನ 'ಸುದ್ಧ', ಹನ್ನೆರಡನೇ ದಿನ ಉತ್ತರಕ್ರಿಯೆಯ ಕಾರ್ಯಗಳನ್ನು ಮಾಡುತ್ತಾರೆ. 'ಸುದ್ಧ' ದ ದಿನ ಕುಟುಂಬದಲ್ಲಿ ಎಲ್ಲರ ಬಟ್ಟೆಗಳನ್ನು ತೊಳೆದು ವೈದಿಕರ ಮನೆಯಿಂದ ತಂದಂಥ 'ಪುಣ್ಯಾರ್ಚನೆ' ನೀರನ್ನು ಪ್ರೋಕ್ಷಿಸುತ್ತಾರೆ. ಆ ಮೂಲಕ ಸೂತಕ ಕಳೆಯುತ್ತಾರೆ. ಸತ್ತ ನಂತರ ಹನ್ನೆರಡು ದಿನಗಳು ಸೂತಕದ (ನಿಷಿದ್ಧ) ದಿನಗಳಾಗಿರುತ್ತವೆ. ನಂತರದ ಇಪ್ಪತ್ತೆಂಟು ದಿನಗಳಲ್ಲಿ ಕೂಡ ಮನೆಯಲ್ಲಿ ದೇವರಿಗೆ ಪೂಜೆ, ಭಜನೆ, ಶಂಖನಾದ ಮಾಡುವುದಕ್ಕೆ ನಿಷೇಧವಿದೆ.

**ಪಿಂಡ ಬಿಡುವುದು**

ಮೃತರ ಅಸ್ಥಿಯನ್ನು ಯಾವುದಾದರೊಂದು ಪವಿತ್ರ ನದಿಯಲ್ಲಿ ಬಿಟ್ಟು ಮೃತರ ಆತ್ಮಕ್ಕೆ ಚಿರಶಾಂತಿಯನ್ನು ಕೋರುವುದೇ 'ಪಿಂಡ ಬಿಡುವುದ'ರ ಮೂಲಕ. ಜಿಲ್ಲೆಯ ಮರಾಟಿಗರು ಮುಖ್ಯವಾಗಿ ಕೊಡಗಿನ ತಲಕಾವೇರಿ, ಪುತ್ತೂರು ಉಪ್ಪಿನಂಗಡಿಯ ಕುಮಾರಧಾರ ಅಥವಾ ಉತ್ತರ ಕನ್ನಡದ ಗೋಕರ್ಣದಲ್ಲಿ ಪಿಂಡ ಬಿಡುತ್ತಾರೆ. ಪಿಂಡ ಬಿಡದೇ ಹೋದರೆ ಮೃತರ ಆತ್ಮಕ್ಕೆ ನೆಮ್ಮದಿ ಸಿಗುವುದಿಲ್ಲ, ಕುಟುಂಬದವರಿಗೆ ಉಪಟಳವಾಗುತ್ತದೆ ಎಂಬ ನಂಬಿಕೆಯಿದೆ. ಹಾಗಾಗಿ ಮೃತ ಪಟ್ಟು ಅನೇಕ ವರ್ಷಗಳ ನಂತರವೂ ಮೃತ ಗಂಡು / ಹೆಣ್ಣಿನ (ಬೆಳ್ಳಿಯ ಪ್ರತಿಮೆ (ಪಾಪೆ) ಯನ್ನು ತಲಕಾವೇರಿಗೆ ಒಯ್ದು ನೀರಲ್ಲಿ ಮುಳುಗಿ ಬಿಟ್ಟು ಬಂದ ಉದಾಹರಣೆಗಳಿವೆ. ಹನ್ನೆರಡನೇ ದಿನ ಊರಿನ ಸಮಸ್ತ ಜನರಿಗೆ ಮೃತರ ಸ್ಮರಣಾರ್ಥ ಭೋಜನ ಕೂಟ ಏರ್ಪಡಿಸುವುದು ಸಂಪ್ರದಾಯ. ಅಂದು ಬೆಳಿಗ್ಗೆ ಮೃತರ ಮಕ್ಕಳು 'ಪಿಂಡ ಬಿಡುವ' ಕಾರ್ಯಕ್ರಮ ಆಚರಿಸುತ್ತಾರೆ. ದೂರದೂರಿಗೆ ಹೋಗಲು ಅನಾನುಕೂಲ, ಸಮಯದ ಅಭಾವಗಳಿರುವುದರಿಂದ ಊರಿನ ಹತ್ತಿರದ ಬ್ರಾಹ್ಮಣರ ದೊಡ್ಡ ದೊಡ್ಡ ಕೆರೆಗಳಲ್ಲಿ ಆಚರಿಸುವುದೂ ಇವೆ.

ಹನ್ನೊಂದನೆಯ ದಿನ ಬಂಧುಬಾಂಧವರೆಲ್ಲರೂ ಮೃತರ ನೆನಪಿಗೋಸ್ಕರ ವಿವಿಧ ತರಹದ ತಿಂಡಿ ತಿನಿಸುಗಳನ್ನು ತರುತ್ತಾರೆ. ಅಂದು ಮನೆಯೊಳಗೆ ದೇವರಕೋಣೆಯಲ್ಲಿ ಬಾಳೆ ಎಲೆಯಲ್ಲಿ ತಯಾರಿಸಿದ ಎಲ್ಲಾ ತರಹದ ಅಡುಗೆ

ಸಿಹಿ ತಿಂಡಿಗಳನ್ನು ಬಲಕೈಯಿಂದ ಎಡಗಡೆಗೆ ತಿರುಗಿಸಿ ಬಡಿಸುತ್ತಾರೆ. ಕುಟುಂಬದ ಎಲ್ಲಾ ಸದಸ್ಯರು ಸ್ವಲ್ಪಸ್ವಲ್ಪ ಸಾಂಕೇತಿಕವಾಗಿ ಬಡಿಸುತ್ತಾರೆ. ಮೃತರಿಗೆ ಕೊನೆಯ ಆಹಾರವಿದು ಎಂದು ಭಾವಿಸುತ್ತಾರೆ. ಎಲ್ಲವನ್ನು ಹಿಡಿದುಕೊಂಡು ಶವ ಸುಟ್ಟ 'ದೂಪೆ'ಯ ಬಳಿ ಬಂದು ಅಲ್ಲಿ ದೀಪ ಉರಿಸಿ ಪ್ರಾರ್ಥನೆ ಮಾಡಿ ತಂದಂಥ ತಿಂಡಿ ತಿನಿಸುಗಳನ್ನು ಇಡುತ್ತಾರೆ. ಮೃತನ ಆತ್ಮ ಬಂದು ತಿಂಡಿ ತಿನಿಸು ಸ್ವೀಕರಿಸುತ್ತದೆ ಎಂಬ ನಂಬಿಕೆಯಿಂದ ಈ ಕಾರ್ಯ ಮಾಡುತ್ತಾರೆ. ಅದಕ್ಕೆ ಮೊದಲು ಮಡಿವಾಳನು ಮನೆಗೆ ಮತ್ತು ದೂಪೆಯ ಹತ್ತಿರ ಹೋಗಿ ಶುದ್ಧಿಗೊಳಿಸುತ್ತಾನೆ. ಕ್ಷೌರಿಕನು ಬಂದು ಕುಟುಂಬದ ಗಂಡು ಮಕ್ಕಳ, ಹಿರಿಯ ಪುರುಷರ ಮೀಸೆಯನ್ನು ತೆಗೆಯುತ್ತಾನೆ. ತಲೆಕೂದಲನ್ನು ಚಿಕ್ಕದಾಗಿಸುತ್ತಾನೆ. 'ತಲೆ ಬೋಳಿಸ' ಬೇಕೆಂಬ ಸಂಪ್ರದಾಯ ಮರಾಟಿಗರಲ್ಲಿ ಇಲ್ಲ. ಮೃತರ ನೆನಪಿನಲ್ಲಿ ಸಂಬಂಧಿಕರು ಬೂದು ಬಾಳೆ ಗೊನೆ, ಕುಂಬಳಕಾಯಿ, ಒಂದು ತೆಂಗಿನಕಾಯಿಗಳನ್ನು ಹೊಲೆಯನ ಮುಖಾಂತರ ಮೃತರ ಮನೆಗೆ ತಲುಪಿಸುತ್ತಿದ್ದರು ಇದನ್ನು ಸರಕು ತರುವುದು ಎಂದು ಕರೆಯುತ್ತಾರೆ. ಇಂದು ಆ ಪದ್ಧತಿ ತೆರೆಮರೆಗೆ ಸರಿದಿದೆ. ಇದರಿಂದ ಬಡವರಿಗೆ ಅನುಕೂಲವಾಗುತ್ತಿತ್ತು. ಆ ಮೂಲಕ ಸಂಬಂಧಿಕರು, ನೆರೆಹೊರೆಯವರು ಸಹಕರಿಸುತ್ತಿರುವ ಈ ಪದ್ಧತಿ ವಿಶಿಷ್ಟವಾದುದು.

ಹನ್ನೆರಡನೇ ದಿನ ಊರಿನ ಸಮಸ್ತರಿಗೆ ಭೋಜನಕೂಟ ಏರ್ಪಡಿಸುತ್ತಾರೆ. ಮಾಂಸದೂಟಕ್ಕೆ ನಿಷೇಧವಿದೆ. ಸಂಪ್ರದಾಯದಂತೆ 'ಸಾವಿ' ನಲ್ಲಿ ತರಕಾರಿ, ಸಿಹಿಗಳನ್ನು ಮಾತ್ರ ಮಾಡಬೇಕು. ಆದರೆ ಇಂದಿನ ಪದ್ಧತಿ ಕಾರ್ಯಕ್ರಮಗಳಲ್ಲಿ ಮಾಂಸಾಹಾರದ ಊಟ ಹಾಕುವುದೂ ಪ್ರಾರಂಭವಾಗಿದೆ. ಅಂದು ಕುಟುಂಬದ ಹಿರಿಯರೊಬ್ಬರು ಮೃತರ ಬಗೆಗಿನ ಗುಣಗಾನ ಮಾಡುತ್ತಾರೆ. ಅವರ ನೆನಪಿನಲ್ಲಿ ಎಲ್ಲರೂ ಆತಿಥ್ಯ ಸ್ವೀಕರಿಸಬೇಕೆಂದು ವಿನಂತಿಸುತ್ತಾರೆ.

ಮೃತ ಸ್ತ್ರೀ/ಪುರುಷ ಗೋಂದೋಳು ಪೂಜೆಯ ಪೂಜಾರಿಯಾಗಿದ್ದರೆ ಹನ್ನೆರಡನೆಯ ದಿನ ಶಾಸ್ತ್ರೋಕ್ತವಾಗಿ 'ದೇವರ ಊಟ' ಹಾಕಬೇಕಾಗುತ್ತದೆ. ದೇವರಕೋಣೆಯಲ್ಲಿ ಬಾಳೆಲೆಯಲ್ಲಿ ಪ್ರತ್ಯೇಕವಾಗಿ ಮಹಿಳೆಯೊಬ್ಬಳು ಮಾಡಿದ ಸರಳ ಸಸ್ಯಹಾರಿ ಅಡುಗೆಯನ್ನು ಬಡಿಸಿ ಪ್ರಾರ್ಥನೆ ಮೂಲಕ 'ದೇವರ ಊಟ'ವನ್ನು ಮುಗಿಸುತ್ತಾರೆ.

ದೇವರಿಗೆ ಊಟ ಹಾಕಿದ ನಂತರವೇ ಆಮಂತ್ರಿತರಿಗೆ ಊಟ ಹಾಕಲಾಗುತ್ತದೆ. ಅಂದು ರಾತ್ರಿ 'ಕುಲೆಯನ್ನು ಸೇರಿಸುವ (ಕರೆಸುವ)' ಶಾಸ್ತ್ರ ನಡೆಯುತ್ತವೆ. ಒಟ್ಟು ಹದಿನಾರರ ಸಾಲಿಗೆ ಮೃತ 'ಕುಲೆ'ಯನ್ನು ಸೇರಿಸುತ್ತಾರೆ. ಹದಿನಾರು ಬಾಳೆ ಎಲೆಯಲ್ಲಿ ಅನ್ನ, ಕೋಳಿ ಸಾಂಬಾರು, ಮೀನು ಸಾಂಬಾರು, ಅಕ್ಕಿ ರೊಟ್ಟಿಗಳನ್ನೆಲ್ಲಾ ಬಡಿಸಲಾಗುತ್ತದೆ.

ಗತಿಸಿದ ಹದಿನಾರು ಮಂದಿಯನ್ನು ಮಾತ್ರ ಆ ಹದಿನಾರು ಎಲೆಗಳು ಸಂಕೇತಿಸುತ್ತವೆ. ಅದರಲ್ಲಿ ಒಂದು ಹಿಂದೆ ಸರಿಸಿ ಮೃತಪಟ್ಟ ಹೊಸತರ ಸಲುವಾಗಿ ಮತ್ತೊಂದು ಎಲೆಯನ್ನು ಸೇರಿಸಿದಾಗ ಮತ್ತೆ ಕುಲೆಗಳ ಸಂಖ್ಯೆ ಹದಿನಾರೇ ಆಗುತ್ತದೆ. ಆ ಮೂಲಕ ಗತಿಸಿದ ಹಿರಿಯರ ಜತೆಗೆ ಇದ್ದು ನಮ್ಮನ್ನು ಕಾಪಾಡುತ್ತಾರೆ, ಸಲಹುತ್ತಾರೆ. ಕಷ್ಟಗಳನ್ನೆಲ್ಲಾ ಪರಿಹರಿಸುತ್ತಾರೆ ಎಂಬ ನಂಬಿಕೆ ಮರಾಟಿಗರಲ್ಲಿದೆ. ಹಾಗಾಗಿ ಸಾವಿನ ನಂತರವೂ ಮನೆಯಲ್ಲಿ ಜರುಗುವ ಯಾವುದೇ ಕಾರ್ಯಕ್ರಮ, ಆಚರಣೆಗಳ ಸಂದರ್ಭದಲ್ಲಿನ ಪ್ರಾರ್ಥನೆಯಲ್ಲಿ ಅದು ವ್ಯಕ್ತವಾಗುತ್ತದೆ. ಕುಟುಂಬದ ದೈವ-ದೇವರುಗಳಲ್ಲಿ ಮತ್ತು ಗತಿಸಿದ ಹಿರಿಯರಲ್ಲಿ ಭಿನ್ನಹ ಮಾಡಿಕೊಳ್ಳುವುದು ಸಂಪ್ರದಾಯವಾಗಿದೆ.

ಹಾಗಾಗಿ ಪ್ರತಿವರ್ಷ 'ಶ್ರಾದ್ಧ' ಮಾಡುವ ಮೂಲಕ ಹಿರಿಯರನ್ನು ನೆನಪಿಸಿಕೊಳ್ಳುತ್ತಾರೆ. ಪ್ರತಿ ತಿಂಗಳು ಅಮವಾಸ್ಯೆಯಂದು ವ್ರತಾಚರಣೆಯನ್ನು ಮಾಡುತ್ತಾರೆ. ಅಮವಾಸ್ಯೆಯಂದು ಮನೆಯನ್ನೆಲ್ಲಾ ಸೆಗಣಿಯಿಂದ ಸಾರಿಸಿ ಶುದ್ಧವಾಗಿ ಮಾಂಸಹಾರದ (ಮೀನು) ಅಡುಗೆಯನ್ನು ಮನೆಯ ಸ್ತ್ರೀಯರು ಮಾಡಿದರೆ ವ್ರತಾಚರಣೆಯಲ್ಲಿರುವ ಪುರುಷ ಬೆಳಿಗ್ಗೆ ಅಕ್ಕಿಯಿಂದ ತಯಾರಿಸಿದ ಯಾವುದೇ ಆಹಾರವನ್ನು ತೆಗೆದುಕೊಳ್ಳದೇ, ಮಧ್ಯಾಹ್ನ ಸ್ನಾನಮಾಡಿ ವಿಶೇಷವಾದ ಆಹಾರವನ್ನು ಸ್ವೀಕರಿಸುತ್ತಾನೆ. ಮಧ್ಯಾಹ್ನ ಎರಡು (ಒಂದು ದೊಡ್ಡ) ಬಾಳೆಎಲೆಯನ್ನು ಹಾಕುತ್ತಾರೆ. ದೊಡ್ಡ ಬಾಳೆಲೆಯಲ್ಲಿ ಊಟ ಬಡಿಸಲಾಗುತ್ತದೆ. ಊಟ ಮಾಡುವವನು ತನಗಾಗಿನ ಆಹಾರದಿಂದ ಸಾಂಕೇತಿಕವಾಗಿ ಅನ್ನದ ಎರಡು ಸಣ್ಣ ಸಣ್ಣ ಉಂಡೆಗಳನ್ನುಮಾಡಿ ಸಣ್ಣ ಬಾಳೆಲೆಯಲ್ಲಿಡುತ್ತಾನೆ. ನಂತರ ಚೊಂಬಿನ ನೀರಿನಿಂದ ತಲೆಗೆ ಮೂರು ಸುತ್ತು ತಂದು ಚಿಕ್ಕ ಎಲೆಯ ಎಡೆಗೆ ಅರ್ಪಿಸುತ್ತಾನೆ. ಅದನ್ನು ತೆಗೆದುಕೊಂಡು ಹೊರಗೆ ತೊಂಡೆಕಾಯಿ, ಬಸಳೆಯ ಚಪ್ಪರದ ಮೇಲೆ ಇಟ್ಟು ಪ್ರಾರ್ಥಿಸಿ ಬರುತ್ತಾನೆ. ಆ ಆಹಾರವನ್ನು ಕಾಗೆಗಳು ಬಂದು ತಿಂದರೆ ಕುಲೆಗಳು ತಿಂದಂತೆಯೆ ಎಂದು ಭಾವಿಸಲಾಗುತ್ತದೆ. ನಂತರ ತಾನು ಆಹಾರ ಸ್ವೀಕರಿಸುತ್ತಾನೆ. ಮನೆಯ ಇತರೆ ಸದಸ್ಯರು ನಂತರ ಆಹಾರ ಸ್ವೀಕರಿಸುತ್ತಾರೆ. ಅಂದು ಪ್ರತಿಯೊಬ್ಬರೂ ಬಾಳೆ ಎಲೆಯಲ್ಲಿ ಊಟ ಮಾಡುವುದು ಒಂದು ಪದ್ಧತಿಯಂತೆ ಕಾಣುತ್ತದೆ. ಅಂದು ರಾತ್ರಿ ಮನೆಯ ಯಜಮಾನ ಅಮವಾಸ್ಯೆ ಊಟ ಮಾಡಿದವನು ಅಕ್ಕಿಯಿಂದ ತಯಾರಿಸಿದ ಫಲಾಹಾರವನ್ನು ಮಾತ್ರ ಸ್ವೀಕರಿಸುತ್ತಾನೆ.

ಜಿಲ್ಲೆಯಲ್ಲಿ ವೈದಿಕೇತರ ಅನೇಕ ಸಮುದಾಯಗಳಲ್ಲಿ ಮರಣನಂತರದ ಸಂಬಂಧಗಳ ಬಗ್ಗೆ ಅನೇಕ ನಂಬಿಕೆಗಳಿವೆ. ಸತ್ತ ಬಳಿಕವೂ ಆತನ ಜೀವ ಅಸ್ತಿತ್ವದಲ್ಲಿದ್ದು ಮನೆ, ಸಂಬಂಧಿಕರ ಜೊತೆಯಲ್ಲಿರುತ್ತದೆ ಎಂಬ ಭಾವನೆ ಮರಾಟಿಗರಲ್ಲಿದೆ. ತುಳು ಭಾಷೆಯಲ್ಲಿ 'ಕುಲೆ' ಎಂದು ಕರೆಯಲ್ಪಡುವ ಈ ನಿರ್ಜೀವಗಳು ತಮ್ಮ ಕುಟುಂಬದವರ ಇಷ್ಟಗಳನ್ನು ಈಡೇರಿಸುವಲ್ಲಿ ಸಹಕಾರಿಯಾಗುತ್ತವೆ. ಕುಲೆಗಳಿಗೆ ಸಾಂಪ್ರದಾಯಿಕವಾಗಿ ಕಾಲಕಾಲಕ್ಕೆ ಅನ್ನ ಆಹಾರಗಳನ್ನು ನೀಡಿದೆ ಹೋದರೆ ಕಷ್ಟ ಕೊಡುತ್ತವೆ. ಮರಾಟಿಗರಲ್ಲಿ ಸತ್ತು ಹನ್ನೊಂದನೇ ದಿನ ಶುದ್ಧ ಹನ್ನೆರಡನೆಯ ದಿನ ಉತ್ತರ ಕ್ರಿಯೆ ಅಥವಾ 'ಸಾವು' ನಡೆಯುತ್ತದೆ. ಹನ್ನೆರಡನೇ ದಿವಸ ಸತ್ತ ವ್ಯಕ್ತಿ ಕುಲೆಯಾಗಿ ಪರಿವರ್ತನೆಗೊಳ್ಳುತ್ತದೆ. ಅಂದೇ ರಾತ್ರಿ ಕುಲೆಯನ್ನು ಮನೆಯೊಳಗೆ ಕರೆಯುತ್ತಾರೆ. ಮನೆಯೊಳಗೆ ಅನ್ನ, ಕೋಳಿಸಾರು, ಅಕ್ಕಿರೊಟ್ಟಿಗಳನ್ನು ಮಾಡಿ ಹದಿನಾರು ತುದಿಎಲೆಗಳಲ್ಲಿ ಬಡಿಸುತ್ತಾರೆ. ಎಲ್ಲರೂ ಕೈಮುಗಿದು ಈಗಾಗಲೇ ಸತ್ತುಹೊದ ಹಿರಿಯರನ್ನು ಪ್ರಾರ್ಥಿಸಿ, ಈಗ ಸತ್ತವನನ್ನು ಸೇರಿಸಿಕೊಳ್ಳಬೇಕೆಂದು ಅರಿಕೆ ಮಾಡುತ್ತಾರೆ.

ಕುಲೆಗಳು ಸಾಮಾನ್ಯವಾಗಿ ಬಿಳಿಬಟ್ಟೆಯನ್ನು ಧರಿಸುತ್ತವೆ ಎಂದು ಹಿರಿಯರ ನಂಬಿಕೆ. ಮತ್ತೆ ಬೇಕಾದ ರೀತಿಯಲ್ಲಿ ಆಕಾರವನ್ನು ತಾಳಬಲ್ಲವು. ರಾತ್ರಿ ಹೊತ್ತು ಒಬ್ಬಂಟಿಗನಾಗಿ ಹೋಗುವವನಿಗೆ ಕಲ್ಲೆಸೆಯುತ್ತವೆ. ಸದ್ದು ಮಾಡುತ್ತವೆ. ಬೇರೆ ಬೇರೆ ಪ್ರಾಣಿಗಳ ಆಕಾರದಲ್ಲಿ ಕಾಣಿಸಿಕೊಳ್ಳುತ್ತವೆ. ಇದರಿಂದ ಹೆದರಿದವರಿಗೆ ಜ್ವರ ಬರುತ್ತದೆ ಎಂಬ ನಂಬಿಕೆಯಿದೆ. ಬೇಟೆಗೆ ಹೋದಾಗ ಇಲಿಯಾಕಾರದಲ್ಲಿ ಕಾಣಿಸಿಕೊಂಡು ತಕ್ಷಣ ಅದೃಶ್ಯವಾಗುತ್ತವೆ. ಒಂದು ವೇಳೆ ಈಡು ಹೊಡೆಯುವುದರಲ್ಲಿ ಚಾಣಾಕ್ಷರಾದವರು ಗುಂಡು ಹೊಡೆದಾಗ ಸಾಯುತ್ತವೆ. ಮರದಿಂದ ದೊಪ್ಪನೆ ಬೀಳುತ್ತದೆ. ಅಲ್ಲಿ ಹೋಗಿ ನೋಡಿದರೆ ಹಾವಸೆ ಇರುತ್ತದೆ ಎಂದು ಅನೇಕ ನಿಪುಣ ಬೇಟೆಗಾರರು ಹೇಳುತ್ತಾರೆ.

ಪ್ರತಿ ತಿಂಗಳು 'ಅಮವಾಸ್ಯೆ' ದಿನದಂದು ಗತಿಸಿದ ಹಿರಿಯರ ನೆನಪಿನಲ್ಲಿ ಅನ್ನ ಸಾರಿನ ತುಣುಕನ್ನು ಮನೆಯ ಹೊರಗಿಟ್ಟು ಪ್ರಾರ್ಥಿಸುವ ಪದ್ಧತಿಯನ್ನು ಈ ಮೊದಲೇ ಹೇಳಿದೆ. ಪ್ರತಿ ವರ್ಷ ಶ್ರಾದ್ಧದ ಮೂಲಕ ಕುಟುಂಬದ ಹಿರಿಯರೆಲ್ಲರಿಗೂ ವಿಶೇಷ ಊಟ ಬಡಿಸುವ ಕ್ರಮವಿದೆ. ಕುಟುಂಬದಲ್ಲಿ ಜಗಳಗಳಾಗಿ ಶಾಪ ಹಾಕಿದರೆ ಕುಟುಂಬದ ಕುಲೆಗಳು ಕಾಸರಗೋಡಿನ ನೂರ ಒಂದು ಭೂತಸ್ಥಾನವಿರುವ ಕಾನತ್ತೂರಿಗೆ ಹೋಗುತ್ತದೆ. ಹಾಗೆಯೇ ಇನ್ನಿತರ ಭೂತಗಳೊಂದಿಗೆ ಸೇರಿಕೊಂಡು ಕುಟುಂಬದವರಿಗೆ ಕಷ್ಟಗಳನ್ನು ಕೊಡುತ್ತದೆ ಎಂಬ ನಂಬಿಕೆ ಜಿಲ್ಲೆಯ ಎಲ್ಲಾ ಸಮುದಾಯಗಳಲ್ಲಿವೆ. ಜೋಯಿಸರ ಮೂಲಕ ತಿಳಿದು ಮಾಂತ್ರಿಕರ ಸಹಾಯದಿಂದ ಕುಲೆಯನ್ನು ಕಾನತ್ತೂರಿನಿಂದ ಬಿಡಿಸಿಕೊಂಡು ಬಂದ ಉದಾಹರಣೆಗಳು ನೂರಾರು. ಜಿಲ್ಲೆಯ ಅನೇಕ ದೇವಿ ದರ್ಶನ ಪಾತ್ರಿಗಳು, ಮಂತ್ರವಾದಿಗಳು ಭೂತದ ಕೈಯಲ್ಲಿ ಸಿಲುಕಿರುವ ಕುಲೆಗಳನ್ನು ಬಿಡಿಸುತ್ತಾರೆ.

ಮರಾಟಿಗರು ದೈವಾರಾಧನೆಯ ಜೊತೆಗೆ ಕುಲೆಯ ಆರಾಧನೆಯನ್ನು ಮಾಡುವುದನ್ನು ಕಾಣಬಹುದು. ಪಾಲ್ತಾಡಿ ರಾಮಕೃಷ್ಣ ಆಚಾರ್ ಅವರ ಅಭಿಪ್ರಾಯದಂತೆ, ಸಾಮಾಜಿಕ ದೃಷ್ಟಿಯಿಂದ ಕುಲೆಗಳ ಆರಾಧನೆ ಬಹಳ ಪ್ರಯೋಜನಕಾರಿ. ತನ್ನ ಪಿತೃಗಳು ಸಿಟ್ಟುಗೊಳ್ಳುತ್ತಾರೆ ಎಂಬ ಕಾರಣದಿಂದ ಸಮಾಜದಲ್ಲಿ ಎಷ್ಟೋ ವ್ಯಕ್ತಿಗಳು ಸಮಾಜಕ್ಕೆ ಅನಿಷ್ಟವಾದ ಕೆಲಸಗಳನ್ನು ಮಾಡಲು ಹಿಂಜರಿಯುತ್ತಾರೆ. ಕುಟುಂಬದವರೆಲ್ಲ ವೈಷಮ್ಯ ಮರೆತು ಆರಾಧನೆಯ ದೃಷ್ಟಿಯಿಂದಾದರೂ ಒಂದಾಗುತ್ತಾರೆ. ಇದರಿಂದಾಗಿ ವ್ಯಕ್ತಿ-ವ್ಯಕ್ತಿಗಳ ನಡುವೆ ಪ್ರೀತಿ ಸೌಹಾರ್ದ ಬೆಳೆಯುತ್ತದೆ.

**ಮರಾಟಿಗರಲ್ಲಿ ಕಂಡುಬರುವ ಧಾರ್ಮಿಕ, ಸಾಮಾಜಿಕ ಮತ್ತು ಇತರ ನಂಬಿಕೆಗಳು**

೦೧. ಮಳೆ ಬರುವಾಗ ಬಿಸಿಲು ಬಿದ್ದರೆ ನರಿಗೂ ತೋಳಕ್ಕೂ ಮದುವೆಯೆಂದು ನಂಬಿಕೆಯಿದೆ.

೦೨. ಚಿಕ್ಕ ಮಕ್ಕಳು ಹಲ್ಲು ತೆಗೆದಾಗ ತೆಗೆದ ಹಲ್ಲನ್ನು ಹಿಡಿದು ತಲೆಗೆ ಮೂರು ಸುತ್ತು ಬರಿಸಿ ಹಳೆ ಹಲ್ಲು ಹೋಗಲಿ ಹೊಸ ಹಲ್ಲು ಬರಲಿ ಎಂದು ಹೇಳಿ ಮನೆಯ ಅಥವಾ ಕೊಟ್ಟಿಗೆಯ ಮಾಡಿನ ಮೇಲೆ ಮತ್ತೊಂದು ಅಂಚಿಗೆ ಎಸೆಯುತ್ತಾರೆ.

೦೩. ಮಂಗಳವಾರ ಮತ್ತು ಶುಕ್ರವಾರ ದಿನ ಹೆಣ್ಣು ಮಕ್ಕಳು ತವರು ಮನೆಯಿಂದ ಗಂಡನ ಮನೆಗೆ ಹೋಗಬಾರದೆಂಬ ನಂಬಿಕೆಯಿದೆ.

೦೪. ಕಬ್ಬಿಣವನ್ನು ಒಬ್ಬರಿಂದ ಬಿಟ್ಟಿಯಾಗಿ ಪಡೆಯಬಾರದು.

೦೫. ಸಿಡಿಲು ಹೊಡೆದಾಗ ಮನೆಯ ಅಂಗಳಕ್ಕೆ ಕಬ್ಬಿಣದ ತುಂಡು ಹಾಕಬೇಕು. ಕಂಚು, ಹಿತ್ತಾಳೆ ಪಾತ್ರೆಗಳು ಮನೆಯ ಹೊರಗಿರಬಾರದು.

೦೬. ಮಳೆಯೊಳಗೆ ಉಗುರು ಕತ್ತರಿಸಬಾರದು.

೦೭. ಹೊಸ್ತಿಲು ಮೇಲೆ ನಿಂತು ಕೊಂಡು ಯಾವುದೇ ರೀತಿಯಲ್ಲಿ ಕೊಡುಕೊಳ್ಳುವಿಕೆ ಮಾಡಬಾರದು.

೦೮. ರಾತ್ರಿ ಹೊತ್ತಿನಲ್ಲಿ ಮನೆ ಕಸವನ್ನು ಹೊರಗೆ ಹಾಕಬಾರದು

೦೯. ನಾಯಿಯನ್ನು ಕಾಲಿನಿಂದ ಒದೆಯಬಾರದು. ನಾಯಿ-ನಾರಾಯಣ ದೇವರಂತೆ

೧೦. ಮಾತಾಡುವಾಗ ನಾಯಿ ತನ್ನ ಕಿವಿಗಳನ್ನು ಪಟಪಟ ಬಡಿದರೆ ಆಡಿದ ಮಾತು ಸತ್ಯ.

೧೧. ಮುಟ್ಟಾದ ಹೆಣ್ಣು ಕುಂಕುಮ ಇಡಬಾರದು. ಹೂ ಮುಡಿಯಬಾರದು. ದೇವರ ಬನಕ್ಕೆ ಹೋಗಬಾರದು.

೧೨. ಮುಟ್ಟಾದ ಸ್ತ್ರೀಯನ್ನು ಪುರುಷರು ಅಥವಾ ಇತರರು ಮುಟ್ಟಬಾರದು.

೧೩. ಕಾಲನ್ನು ತೊಳೆಯುವಾಗ ಹಿಮ್ಮಡಿ ಪೂರ್ತಿ ನೆನೆಯಬೇಕು. ಇಲ್ಲದಿದ್ದರೆ ಶನಿ ಹಿಡಿದುಕೊಳ್ಳುತ್ತದೆ.

೧೪. ಒಲೆಯನ್ನು ಕಾಲಿನಿಂದ ಒದೆಯಬಾರದು ಒಲೆ ಲಕ್ಷ್ಮಿಗೆ ಸಮಾನ

೧೫. ಹುತ್ತವನ್ನು ಬಳಸಬಾರದು.

೧೬. ಹೆಂಗಸರು ಅವಳಿ ಬಾಳೆಹಣ್ಣು ತಿನ್ನಬಾರದು. ತಿಂದರೆ ಅವಳಿ ಮಕ್ಕಳಾಗುತ್ತವೆ.

೧೭. ಹೆಣ್ಣು ಕೋಳಿ ಕೂಗಿದರೆ ಮನೆಗೆ ಅಪಾಯ

೧೮. ಆಕಳ ಹಾಲನ್ನು ಆಕಾಶಕ್ಕೆ ತೋರಿಸಬಾರದು.

೧೯. ಮೊಟ್ಟೆಯನ್ನು ಆಕಾಶಕ್ಕೆ ತೋರಿಸಬಾರದು. ತೋರಿಸಿ ತಂದಿಟ್ಟರೆ ಅದು ಕಾಲ್ಕೆತ್ತಿ (ಹಾಳು) ಆಗುತ್ತದೆ.

೨೦. ಸತ್ತ ನಂತರ ಆತ್ಮವು ಹೋಗುವ ದಿಕ್ಕಿನಲ್ಲಿಬಾರದು. ಆ ದಿಕ್ಕಿನಲ್ಲಿರುವ ಕೆಲವೊಂದು ಗಿಡ ಮರಗಳು ಉರುಳಿ ಬೀಳುವುದು ಎಂಬ ಕಲ್ಪನೆಯಿದೆ.

೨೧. ಹಲ್ಲಿ ಹೆಚ್ಚುಸಾರಿ ಲೊಚಗುಟ್ಟಿದರೆ ಅಂದು ಕೊಂಡ ಕೆಲಸ ಅಥವಾ ಹೇಳಿದೆ ಮಾತು ಸತ್ಯ ಎಂಬ ನಂಬಿಕೆಯಿದೆ

೨೨. ಮನೆಯಲ್ಲಿ ಒಲೆ ಬೆಂಕಿ ಸುರು ಸುರು (ಬೊಗಳುವುದು) ಎಂದರೆ ಮನೆಗೆ ನೆಂಟರು ಬರುತ್ತಾರೆ.

೨೩. ಮನೆ ಮುಂದೆ ಕಾಗಿ ಕೂಗಿದರೆ ನೆಂಟರು ಬರುತ್ತಾರೆ ಎಂಬ ನಂಬಿಕೆಯಿದೆ.

೨೪. ಮಕ್ಕಳಿಗೆ ಕನ್ನಡಿ ತೋರಿಸಬಾರದು (ಪ್ರತಿಬಿಂಬ ಕಂಡು ಗಾಬರಿಯಾಗಬಹುದು)

೨೫. ನೊಗ, ನೇಗಿಲನ್ನು ಕಾಲಿನಿಂದ ತುಳಿಯಬಾರದು.

೨೬. ಬೆಕ್ಕನ್ನು ಕೊಂದರೆ ತಲೆ ಸುತ್ತುತ್ತಿರುತ್ತದೆ.

೨೭. ಮನೆಯ ಹೊರ ಹೋಗಬೇಕಾದರೆ ತುಳಸಿ ಕಟ್ಟೆಯ ಬಲಭಾಗದಿಂದ ಹೋಗಬೇಕು.

೨೮. ತೋಟದಿಂದ ಒಂದೇ ಬಾಳೆ ಎಲೆಯನ್ನು ತರಬಾರದು. ಜೊತೆಗೆ ಬಾಳೆ ಎಲೆಯ ಚೂರನ್ನಾದರೂ ತರಬೇಕು.

೨೯. ಊಟದ ತಟ್ಟೆ ಗಡಿಗೆಗಳನ್ನು ಕಾಲಿನಿಂದ ಒದೆಯಬಾರದು.

೩೦. ಮಂತ್ರಿಸಿದ ತೆಂಗಿನಕಾಯಿ ಮನೆಯನ್ನು ರಕ್ಷಿಸುತ್ತದೆ.

೩೧. ನಾಗರಹಾವನ್ನು ಅರ್ಧಜೀವದಲ್ಲಿ ಬಿಟ್ಟರೆ ಕೇಡುಂಟಾಗುವುದು.

೩೨. ಗಂಡಸರಿಗೆ ತಲೆಯಲ್ಲಿ ಎರಡು ಸುಳಿಯಿದ್ದರೆ ಎರಡು ಮದುವೆಯಾಗುತ್ತದೆ.

೩೩. ಒಡೆದ ಕನ್ನಡಿಯಲ್ಲಿ ಮುಖ ನೋಡಬಾರದು.

೩೪. ನಾಲಗೆಯಲ್ಲಿ ಮಚ್ಚೆ ಇದ್ದವರು ಹೇಳಿದಂತೆಯೇ ಆಗುತ್ತದೆ.

೩೫. ಹುಟ್ಟಿದ ದಿನ ತಲೆಗೂದಲು ತೆಗೆಯಬಾರದು.

೩೬. ಗಂಡಸರಿಗೆ ಪೊರಕೆ ತಾಗಿಸಬಾರದು

೩೭. ಎಡಗೈಯಿಂದ ಯಾವುದನ್ನು ಕೊಡಬಾರದು

೩೮. ಸೊಸೆಯಾದವಳು ಗಂಡನ, ಅತ್ತೆಯ, ಮಾವನ ಹೆಸರು ಹೇಳಬಾರದು.

೩೯. ಒಲೆ ಉರಿಯುತ್ತಿರುವಾಗ, ಸೌದೆಯನ್ನು ಕಾಲಿನಿಂದ ಒಳ ತಳ್ಳಬಾರದು.

**ಕೊನೆ ಟಿಪ್ಪಣಿಗಳು**

೦೧. ಕೋಟಗಾನಹಳ್ಳಿ ರಾಮಯ್ಯ, ಸಿಂದ್ ಮಾದಿಗರ ಸಂಸ್ಕೃತಿ, ಪು-೮೩

೦೨. ಡಾ.ಎಂ.ಬೈರೇಗೌಡ, ಇರುಳಿಗರು ಜಾನಪದ ಅಧ್ಯಯನ, ಪು-೬೨

೦೩. ದೇಜಗೌ, ಜಾನಪದ ಅಧ್ಯಯನ ಪು-೩೪೫

೦೪. ಮಾ.ಭ.ಪೆರ್ಲ, ೨೦೦೦, ಪು-೨

೦೫. ಪುರುಷೋತ್ತಮ ಬಿಮಲೆ, ಕರಾವಳಿ ಜಾನಪದ, ಪು-೧೦೦

೦೬. ಎಂ.ನಂಜಮ್ಮಣ್ಣಿ, ೧೯೮೨, ಪು-೩೦೭

* * * * *

ಅಧ್ಯಾಯ - ೪

# ಆರಾಧನೆಗಳು

**ಆರಾಧನೆಗಳು**

ಆಚರಣೆ ಸಂಪ್ರದಾಯಗಳು ಒಂದು ಸಮುದಾಯದ ಸಮ್ಮತಿ ಪಡೆದ ತಲೆ ತಲಾಂತರದಿಂದ ಅನುಸರಿಸಲಾಗುತ್ತಿರುವ ಒಂದು ನಡಾವಳಿಯಾಗಿದೆ. ಮಾನವನ ಜೀವನ ವ್ಯವಸ್ಥಿತವಾಗಿ ರೂಪುಗೊಳ್ಳುವಲ್ಲಿ ಸಂಪ್ರದಾಯಗಳು, ಆಚರಣೆಗಳು ಮಹತ್ವದ ಪಾತ್ರ ವಹಿಸುತ್ತವೆ. ಮಾನವ ತನ್ನ ಅನುಭವಗಳಿಂದ, ನಂಬಿಕೆಗಳಿಂದ ಋತುಮಾನಕ್ಕನುಗುಣವಾದ ನೂರಾರು ಸಂಪ್ರದಾಯಗಳನ್ನು ತನ್ನ ಬದುಕಿನಲ್ಲಿ ಅಳವಡಿಸುತ್ತಾ ಬಂದಿದ್ದಾನೆ. ''ನಂಬಿಕೆಗಳೇ ಸಂಪ್ರದಾಯಗಳಿಗೆ ಮೂಲ. ಅವುಗಳ ಗರ್ಭದಲ್ಲಿ ಭ್ರೂಣಾವಸ್ಥೆಯಲ್ಲಿ ಸುಪ್ತಗೊಂಡಿರುವ ಸಂಪ್ರದಾಯಗಳು ಕಾಲಕ್ರಮೇಣ ಅನುಕೂಲ ಸನ್ನಿವೇಶಗಳೊದಗಿದ ಕೂಡಲೇ ಮೂರ್ತಿಮತ್ತಾಗಿ ಪ್ರಕಟಗೊಳ್ಳುತ್ತವೆ. ಮನುಕುಲದ ಶ್ರೇಯಸ್ಸಿಗಾಗಿ ಅತ್ಯವಶ್ಯವೆಂದು ಎಣಿಕೆಗೊಂಡಿರುವ ನಂಬಿಕೆಗಳೇ ಸಂಪ್ರದಾಯಗಳಾಗಿ ವಿಧಿನಿಷೇಧಗಳಾಗಿ ಉಪಾಸನೆಗಳಾಗಿ ಸಾಕಾರತೆ ಪಡೆಯುತ್ತವೆ. ಯಾವುದಾದರೂ ಸಿದ್ಧಿಯನ್ನು ಪಡೆಯಬೇಕಾದರೆ ಯಾವಾಗ ಏನು ಮಾಡಬೇಕೆಂಬುದೇ ಸಂಪ್ರದಾಯವಾಗುತ್ತದೆ. ಹೇಗೆ ಮಾಡಬೇಕೆಂಬುದು ಉಪಾಸನೆಯಾಗುತ್ತದೆ. ಉಪಾಸನೆಗೆ ಪೋಷಕವಾಗುವಂತೆ ಯಾವ ಕ್ರಿಯೆ ಅಥವಾ ಸಂಗತಿ ಗ್ರಾಹ್ಯ, ಯಾವುದು ತ್ಯಾಜ್ಯ ಎಂಬುದು ವಿಧಿ ನಿಷೇಧಗಳಾಗುತ್ತವೆ.''[9]

ಸಾಮಾನ್ಯವಾಗಿ ಎಲ್ಲಾ ಸಮುದಾಯಗಳು ಆಚರಣೆ ಸಂಪ್ರದಾಯಗಳನ್ನು ಹೊಂದಿಕೊಂಡೇ ಬಂದಿವೆ. ಹುಟ್ಟು ಸಾವಿನ ಮಧ್ಯೆ ಬದುಕಿನ ಅನೇಕ ಸಂದರ್ಭಗಳಲ್ಲಿ ವಿಧಿ, ಸಂಪ್ರದಾಯ, ಸಂಸ್ಕಾರಗಳನ್ನು ಚಾಚೂ ತಪ್ಪದೆ ಆಚರಿಸುವ ಪರಂಪರೆ ಎಲ್ಲಾ ಸಮುದಾಯಗಳಲ್ಲೂ ಕಂಡುಬರುತ್ತದೆ. ''ಆಚರಣೆಗಳಲ್ಲಿ ಅಡಕಗೊಂಡ ಜನಪದ ಸಮಾಜದ ಸಮುದಾಯ ನಡವಳಿಕೆ ನೈತಿಕತೆಯ ಆಂತರಿಕ ಧ್ವನಿ ಅವರನ್ನು ಬಂಧಿಸಿದ ಅಮೂರ್ತ ಮಾದರಿಗಳು''[3] ಎಂಬ ಉಲ್ಲೇಖದಂತೆ ಈ ಆಚರಣೆ ಸಂಪ್ರದಾಯಗಳಿಲ್ಲದ ಬದುಕನ್ನು ಯಾವ ಸಮುದಾಯವೂ ಊಹಿಸಲಾರದು. ಸಂಪ್ರದಾಯ, ಆಚರಣೆಗಳ ಪಠ್ಯಗಳಲ್ಲಿ ವೈರುದ್ಯಗಳು ಕಂಡುಬಂದರೂ ಆಶಯಗಳು ಒಂದೇ ಆಗಿರುವುದು ಕಂಡುಬರುತ್ತದೆ.

ದಕ್ಷಿಣ ಕನ್ನಡ, ಉಡುಪಿ, ಕಾಸರಗೋಡು ಜಿಲ್ಲೆಗಳನ್ನು ಒಳಗೊಂಡ ತುಳುನಾಡನ್ನು ಭೌಗೋಳಿಕವಾಗಿ ಗಮನಿಸಿದಾಗ ಅಲ್ಲಿನ ಜನಪ್ರಿಯ ಜನಪದ ಧರ್ಮ ಮತ್ತು ಧಾರ್ಮಿಕ ಆಚರಣೆಗಳ ಪರಿಕಲ್ಪನೆ, ಸ್ವರೂಪ, ಉದ್ದೇಶಗಳನ್ನು ವಿಶ್ಲೇಷಿಸುವಾಗ ಪ್ರಮುಖವಾಗಿ ದೈವಾರಾಧನೆ, ನಾಗಾರಾಧನೆ, ಸಿರಿ ಆಚರಣೆಗಳನ್ನು ಗಮನಿಸಲೇಬೇಕು. ಒಂದು ರೀತಿಯಲ್ಲಿ ಈ ಆಚರಣೆಗಳು ಜಾತ್ಯಾತೀತವಾಗಿಯೂ ಕಂಡುಬರುತ್ತವೆ. ಇಲ್ಲಿನ ಅನೇಕ ದೈವಗಳ ಉತ್ಸವಗಳಲ್ಲಿ ಮತ್ತು 'ಶಿಷ್ಟ'ವೆಂದು ಬಿಂಬಿಸುವ ಧಾರ್ಮಿಕ ಜಾತ್ರೋತ್ಸವಗಳಲ್ಲಿ ಜಾತಿಯ ಮತದ ಎಲ್ಲೆ ಮೀರಿ ಒಗ್ಗಟ್ಟಾಗಿ ನಡೆಸಿಕೊಂಡು ಬರುವುದನ್ನು ಕಾಣುತ್ತೇವೆ. ಈ ಪ್ರದೇಶದ ಮರಾಟಿಗರ ಸಾಂಸ್ಕೃತಿಕ ಜಗತ್ತು ವಿಶಿಷ್ಟವಾದುದು. ತೀವ್ರಗತಿಯಲ್ಲಿ ನಾಡಿನ ಆಧುನಿಕ ಸಂಸ್ಕೃತಿಯೆಡೆಗೆ ಸಾಗುತ್ತಿರುವ ಮರಾಟಿ ಬುಡಕಟ್ಟು ಜನರ ಆಚರಣೆಗಳು ಆದಿಮ ಸಂಸ್ಕೃತಿಯ ಹಲವು ವಿವರಗಳನ್ನು ವಿಷದೀಕರಿಸುತ್ತವೆ. ಪ್ರಸ್ತುತ ಈ ಅಧ್ಯಾಯದಲ್ಲಿ ಮರಾಟಿಗರ ಧಾರ್ಮಿಕ ವಿಧಿ-ವಿಧಾನಗಳನ್ನು, ಸಂಪ್ರದಾಯಗಳನ್ನು, ಹಬ್ಬ-ಹರಿದಿನಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಒಂದರ್ಥದಲ್ಲಿ ಮರಾಟಿಗರಲ್ಲಿ ಕಂಡುಬರುವ ಸಂಪ್ರದಾಯ, ಆಚಾರ-ವಿಚಾರಗಳಲ್ಲಿ ತುಳುನಾಡಿನ ತುಳು ಸಂಸ್ಕೃತಿಯ ಅನೇಕ ಸಂಗತಿಗಳು ಮಿಳಿತಗೊಂಡಿವೆ. ಅನೇಕ ಸಮುದಾಯಗಳ ಸಂಸ್ಕೃತಿಗಳು ದಿನೇ ದಿನೇ ಹೊಸರೂಪ ಪಡೆದುಕೊಂಡು ಸಾಗುತ್ತಿರುವುದು ಕೂಡ ಕಂಡುಬರುತ್ತದೆ. ಇಂದಿನ ಸಂಕ್ರಮಣ ಸಂದರ್ಭದಲ್ಲಿ ಹೊಸ ರೂಪಗಳ ಪ್ರಕ್ರಿಯೆ ಅನಿವಾರ್ಯವೂ ಹೌದು.

### ೪.೧ ಸಾಂಸ್ಕೃತಿಕ ಅನನ್ಯತೆಯ ಸಂಕೇತ: ಗೋಂದೋಳು ಪೂಜೆ

ಗೋಂದೋಳು ಪೂಜೆ ಮರಾಟಿಗರ ಪ್ರಮುಖ ಆಚರಣೆಗಳಲ್ಲಿ ಒಂದು. ತುಳುನಾಡಿನಲ್ಲಿ ಮರಾಠಿ ಭಾಷೆಯನ್ನು ತಮ್ಮ ಮಾತೃಭಾಷೆಯಾಗಿಸಿಕೊಂಡಿರುವ ಅನೇಕ ಸಮುದಾಯಗಳು ಕಂಡುಬರುತ್ತವೆ. ಆದರೆ ಗೋಂದೋಳು ಪೂಜೆಯನ್ನು ಆಚರಿಸುವವರು ಮರಾಟಿಗರು ಮಾತ್ರ. ಹಾಗಾಗಿ ಗೋಂದೋಳು ಮರಾಟಿಗರ ಅನನ್ಯತೆಯ ಸಂಕೇತವೂ ಹೌದು. ಇದುವರೆಗೆ ಮರಾಟಿಗರ ಬಗೆಗಿನ ಅಧ್ಯಯನ-ಲೇಖನಗಳಲ್ಲಿ ಇವರ ಗೋಂದೋಳು ಆಚರಣೆಯೇ ಕೇಂದ್ರಬಿಂದು. ಈ ಪೂಜೆಯನ್ನು ದೇವಿ ಪೂಜೆ, ಮಹಮ್ಮಾಯಿ ಪೂಜೆ, ಅಮ್ನೂರು ಪೂಜೆ, ದುರ್ಗಾ ಪೂಜೆ ಎಂಬೆಲ್ಲಾ ಹೆಸರುಗಳಿಂದ ಕರೆಯುತ್ತಾರೆ. ಉಡುಪಿ ಜಿಲ್ಲೆಯ ಕಾರ್ಕಳ, ಉಡುಪಿ ತಾಲೂಕುಗಳಲ್ಲಿ ಮರಾಟಿಗರು ಊರಿನ ಸಮಸ್ತರ ಜತೆ ಸೇರಿ 'ಮಾರಿ ಗೋಂದೋಳು'[೩] ಪೂಜೆಯನ್ನು ಆಚರಿಸುವುದೂ ಇದೆ.

ಕರಾವಳಿಯ ಮರಾಟಿ ಸಮುದಾಯದ ಪರಿಚಯವೆಂದರೆ ಗೋಂದೋಳು ಪೂಜೆಯ ಪರಿಚಯ ಮಾಡಿದಷ್ಟೇ ಪ್ರಾಮುಖ್ಯತೆಯನ್ನು ಪಡೆದಿದೆ ಎಂಬುದನ್ನು ಲೇಖನಗಳ, ಸಾಮಗ್ರಿಗಳ ಮೂಲಕವೇ ತಿಳಿಯಬಹುದಾಗಿದೆ. ಮರಾಟಿಗರ ವಿಷಯವಿದ್ದಲ್ಲಿ ವಿಶಿಷ್ಟವಾದ ಜಾನಪದೀಯ ಆಚರಣೆ ಗೋಂದೋಳು ಸೇರಿಕೊಂಡಿರುತ್ತದೆ. ಗೋಂದೋಳು ಪೂಜೆಯನ್ನು ಕುರಿತು ಶ್ರೀ ಕೈತಂಜೆ ನರಸಿಂಹ ಭಟ್ಟರು ''ಮಹಾರಾಷ್ಟ್ರದಿಂದ ಹಲವಾರು ವರ್ಷಗಳ, ಹಿಂದೆ ದಕ್ಷಿಣದ ಈ ನಾಡಿಗೆ ವಲಸೆ ಬಂದು ನೆಲೆಸಿದ, ಮಹಾರಾಷ್ಟ್ರೀಯ ಜನಾಂಗವನ್ನೇ ನಾವಿಂದು 'ಮರಾಟಿ' 'ಮರಾಟ' ಅಥವಾ 'ನಾಯ್ಕ' ಎಂದು ಕರೆಯುತ್ತಿದ್ದೇವೆ'' ಎಂದು ವಿವರಿಸುತ್ತಾ 'ತುಂಗಾ ನದಿಯ ಉತ್ತರ ಭಾಗದಲ್ಲಿ ಕೀರ್ತಿಶೇಷರುಗಳಾದ ಸ್ವಾಮಿಗಳ ಸಮಾಧಿಗಳ ಸಮೀಪದಲ್ಲಿ 'ಕಾಳಭೈರವ'ನ ಸ್ಥಾನವಿದೆಯೆಂದು ಮಾರಾಟಿಗಳು

ಆ ಕಾಳಭೈರವನ ಹಾಗೂ 'ದೇವಿ'ಯ ಉಪಾಸಕರೆಂದೂ ತಿಳಿದುಬರುತ್ತದೆ. ತಮ್ಮ ಇಷ್ಟದೈವದ ಮೂರ್ತಿಗಳನ್ನು ತಾವು ದಕ್ಷಿಣದ ಈ ನಾಡಿಗೆ ಬರುವಾಗ ಮರಾಟಿಗಳು ತಂದಿರಬೇಕು. ಅಂದಿನ ಆ ದೇವತೆಗಳಿಗೆ ಸಲ್ಲತಕ್ಕ 'ಗೊಂದಲ ಪೂಜೆ'ಯು ನಮ್ಮೀನಾಡಿನಲ್ಲಿ ಆವಿರ್ಭವಿಸಿರಬೇಕು." ಎಂಬ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾ ಗೋಂದೋಳು ಪೂಜೆಯನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಗೋಂದೋಳು ಪೂಜೆಯ ಪರಿಚಯಾತ್ಮಕ ಮೊದಲ ಲೇಖನ ಎಂದು ಹೇಳಬೇಕು.

ಕನ್ನಡ ಜಾನಪದ ವಿಶ್ವಕೋಶದಲ್ಲಿ ಗೋಂದೋಳು ಪೂಜೆಯನ್ನು ಇಂದಿನ ಆಚರಣಾ ಕ್ರಮದಲ್ಲಿಯೇ ಪರಿಚಯಿಸಲಾಗಿದೆ. "ಶಕ್ತಿ ಉಪಾಸನೆಯ ಒಂದು ಆಚರಣೆ, ಮಹಾಮ್ಮಾಯಿ ಅಥವಾ ಅಂಬಾಭವಾನಿಗೆ ಸಲ್ಲುವ ಮಂಡಲಾಕಾರದ ಬಲಿಸಹಿತವಾದ ಒಂದು ಪೂಜೆ" ಎಂದು ಪರಿಚಯಿಸಿದ್ದಾರೆ.

ಗಣಪತಿ ಭಟ್.ಪಿ. ಅರಸಳಿಕೆ ಅವರು "ಗೋಂದೋಳು ಪೂಜೆಯನ್ನು ದಕ್ಷಿಣ ಕನ್ನಡ ಜಿಲ್ಲೆಯ ಮಾರಿಹಬ್ಬಕ್ಕೆ ಹೋಲಿಸಿದ್ದಾರೆ. ಗೋಂದೋಳು ಪೂಜೆಯ ದಕ್ಷಿಣ ಕನ್ನಡ ಜಿಲ್ಲೆಯ ಮರಾಠಿ ಜನಾಂಗ ಆಚರಿಸುವ ಕುಣಿತ ಸಂಧಿಗಳಿಂದ ಕೂಡಿದ ಮಹಮ್ಮಾಯಿ ಪೂಜೆ, ಮಾರಿಹಬ್ಬದ ಒಂದು ಭಿನ್ನರೂಪವಾಗಿ ಗೋಂದೋಳು ಕಾಣಿಸುತ್ತದೆ." ಎಂದು ತಿಳಿಸುತ್ತಾರೆ.

ಉಪ್ಪಂಗಳ ರಾಮಭಟ್ಟ ಅವರು ಗೋಂದೋಳು ಪೂಜೆಯನ್ನು ಮತ್ತು ಬಾಲೆಸಾಂತುವಿವನ್ನು ಸಂಕ್ಷಿಪ್ತ ಪರಿಚಯವನ್ನು ತಮ್ಮ ಲೇಖನದಲ್ಲಿ ನೀಡಿದ್ದಾರೆ. "ತಮ್ಮ ಆರಾಧ್ಯ ಧೈವವಾದ ಅಂಬಾಭವಾನಿಯ ಮುಂದೆ ಇಡೀ ರಾತ್ರಿ ಯಾವುದಾದರೊಂದು ಕಥೆಯನ್ನು ಹಾಡುತ್ತಾ, ಕುಣಿಯುತ್ತಾ, ಅಭಿನಯಿಸುತ್ತಾ ದೇವಿ ಸ್ತುತಿ ಮಾಡುತ್ತಾ ಬೆಳಕು ಹರಿಸುವುದೇ ಗೋಂದೋಳು ಪೂಜಾ ವಿಧಾನ." ಆದರೆ ಗೋಂದೋಳು ಪೂಜೆಯನ್ನು ನೋಡಿದಾಗ ಕೇವಲ ಬೆಳಕನ್ನು ಹರಿಸಿ ಕಾಲಹರಸಿ ಮಾಡುವುದೇ ಪೂಜೆಯ ಉದ್ದೇಶವಲ್ಲ. ವಿಧ ವಿಧದ ಪೂಜೆಗಳು ಸಾಂಗವಾಗಿ ಮುಗಿಯುವಾಗ ಬೆಳಕಾಗುತ್ತದೆ. ಕ್ಷೇತ್ರಕಾರ್ಯದ ಮುಖೇನ ಅನೇಕ ಮನೆಗಳಲ್ಲಿ ರಾತ್ರಿ ಸುಮಾರು ೧೨ ಗಂಟೆಗೆ ಮುಗಿದ ನಿದರ್ಶನಗಳೂ ಇವೆ. ಇಲ್ಲಿ ಎಲ್ಲಾ ರೀತಿಯ ಸೇವೆಗಳು ಭೈರವನಿಗೆ ಮತ್ತು ಮಹಮ್ಮಾಯಿಗೆ ಸಲ್ಲಬೇಕಾಗುವುದು. ಹಾಗೆಯೇ ಪೂಜಾರಿಗಳು ಕೂಡ ನಿಧಾನಗತಿಯಲ್ಲಿ ಪೂಜೆ ಮಾಡುವುದನ್ನು ಕಂಡುಕೊಳ್ಳಲಾಗಿದೆ.

ಅಶೋಕ ಆಳ್ವ ಅವರು ಮರಾಟಿಗರ ಗೋಂದೋಳು ಪೂಜೆಯನ್ನು ಮತ್ತು ಬಾಳೆಸಾಂತು ಆಚರಣೆಯನ್ನು ವಿವರಿಸಿದ್ದಾರೆ. ಅದನ್ನು ತಿರುಮಲೇಶ್ವರ ಭಟ್ಟ ಅವರು ಆಂಗ್ಲ ಭಾಷೆಗೂ ಅನುವಾದಿಸಿದ್ದಾರೆ.

ಡಾ.ವಸಂತಕುಮಾರ್ ತಾಳ್ತಜೆ ಅವರು 'ಕರಾವಳಿ ಮರಾಠಿ ಸಮಾಜ' ಒಂದು ಪರಿಚಯಾತ್ಮಕ ಪ್ರಬಂಧದಲ್ಲಿ 'ಗೋಂದೋಳು ಪೂಜೆಯು ಶಕ್ತಿ ದೇವತೆಗೆ ಅಗ್ನಿಯನ್ನು ಆಹಾರವನ್ನಾಗಿ ಕೊಡುವ ಆಚರಣೆಯಾಗಿದೆ' ಎಂದು ಹೇಳುತ್ತಾ ಇಡೀ ಆಚರಣೆಯು ವಿವರವಾದ ಅಧ್ಯಯನವನ್ನು ಅಪೇಕ್ಷಿಸುತ್ತದೆ ಎಂದು ಅಭಿಪ್ರಾಯಪಡುತ್ತಾರೆ.

ಹೀಗೆ ಗೋಂದೋಳು ಆಚರಣೆಯ ಬಗೆಗೆ ಪರಿಚಯಾತ್ಮಕ ಲೇಖನಗಳು ನಮಗೆ ಸಿಗುತ್ತವೆ. ಈವರೆಗೆ ಗೋಂದೋಳು ಆಚರಣೆಯ ಬಗೆಗೆ ಎರಡು ಎಂ.ಫಿಲ್ ಪ್ರೌಢಪ್ರಬಂಧಗಳನ್ನು ಸಲ್ಲಿಸಲಾಗಿದೆ. ೨೦೦೨ರಲ್ಲಿ

ಕನ್ನಡ ವಿಶ್ವವಿದ್ಯಾಲಯಕ್ಕೆ ಮೋಹನ್.ಎಸ್.ಅವರು ಸಲ್ಲಿಸಿದ "ತುಳುನಾಡಿನ ಗೋಂದೋಳು ಪೂಜೆ" ಹಾಗೆಯೇ ಮುಂಬಯಿ ವಿಶ್ವವಿದ್ಯಾಲಕ್ಕೆ ಸಂಜೀವ ನಾಯ್ಕ ಅವರು ೨೦೦೪ರಲ್ಲಿ "ಕರಾವಳಿಯ ಗೋಂದೋಳು ಆಚರಣೆ" ಎಂಬ ವಿಷಯದ ಕುರಿತು ಪೌಢಪ್ರಬಂಧವನ್ನು ಸಲ್ಲಿಸಿದ್ದಾರೆ. ಇವೆರಡೂ ಅಪ್ರಕಟಿತ ಪ್ರಬಂಧಗಳಾಗಿವೆ.

**ಇತಿಹಾಸ ಮತ್ತು 'ಗೋಂದೋಳು' ಶಬ್ಧದ ವ್ಯುತ್ಪತ್ತಿ**

ಉತ್ತರ ಕರ್ನಾಟಕದಲ್ಲಿ 'ಗೊಂದಲಿಗ' ಜಾತಿ ಸೂಚಕ ಪದವಾಗಿದೆ. ಗೊಂದಲಿಗರು ಅಂಬಾಭವಾನಿಯ ಹೆಸರಿನಲ್ಲಿ 'ಗೊಂದಲ ಹಾಕುವುದು' ಎಂಬ ಆಚರಣೆಯನ್ನು ಮಾಡುತ್ತಾರೆ. "ಪ್ರಾಚೀನ ಗ್ರಂಥಗಳಾದ ಸಂಗೀತ ರತ್ನಾಕರ, ನೃತ್ಯ ರತ್ನಾಕರ ಮೊದಲಾದವುಗಳಲ್ಲಿ ಗೊಂದಲೀ ನೃತ್ಯ, ಗೌಂಡಲೇ, ಗುಂಡಲೀ, ಗೊಂಡಲೇ ಮತ್ತು ಕುಂಡಲೀ ಇತ್ಯಾದಿ ಪದಗಳು ಕಂಡುಬರುತ್ತವೆ.[೪]

ಗೊಂದಲ ಅರ್ಥಕ್ಕೆ ಪ್ರಾಚೀನತೆಯನ್ನು ಜ್ಞಾತಿ ಪದಕೋಶಗಳಲ್ಲಿ ಚೆನ್ನಾಗಿ ತಿಳಿಯಲಾಗಿದೆ. ಗೊಂದಲ ಹಾಕುವ ವಿಧಿ-ವಿಧಾನಗಳನ್ನು ಸ್ಕಂದ ಪುರಾಣದಲ್ಲಿ ಹೇಳಿದೆ.

ರೇಣುಕಾ ಮಹಾತ್ಮೆಯಲ್ಲಿ ಗೊಂದಲವನ್ನು ಕುರಿತು ನೃತ್ಯ ವಿಧಾನ ಎಂಬುದಾಗಿ ತಿಳಿಸಲಾಗಿದೆ ಮತ್ತು ವರ್ಣಿಸಲ್ಪಟ್ಟಿದೆ. ಮಹಾರಾಷ್ಟ್ರದಲ್ಲಿ ಮರಾಠಿ ಕಾವ್ಯ ಸ್ವರೂಪಗಳಲ್ಲಿ ಶಾಹಿರೀ ಕಾವ್ಯವೂ ಒಂದು. (ಕಾಲ ಕ್ರಿ.ಶ. ಸುಮಾರು ೧೬೫೦-೧೮೧೮) ಈ ಸಮಯದಲ್ಲಿ ಗೊಂಧಳ ಹಾಕಿಸುವುದು ಎಂಬ ಒಂದು ಪ್ರಕಾರವಿತ್ತು.[೫] ಕಾಲ ಕ್ರಮೇಣ ಅದು 'ಗೊಂದಲ' ಎಂದಾಗಿರಲು ಸಾಧ್ಯವಿದೆ.

ತುಳು-ಇಂಗ್ಲೀಷ್ ಕೋಶದಲ್ಲಿ ಗೊಂದಳ Gondal an also ಗೋಂದೋಳು, worship of Goddess Durga in falfilment of a row performed by decorating Her image indoors and by dancing is outer court arround a burning lamp, the dancer singing and carring tourehes in their hands. The leader of the toop is calld a parasuram.[೬] ಎಂದು ವಿವರಿಸಿದೆ.

ತುಳು ನಿಘಂಟು ಗೋಂದೋಳು ಬಗ್ಗೆ "ಗೋಂದೊಳು/ ಗೋಂದೋಳು/ ಗೋಂದಳ/ ಗೋಂದೊಲು/ ಗೋಂದ್ಲ. ದಕ್ಷಿಣ ಕನ್ನಡದ ಶಕ್ತಿಪೂಜೆಯ ಒಂದು ವಿಧ; ವಿಶೇಷವಾಗಿ ಮರಾಠಿಗರಲ್ಲಿ ಪ್ರಚಾರದಲ್ಲಿರುವ ದೇವೀ ಪೂಜೆ (ಈ ಆಚರಣೆಯಲ್ಲಿ ಕೆಲವರು ಹಂದಿಯನ್ನು ಬಲಿ ಕೊಡುವುದು, ಸಾಮೂಹಿಕವಾಗಿ ಭಜನೆಪದ ಹಾಡಿ ಕುಣಿಯುವುದು ಮೊದಲಾದವುಗಳನ್ನು ಮಾಡುತ್ತಾರೆ.(A form of the worship of the Mother Goddess elspecially by the Maratiga cammunity of Dakshina kannada disctrict) pig sacrifice as well as cammunity singing and dancing in praise of the Goddess as part of ritual are observed.[೭] ಇಲ್ಲಿ ಗೋಂದೋಳು ಪೂಜೆಯನ್ನು ವಿವರಿಸಿದ್ದಾರೆ.

ಮಹಾರಾಷ್ಟ್ರದಿಂದ ವಲಸೆ ಬಂದು ದಕ್ಷಿಣ ಕನ್ನಡ ಮತ್ತು ಕಾಸರಗೋಡು ಜಿಲ್ಲೆಗಳಲ್ಲಿ ನೆಲೆಸಿರುವ ಕರ್ಹಾಡ ಬ್ರಾಹ್ಮಣರು 'ಗೋಂದಾಲ್' ಎಂಬ ಪೂಜೆಯಲ್ಲಿ ದೇವೀ ಮೂರ್ತಿಯ ಸುತ್ತ ಹಾಡುತ್ತಾ ಕುಣಿಯುತ್ತಾ ಪೂಜೆ ಮಾಡುವುದಕ್ಕೆ ಪ್ರಾಮುಖ್ಯತೆ ಕೊಡುತ್ತಿದ್ದರು.[೮] ಇಂದೂ ಕಾಸರಗೋಡು ಪರಿಸರದಲ್ಲಿರುವ ಅನೇಕ ಕರ್ಹಾಡ

ಬ್ರಾಹ್ಮಣರು ದೇವಿಯ ಪೂಜೆ ಮಾಡುವುದು ಕಂಡುಬರುತ್ತದೆ. ಅಂತೆಯೇ ಕರ್ಹಾಡ ಬ್ರಾಹ್ಮಣರ ಮನೆ ಮಾತು ಮರಾಠಿ ಎಂಬುದು ಇಲ್ಲಿ ಉಲ್ಲೇಖನೀಯ.

ಹಿನ್ನೆಲೆ ವಾದ್ಯಗಳ ಸಹಿತ ದೊಡ್ಡ ದನಿಯಲ್ಲಿ ಕಥೆಯನ್ನು ಹೇಳುವುದರ ಮೂಲಕ ಗೊಂದಲವೆಬ್ಬಿಸುವುದರಿಂದ ಗೊಂದಲಿಗರ ಮೇಳ ಎಂಬ ಹೆಸರು ಬಂದಿರಬಹುದೆಂದು '' ಪೂವಪ್ಪ ಕಣಿಯೂರು ಅವರ ಅಭಿಪ್ರಾಯ ಸರಿಯಾದುದು ಎಂದು ಹೇಳಲು ಸಾಕ್ಷಿಗಳ ಕೊರತೆಯಿದೆ.

ಇಲ್ಲಿ ಈ ಮೊದಲೇ ವಿಷದಪಡಿಸಿರುವಂತೆ ಇಲ್ಲಿ ಯಾವುದೇ ರೀತಿಯ ಗೊಂದಲಗಳಿಗೆ ಅವಕಾಶವಿಲ್ಲ. ಅಧ್ಯಯನಕ್ಕೆ ಒಳಪಡಿಸಿದಾಗ ಸ್ಪಷ್ಟವಾಗಿ ಕಂಡುಬರುವುದೇನೆಂದರೆ ವಿವಿಧ ರೀತಿಯ ಆರತಿ ಸೇವೆಗಳೊಂದಿಗೆ ದೇವಿಯನ್ನು ಸಂತೃಪ್ತಿ ಪಡಿಸುವುದು ಒಂದು ಕಡೆಯಾದರೆ ಇತರ ಭಕ್ತರು ದೇವಿಯನ್ನು ಭಜಿಸುವ ಮೂಲಕ ತಮ್ಮ ಭಕ್ತಿಯನ್ನು ಕೇಂದ್ರೀಕರಿಸುತ್ತಾರೆ.

ಗಣ್+ದಲ್=ಗೋಂದಾಲ್, ಗೋಂದೋಳು ಕ್ಷೇತ್ರಕಾರ್ಯದ ಮೂಲಕ ಅನೇಕ ಹಿರಿ ಕಿರಿಯ ವಕ್ತೃಗಳನ್ನು ಸಂದರ್ಶಿಸಿ,ಗೋಂದೋಳು ಪೂಜೆಯನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಈ ಮೇಲಿನ ತರ್ಕಕ್ಕೆ ಪುಷ್ಟಿದೊರೆಯುತ್ತದೆ.[೧೦] (ಮೋಹನ್.ಎಸ್, ತುಳುನಾಡಿನ ಗೋಂದೋಳು ಪೂಜೆ ಅಪ್ರಕಟಿತ ಎಂ.ಫಿಲ್[೧]) ಮಹಮ್ಮಾಯಿ (ದೇವಿ, ದುರ್ಗೆ, ಅಮ್ಮೂರು) ಯ ಜತೆಗಿರುವ ಗಣಗಳ ಸಮೂಹಕ್ಕೆ ಅಸುರಕ್ರಿಯೆಯ ಮೂಲಕ ಮತ್ತು ಮಹಮ್ಮಾಯಿಗೆ ದೇವಕ್ರಿಯೆಯ ಮೂಲಕ ಮಾಡುವ ಸೇವೆಯೇ ಗೋಂದೋಳು ಸೇವೆ. ಇಲ್ಲಿ ದೇವಕ್ರಿಯೆ ದೇವಿಗೆ ಸಂದರೆ ಭೈರವನಿಗೆ ಅಸುರ ಕ್ರಿಯೆ ಸಲ್ಲುತ್ತದೆ. ಹಾಗೆಯೇ ಇನ್ನಿತರ ಗಣಗಳೂ ಸೇರಿಕೊಂಡಿರುವುದು ಕಂಡುಬರುತ್ತದೆ. ಗಣ್+ದಲ್=ಗೋಂದಾಲ್, ಗೋಂದೋಳು ಎಂಬುದು ಅಧ್ಯಯನದಿಂದ ಕಂಡುಕೊಂಡ ನಿಷ್ಪತ್ತಿಯಾಗಿದೆ. ಇಲ್ಲಿ ದೇವಿ ಮಹಾಮ್ಮಾಯಿಯೊಂದಿಗೆ ಕಾಳಭೈರವನಿರುತ್ತಾನೆ. ಜಿಲ್ಲೆಯ ಸುಳ್ಯ ಪರಿಸರದಲ್ಲಿ ಕೆಲವೊಂದು ಬನಗಳಲ್ಲಿ ಭೈರವನ ಜೊತೆ ಗುಳಿಗನಿಗೂ ಸೇವೆ ಸಲ್ಲುತ್ತದೆ. ಈ ರೀತಿಯಾಗಿ ಗಣಗಳ ಗುಂಪು ಅಲ್ಲಿರುವುದನ್ನು ಕಾಣಬಹುದು. ಉಡುಪಿ ಆರ್ ಆರ್ ಸಿ ಯ ಜಾನಪದ ಸಂಶೋಧಕರಾದ ಎಸ್.ಎ.ಕೃಷ್ಣಯ್ಯ ಅವರ ಅಭಿಪ್ರಾಯ ಕೂಡ ಇದೇ ಆಗಿದೆ.

**ಆಚರಣೆಯ ಹಿನ್ನೆಲೆ**

ಗೋಂದೋಳು ಪೂಜೆಯ ಹಿನ್ನಲೆ ಸಂಬಂಧಿಸಿದಂತೆ ಕೆಲವು ಐತಿಹ್ಯಗಳು ದೊರಕುತ್ತವೆ. ಜಿಲ್ಲೆಯ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಜನಪದ ಕಥೆಯ ಸಾರಾಂಶ ಹೀಗಿದೆ.

ಒಂದಾನೊಂದು ಕಾಲದಲ್ಲಿ ಪ್ರಕೃತಿಯ ವೈಪರೀತ್ಯದಿಂದ ಬಿರುಗಾಳಿ ಬಂದು ಮನೆ-ಮಠ, ಬೆಳೆ-ನೆಲೆಗಳೆಲ್ಲಾ ಸರ್ವನಾಶವಾಯಿತು. ಅಸಂಖ್ಯಾತ ಜನರು ಮನೆ ಮಠ ಕಳೆದುಕೊಂಡು ಪ್ರಾಣ ತೆತ್ತ ಸಂದರ್ಭದಲ್ಲಿ ಓರ್ವ ಮರಾಟಿಗನು ಬದುಕುಳಿದಿದ್ದನು. ಬಂಧು ಬಳಗ-ಭೂಮಿ ಮನೆ, ಬಿಟ್ಟು ತನ್ನ ಸರ್ವಸ್ವವನ್ನು ಕಳೆದುಕೊಂಡ ಆತನು ಊರು ಬಿಟ್ಟು ಬಲುದೂರ ಸಾಗುತ್ತಾನೆ.

ನಡೆಯುತ್ತಾ ನಡೆಯುತ್ತಾ ಮುಂದೆ ಸಾಗುತ್ತಿದ್ದಂತೆ ಓರ್ವ ಶೇಂದಿ (ಕಳ್ಳು) ಸಂಗ್ರಹಗಾರನು (ತುಳುನಾಡಿನ ಬಿಲ್ಲವ ಸಮುದಾಯ) ಎದುರುಗೊಳ್ಳುತ್ತಾನೆ. ಹಸಿವೆ ನೀರಡಿಕೆಯಿಂದ ಬಳಲುತ್ತಿದ್ದ ಮರಾಟಿಗನು ಬಿಲ್ಲವನನ್ನು ಉದ್ದೇಶಿಸಿ "ಬಹಳ ಹಸಿವೆ, ಬಾಯಾರಿಕೆ ಆಗಿದೆ. ಏನಾದರೂ ಇದ್ದರೆ ಕೊಡು" ಎಂದು ಭಿನ್ನವಿಸಿದಾಗ ಬಿಲ್ಲವನು ತನ್ನ ಮಡಕೆ (ತುಳು: ಮುಗಾಯಿ ಕುದುಪೆ, ಕುಜಳಿ) ಯಲ್ಲಿದ್ದ ಶೇಂದಿಯನ್ನು ಮರಾಟಿಗನ ಕೈಗಿಟ್ಟು ಮುಂದೆ ಸಾಗುತ್ತಾನೆ. ಮರಾಟಿಗನು ಮುಂದೆ ಸಾಗಿದಂತೆಲ್ಲಾ ಮಡಕೆಯಲ್ಲಿದ್ದ ಶೇಂದಿಯನ್ನು ಕುಡಿಯುತ್ತಾ ತನ್ನ ಹಸಿವು ನೀರಡಿಕೆಯನ್ನು ನೀಗಿಸಿಕೊಳ್ಳುತ್ತಾನೆ. ಶೇಂದಿ ಕುಡಿತದಿಂದ ಅಮಲೇರಿದರೂ ನಿಧಾನವಾಗಿ ಮುಂದೆ ಸಾಗಿದಾಗ ಅವನ ಬಲಗಾಲಿನ ದೊಡ್ಡ ಬೆರಳಿಗೆ ದಾರಿಯ ಕಲ್ಲು ಬಡಿದು ಮುಗ್ಗರಿಸುತ್ತಾನೆ. ಏನಾಗುತ್ತಿದೆ ಎನ್ನುವಷ್ಟರಲ್ಲಿ ಆತನ ಎದುರು ಓರ್ವ ನಗ್ನ ಸ್ತ್ರೀ ರೂಪಕಂಡು ಆಶ್ಚರ್ಯಗೊಳ್ಳುತ್ತಾನೆ. ಭಯದಿಂದ ನಿಂತಿರಲು "ನೀನು ನನ್ನನ್ನು ಪೂಜಿಸಬೇಕು" ಎಂದು ಆಗಂತುಕ ಸ್ತ್ರೀ ಹೇಳುತ್ತಾಳೆ. ಮರಾಟಿಗನು ನಾನು ಏನೂ ಇಲ್ಲದ ನಿರ್ಗತಿಕ ಯಾವುದೇ ಪರಿಕರಗಳಿಲ್ಲದೆ ನಾನು ಯಾವ ರೀತಿಯಿಂದ ಪೂಜಿಸಲಿ ಎಂದು ಪ್ರಾರ್ಥಿಸುತ್ತಾನೆ. ನಿನ್ನ ಮಡಕೆಯಲ್ಲಿರುವ ಶೇಂದಿಯನ್ನು ನನ್ನ ಪೂಜೆಗೆ ಬಳಸು. ಹತ್ತಿರದಲ್ಲಿರುವ ನೆಲ್ಲಿಕಾಯಿ ಮರದ ಕೆಳಗೆ ನನಗೆ ನೈವೇದ್ಯ ಬಡಿಸಬೇಕು. ಹೀಗೆ ಮುಂದೆ ಸಾಗಿದರೆ ಕೆಲವು ಪರಿಕರಗಳು ನಿನಗೆ ದೊರಕುವುದು. ಅಂತೆಯೇ ಹತ್ತುಕಾಲಿನ ಜೀವಿಯ ನೈವೇದ್ಯ ಅರ್ಪಿಸಬೇಕು ನನಗೆ" ಎಂದು ಹೇಳಿದಾಗ ಮರಾಟಿಗನು "ನನಗೆ ಹತ್ತು ಕಾಲಿನ ಜೀವಿಯ ಬಗ್ಗೆ ತಿಳಿದಿಲ್ಲ" ಎಂದು ಭಿನ್ನವಿಸುತ್ತಾನೆ. "ಹತ್ತಿರದ ತೋಡುಗಳಲ್ಲಿರುವ ಕಲ್ಲುಗಳನ್ನು ಸರಿಸಿದರೆ ಸಿಗುತ್ತದೆ. ಹಾಗೆಯೇ ನನಗೆ ಹಿಂಬದಿಯಿಂದ ಪೂಜೆ ಮಾಡಬೇಕು ಇದರಿಂದ ನಿನ್ನ ಸರ್ವತೋಮುಖ ಉದ್ಧಾರವಾಗುವುದು" ಎಂದು ಹೇಳಿ ಸ್ತ್ರೀರೂಪ ಅದೃಶ್ಯವಾಗುತ್ತದೆ.

ಮರಾಟಿಗನು ತೋಡಿನ ಕಲ್ಲುಗಳನ್ನು ಸರಿಸಿ ನೋಡಿದಾಗ ಏಡಿ ದೊರಕುತ್ತದೆ. ದೂರದಲ್ಲಿ ದೊರೆತಂತಹ ಪಾತ್ರ ಸಲಕರಣೆಗಳನ್ನು ಉಪಯೋಗಿಸಿಕೊಂಡು ನೆಲ್ಲಿಕಾಯಿ ಮರದ ಬುಡದಲ್ಲಿ ನೈವೇದ್ಯ ಅರ್ಪಿಸುತ್ತಾನೆ. ನೆಲ್ಲಿಕಾಯಿ ಮರದ ಎಲೆ ಕಡ್ಡಿ ಕಸ ಬೀಳದಂತೆ ಒಂದು ಬಟ್ಟೆಯನ್ನು ಕಟ್ಟುತ್ತಾನೆ. ಪ್ರತಿವರ್ಷ ಈ ರೀತಿಯ ಪೂಜೆ ಸಲ್ಲಿಸುತ್ತಾ ಅಭಿವೃದ್ಧಿಯನ್ನು ಕಾಣುತ್ತಾನೆ.

ಇಂದಿಗೂ ಗೋಂದೋಳು ಪೂಜೆಯ ಸಂದರ್ಭದಲ್ಲಿ ಪೂಜೆ ನಡೆಯುವ ಸ್ಥಳದ ಮೇಲ್ಗಡೆ ಒಂದು ವಸ್ತ್ರವನ್ನು ಕಟ್ಟುತ್ತಾರೆ. ಹಿಂದಿನ ಕಾಲದಲ್ಲಿ ಪೂಜೆ ನಡೆಯುವ ಸಂದರ್ಭದಲ್ಲಿ ಊರಿನ ಬಿಲ್ಲವನೊಬ್ಬ ಶೇಂದಿ ತಂದು ಕೊಡುವ ಸಂಪ್ರದಾಯವಿತ್ತು ಎಂದು ವಕ್ತೃಗಳು ಹೇಳುತ್ತಾರೆ. ಇಂದಿಗೂ ಪೂಜೆಯ ಆದಿಯಿಂದ ಅಂತ್ಯದವರೆಗೆ ಮಡಕೆಯೊಂದರಲ್ಲಿ ಶೇಂದಿ ಇರಲೇಬೇಕು. ಹಾಗೆಯೇ 'ಗದ್ದಿಗೆ'ಗೆ ಹಿಂಬದಿಯಿಂದ ಪೂಜೆ ಸಲ್ಲಿಸಲಾಗುತ್ತದೆ.

**ಐತಿಹ್ಯ ೨**

"ಶ್ರೀದೇವಿ ಮಹಮ್ಮಾಯಿ ಹೇಗೆ ಉದ್ಭವಿಸಿದಳು ಎಂದು ಎಲ್ಲರ ಮನಸ್ಸಿನಲ್ಲೂ ಮೂಡಿ ಬಂತು. ಧರ್ಮ ನಾಶವಾಗಿ ಅಧರ್ಮ ಮೆರೆಯುವ ಸಮಯ, ಆಚಾರ ವಿಚಾರಗಳಿಲ್ಲ. ಎಲ್ಲಿ ನೋಡಿದರೆ ಕೊಲೆ ದರೋಡೆಗಳು, ಅತ್ಯಾಚಾರ, ಅನಾಚಾರಗಳು ನಡೆಯುತ್ತಿದ್ದವು. ಮಳೆ ಬೆಳೆ ಇಲ್ಲ. ಅಲ್ಲಲ್ಲಿ ಅಲ್ಪ ಸ್ವಲ್ಪ ಬೆಳೆಸಿದರೂ ಕಾಡು

ಮೃಗಗಳ ಹಾವಳಿಯಿಂದ ನಾಶವಾಗುತ್ತಿತ್ತು. ಸರಿಯಾಗಿ ಮೈ ಅಡಗಿಸುವ ಸಾಧನಗಳಿರಲಿಲ್ಲ. ಸ್ವತಃ ನಿಯಮಗಳಿರಲಿಲ್ಲ. ಆಚಾರ ವಿಚಾರಗಳಿರಲಿಲ್ಲ ಈ ಸಂದರ್ಭದಲ್ಲಿ ಆದಿಮಾಯೆಯ ಉದ್ಭವವಾಯಿತು. ಸಜ್ಜನರ ಮನಸ್ಸು ಪುಳಕವಾಯಿತು.

ಆದಿಮಾಯೆಯು ಸಜ್ಜನರ ಏಳಿಗೆಗೆ ಒಂದೊಂದು ಕಡೆಯಲ್ಲಿ ಒಂದೊಂದು ಅವತಾರದಿಂದ ಸಂಚರಿಸಿದಳು. ಮನುಷ್ಯರ ಕೆಟ್ಟ ಮನಸ್ಸುಗಳನ್ನು ಪರಿವರ್ತಿಸುತ್ತ ಹತ್ತು ಹಲವು ದೇವಾದಿಗಳನ್ನು ಸ್ವೀಕರಿಸುತ್ತಾಳೆ. ಎಲ್ಲಿ ಸಂಚಾರ ಮಾಡಿ ನೋಡಿದರೂ ಸೇವೆಗಳು ತೃಪ್ತಿಯಾಗಲೇ ಇಲ್ಲ. ಹದಿನೆಂಟು ಅವತಾರಗಳಲ್ಲಿ ಹದಿನೆಂಟನೇ ಸೇವೆ ಸ್ವೀಕರಿಸುತ್ತಾಳೆ. ಅದು ಕುಮೇರು ಕುಲ್ವಾಡಿ ಮರಾಟ ಕೊಟ್ಟ ಸೇವೆ. ಈ ಸೇವೆಯಿಂದ ತೃಪ್ತಳಾಗುತ್ತಾಳೆ. ಇಲ್ಲಿ ಕಾಶಿ ಕಾಲ ಭೈರವನ ಸೇವೆ ಕೂಡ ಮಾಡುತ್ತಾನೆ. ರಾತ್ರಿ ಶ್ರೀದೇವಿ ಮಹಾಮ್ಮಾಯಿ ಸೇವೆಯಲ್ಲೂ ಭೈರವನಿಗೆ ಅಗ್ರಸ್ಥಾನ. ಈಶ್ವರನೇ ಭೈರವನಾಗಿ ಬಂದಿದ್ದಾನೆಂಬುದು ಊಹೆ. ದೇವಿ ಸನ್ನಿದಿಯಲ್ಲಿ ಬಲಭಾಗದಲ್ಲಿ ಭೈರವನಿದ್ದು ಸೇವೆ ಸ್ವೀಕರಿಸುತ್ತಾನೆ.

ದೇವಿಗೆ ಅಗ್ನಿ, ಕರ್ಪೂರ, ಧೂಪ, ದೀಪಗಳೇ ಸಾಕಾಗುತ್ತವೆ. ಇವುಗಳ ಸೇವನೆಯಿಂದ ತೃಪ್ತಳಾಗುತ್ತಾಳೆ. ಆದರೆ ದೇವಿಧೂತರಿಗೆ ಹಾಗಲ್ಲ, ಅವರಿಗೆ ರಕ್ತ ತರ್ಪಣವೇ ಮುಖ್ಯವಾದದ್ದು. ಏಳು ಸಮುದ್ರಗಳ ಮುಂದೆ ಶಂಕಾಸುರನೆಂಬ ರಕ್ಕಸನಿದ್ದನು. ಅವನು ತುಂಬಾ ಅನುಚರರೊಡನೆ ಮೆರೆಯುತ್ತಿದ್ದನು. ಇವನ ಉಪಟಳ ತಾಳಲಾರದೆ ದೇವಿಯು ಕುಮೇರು ಕುಲ್ವಾಡಿ ಮರಾಟಿಗ ಮಾಡುವಂತಹ ದೇವಿ ಪೂಜೆಗೆ ಸಹಕರಿಸುತ್ತಾಳೆ. ಕೋಳಿ ರೂಪದಲ್ಲಿ ಶಂಖಾಸುರನ ಅನುಚರರನ್ನು ವಧಿಸುತ್ತಾಳೆ. ಪೂಜೆ ಮಾಡುವಾಗ ಇದನ್ನು ಕೋಳಿ ಕೊಯ್ಯುವುದೆಂಬ ನಿಯಮವಿರುವುದನ್ನು ಕಾಣಬಹುದು, ಹೀಗೆ ಅವನ ಅನುಚರರ ಸಂಹಾರವಾಗುತ್ತದೆ. ಇದನ್ನು ತಿಳಿದ ಶಂಕಾಸುರನು ಹಂದಿ ರೂಪ ತಾಳುತ್ತಾನೆ. ಇವನನ್ನು ಶ್ರೀದೇವಿಯೇ ಸಂಹರಿಸುತ್ತಾಳೆ. ಪೂಜಾ ಸಂಪ್ರದಾಯದಲ್ಲಿ ಹಂದಿ ಬಲಿಕೊಡುವ ಸಂಪ್ರದಾಯ ಈ ರೀತಿಯಾಗಿ ಬಂದಿದೆ. ಅವನು ಕೇಳಿಕೆಯಂತೆ ದೇವಿಯು ತನ್ನನ್ನು 'ಶಾಂಭವಿ' ಎಂದು ನಾಮಕರಣ ಮಾಡಿಕೊಳ್ಳುತ್ತಾಳೆ. ಹಂದಿ ಮತ್ತು ಕೋಳಿಗಳ ತಲೆ ಒಳಗೆ ಬಿದ್ದು ಶರೀರ ಹೊರಗೆ ಬೀಳುತ್ತದೆ. ಪದ್ಧತಿ ಪ್ರಕಾರ ಕೋಳಿ ಮತ್ತು ಹಂದಿಯ ತಲೆ ದೇವಿಯ ಪಾದದಡಿಯಲ್ಲಿರುತ್ತದೆ.

ಈ ದೈತ್ಯನ ಸಂಹಾರದ ನಂತರ ಇವುಗಳ ಶರೀರದ ವಸ್ತುಗಳನ್ನು ತಾನು ಉಪಯೋಗಿಸುತ್ತಾಳೆ. ಕಿವಿಯನ್ನು ತಾಳವಾಗಿಯೂ, ಬೆರಳನ್ನು ದೀವಟಿಗೆ, ರಕ್ತವನ್ನು ಎಣ್ಣೆ ಎಂಬುದಾಗಿಯೂ, ಮೂಗನ್ನು ಶಂಖವಾಗಿ ಕರುಳನ್ನು ರುದ್ರಾಕ್ಷಿ, ಕೈಕಾಲು, ಬೆನ್ನೆಲುಬನ್ನು ಮಂಚವಾಗಿ, ಕೂದಲನ್ನು ಚವಳವನ್ನಾಗಿಯೂ ಮತ್ತು ಹೊಟ್ಟೆಯನ್ನು ಅಗ್ನಿ ಪಾತ್ರವಾಗಿ ಮಾಡಿಕೊಳ್ಳುತ್ತಾಳೆ. ಈ ಹದಿನೆಂಟನೇ ಅವತಾರದಲ್ಲಿ ಇನ್ನೂ ಹಲವು ಪ್ರಕಾರದ ಭಕ್ತರನ್ನು ಪರೀಕ್ಷಿಸುತ್ತಾಳೆ. ಚಿನ್ನ, ಬೆಳ್ಳಿ, ತಾಮ್ರ, ಸೀಸ, ಕಲ್ಲಿನ, ತವರ, ನವರತ್ನಗಳ ಏಳು ಕೊಡಗಳನ್ನು ಮಾಡಿ ಇವುಗಳಲ್ಲಿದ್ದುಕೊಳ್ಳುತ್ತಾಳೆ. ಊರು ಊರುಗಳಿಗೆ ವಿವಿಧ ರೋಗಗಳನ್ನು ಹಬ್ಬುತ್ತಾಳೆ. ಜನರು ದೇವಿಯನ್ನು ನಂಬಿ ದೇವಿಗೆ ಸೇವಾ ರೂಪದ ಸೇವೆಯನ್ನು ಮಾಡಿ ''ಸಂಕಷ್ಟಗಳನ್ನು ಪರಿಹರಿಸಿಕೊಡು'' ಎಂದು ಭಿನ್ನವಿಸಿಕೊಳ್ಳುತ್ತಾರೆ.

ನಯವಿನಯ ಕರುಣೆಯುಳ್ಳ ದೇವಿಯು ಭಕ್ತರ ಭಕ್ತಿಗೆ ಮೆಚ್ಚಿ ಪ್ರಸನ್ನಳಾಗಿ ಮನಸ್ಸಿನ ಇಷ್ಟಾರ್ಥಗಳನ್ನು ಈಡೇರಿಸಿ ಪ್ರಸನ್ನಳಾಗುತ್ತಾಳೆ.[೧೦]

ಶಕ್ತಿಯ ಪೂಜೆಯು ಭಾರತಾದ್ಯಂತ ವಿವಿಧ ರೂಪಗಳಲ್ಲಿ ಕಂಡುಬರುತ್ತಿದೆ. ಸಂತಾನದ ಆರೋಗ್ಯ ಸಮೃದ್ಧಿಗಳಿಗೆ, ಒಳ್ಳೆಯ ಮಳೆ ಬೆಳೆಗೆ ಸಾಂಸಾರಿಕ ಸುಸ್ಥಿತಿಗೆ, ರೋಗ ನಿವಾರಣೆಗೆ ದೇವಿಯ, ಭೂದೇವಿಯ ಪೂಜೆಯನ್ನು ಬಹುತೇಕ ಎಲ್ಲಾ ಸಮುದಾಯಗಳಲ್ಲಿ ಕಾಣುತ್ತೇವೆ. ''ದೈವರಾಧನೆಗೆ ಸಂರಕ್ಷಣಾ ಭಾವನೆಯೇ ಮೂಲ. ದೈವದ ನೆರವಿಲ್ಲದೆ ತನ್ನ ರಕ್ಷಣೆ, ತನ್ನ ಆಸ್ತಿಪಾಸ್ತಿಯ ರಕ್ಷಣೆ ಸಂರಕ್ಷಣೆ ಸಾಧ್ಯವಿಲ್ಲವೆಂದು ತಿಳಿದ ಮಾನವ ಸೃಷ್ಟಿಯ ಸಕಲಕ್ಕೂ ದೈವತ್ವವನ್ನು ಆರೋಪಿಸಿದ.''[೧೧] ಅವುಗಳ ಸಂತೋಷಕ್ಕಾಗಿ ಅನೇಕ ತರದ ಆಚರಣೆಗಳನ್ನು ಆರಂಭಿಸುತ್ತಲೇ ಬಂದಿರುವುದನ್ನು ಕಾಣುತ್ತೇವೆ. ಅನಾದಿ ಕಾಲದಿಂದಲೂ ಹೆಣ್ಣು ಮತ್ತು ಮಣ್ಣನ್ನು ಪೂಜನೀಯವಾಗಿ ಕಾಣಲು ಹೆಣ್ಣಿಗಿರುವ ಸೃಷ್ಟಿ ಶಕ್ತಿ ಮತ್ತು ಮಣ್ಣಿಗಿರುವ ಫಲವತ್ತೆಯ ಶಕ್ತಿ. ಇಂದಿಗೂ ಸ್ತ್ರೀಯನ್ನು ಭೂಮಿಗೆ ಹೋಲಿಸಲಾಗುತ್ತಿದೆ. ಮಾನವನ ಆದಿಮ ಕಾಲದಲ್ಲಿ ಜೀವನಾವಶ್ಯಕವಾದ ಆಹಾರದ ಹುಡುಕಾಟದಲ್ಲಿ ಸ್ತ್ರೀಯ ಪಾತ್ರ ಪ್ರಧಾನವಾದುದು. ಸ್ತ್ರೀ ಮಕ್ಕಳಿಗೆ ಜನ್ಮ ನೀಡಿ ಸಾಕಿ ಸಲಹುವುದರ ಜತೆಗೆ ಕೃಷಿಯನ್ನು ಆರಂಭಿಸಿ ಇಡೀ ಮಾನವ ಲೋಕದ ಬೆಳವಣಿಗೆಗೆ ಅಡಿಪಾಯದಂತಾದವಳು. ಆಕೆಗಿರುವ ಜೀವೋತ್ಪತ್ತಿಯ ಮೂಲಶಕ್ತಿಯನ್ನು ಕಂಡು ದೈವೀಗುಣವೆಂದು ಭಾವಿಸಿ ಪೂಜಿಸಲಾಯಿತು, ಆರಾಧಿಸಲಾಯಿತು. ಆರಂಭದಲ್ಲಿ ಆದಿವಾಸಿ ಜನಾಂಗದಲ್ಲಿ ಮಗು ಹುಟ್ಟುವುದು ಗರ್ಭದಿಂದ ಎಂಬ ನಂಬಿಕೆಯೊಂದಿಗೆ ಹೆಣ್ಣಿನ ಗರ್ಭಕ್ಕೆ ಪೂಜೆ ಮಾಡುತ್ತಿದ್ದರು. ಅದರ ಕುರುಹು ಎಂದು ಹೇಳಬಹುದಾದ 'ಸೀಮಂತ'ವನ್ನು ಇಂದೂ ಆಚರಿಸುವುದನ್ನು ನಾವು ಕಾಣುತ್ತೇವೆ.

ಮಾತೃ ಪ್ರಧಾನ ವ್ಯವಸ್ಥೆಯು ಪ್ರಪಂಚದ ಯಾವುದೇ ಭಾಗಕ್ಕಿಂತ ಗುಣ ಮತ್ತು ಪ್ರಮಾಣದಲ್ಲಿ ಭಾರತ ದೇಶದಲ್ಲಿ ವಿಪುಲವಾಗಿತ್ತೆಂದು ವಿದ್ವಾಂಸರು ಭಾವಿಸುತ್ತಾರೆ. ಪ್ರಾಚೀನ ಬಹುತೇಕ ಸಮಾಜಗಳು ಮಾತೃಪ್ರಧಾನ ಕುಟುಂಬ ವ್ಯವಸ್ಥೆಯನ್ನೇ ಹೊಂದಿದ್ದವು ಎಂಬುದನ್ನು ಸಂಶೋಧನೆಗಳು ತಿಳಿಸುತ್ತದೆ. ''ಸಿಂಧೂ ಸಂಸ್ಕೃತಿಯಲ್ಲಿ ಮಾತೃದೇವತೆಯನ್ನು ಭೂಮಿಯ ತಾಯಿಯೆಂದೂ, ಮಾನವರ ಮಾತೆಯೆಂದೂ, ದೇವತೆಗಳ ತಾಯಿ ಎಂದೂ, ಅರಣ್ಯ, ಪ್ರಾಣಿ, ಧಾನ್ಯ, ಪಕ್ಷಿ ಇವುಗಳ ಮಾತೃವೆಂದೂ ಪೂಜಿಸಲಾಗಿದೆ. ಸ್ತನ, ಗರ್ಭ, ಯೋನಿ ಇವುಗಳನ್ನು ಮಾತೃದೇವತೆಯ ಸಂಕೇತಗಳೆಂದು ಅವರು ಭಾವಿಸಿದ್ದರು. ಈ ಮೂರು ಅಂಗಗಳು ಮೂರು ಮುಖ್ಯ ಚಟುವಟಿಕೆಗಳನ್ನು ಮಾಡುತ್ತವೆ. ಪಾಲನೆ, ಧಾರಣೆ ಮತ್ತು ಸೃಷ್ಟಿ. ಸಿಂಧೂ ಸಂಸ್ಕೃತಿಯಲ್ಲಿ ದೊರೆತಿರುವ ಉಂಗ್ರಾಕಾರದ ಕಲ್ಲುಗಳನ್ನು ಮಾತೃದೇವತೆಯ ಸೃಷ್ಟಿಯ ಅಂಗವಾದ ಯೋನಿ ಎಂದು ಭಾವಿಸಲಾಗಿದೆ.''[೧೨]

ಕರಾವಳಿ ಪ್ರದೇಶದ ದೇವತೆಗಳು ಸಂಪೂರ್ಣ ಬ್ರಾಹ್ಮಣೀಕರಣಗೊಳ್ಳುತ್ತಿರುವುದು ಕಂಡು ಬರುತ್ತಿದೆ. ಮದ್ಯ ಮಾಂಸದ ಬಳಕೆ ಕಡಿಮೆಯಾಗುತ್ತಿದೆ. ಅಂಬಾಭವಾನಿಯನ್ನು ದೇವತೆಯಾಗಿ ಆರಾಧಿಸಲು ಶಿವಾಜಿಯ ದೇವತೆಯೆಂಬುದಾಗಿ ಎಂದು ವಕ್ತೃ ಮಾಹಿತಿಗಳಿಂದ ತಿಳಿದುಬರುತ್ತದೆ. ''ಮೂಲದಲ್ಲಿ ಭೂತಾಯಿ ಇದ್ದ ಅಂಬಾಭವಾನಿ ನಂತರ ಯುದ್ಧದೇವತೆಯಾಗಿ ಕೊಡಲು ಕಾರಣ ಶಿವಾಜಿ ಮಹಾರಾಜರು. ಶಿವಾಜಿ ಮಹಾರಾಜರಿಂದ ಈ ದೇವಿ ತುಂಬ ಪ್ರಾಚುರ್ಯ ಪಡೆದಳು. ಹಿಂದೂ ಸಾಮ್ರಾಜ್ಯದ ರಕ್ಷಣೆಗಾಗಿ ಜನರು ಧೈರ್ಯ ಸಾಹಸ ಮಾಡಲು

ಊರೂರಿಗೂ ಹಬ್ಬಿಹರಿ ಗುಡಿಗಳಾದವು. ಗುಡಿಯಲ್ಲಿಯೇ ಗರಡಿ ಮನೆ ಸ್ಥಾಪಿಸಿದರು. ಜನರನ್ನು ಹೋರಾಡುವ ಯೋಧರನ್ನಾಗಿ ಮಾಡಲು ರಾಮದಾಸ ಮುಂತಾದವರು ಮುಂದಾದರು. ರಾಷ್ಟ್ರಭಕ್ತಿ, ರಾಷ್ಟ್ರಪ್ರೇಮ ತುಂಬಿ ಜನರನ್ನು ಜಾಗೃತಿಗೊಳಿಸಲು ಅಂಬಾಭವಾನಿಯ ಹೆಸರಿನಲ್ಲಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಈ ಕಾರ್ಯಕ್ರಮಗಳು ಪೂಜೆ, ಉತ್ಸವಗಳು ಮಹಾರಾಷ್ಟ್ರದ ತುಂಬ ಬೆಳೆದು ನಿಂತವು."[೨೯] ಎಂಬುದಾಗಿ ಅಂಬಾಭವಾನಿಯ ಪ್ರಸರಣದ ಬಗ್ಗೆ ಚೆನ್ನಣ್ಣ ವಾಲೀಕಾರರು ವಿವರ ನೀಡುತ್ತಾರೆ. Will Durant ಅವರು ಮಾತೃದೇವತೆ ಆರಾಧನೆಯ ಬಗ್ಗೆ ಈ ರೀತಿ ಹೇಳುತ್ತಾರೆ. " The great problem of every generation in every year is how to sacure a good crop. Primitive man never thought of working out of problem in torms of rintrogation or in any other raientific torms. he approached it on the should deliver herself of a great litter of food. So he arranged phallic festivals at sowing time and aehired the double purpose of festiliging the earth by suggestion and giving himself a moral holiday."[೩೦]

ತುಳುನಾಡಿನಲ್ಲಿ ಗೋಂದೋಳು ಪೂಜೆಯನ್ನು ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ. ಮಹಮ್ಮಾಯಿ, ಶ್ರೀದೇವಿ ಪೂಜೆ, ಅಮ್ಮೂರು ಪೂಜೆ, ಗೋಂದೋಳು ಪೂಜೆ, ಗೊಂದಲ ಪೂಜೆ ಮತ್ತು ದುರ್ಗಾಪೂಜೆ ಇತ್ಯಾದಿ. ಇಂದು 'ಮಹಮ್ಮಾಯಿ' ಮತ್ತು 'ಗೋಂದೋಳು' ಎನ್ನುವ ಹೆಸರುಗಳು ಹೆಚ್ಚು ಪ್ರಚಲಿತದಲ್ಲಿದೆ. 'ಮಹಾಮ್ಮಾಯಿ' ಅಂದರೆ 'ಮಹಾತಾಯಿ' ಅಥವಾ 'ನಮ್ಮತಾಯಿ' ಎಂಬರ್ಥವನ್ನು ಕೊಡುತ್ತದೆ. 'ಬಾಯಿ' ಎಂಬುದು ಮರಾಠಿಯಲ್ಲಿ ಮಹಿಳೆಯರನ್ನು ಸಂಭೋಧಿಸುವ ಒಂದು ಗೌರವ ಸೂಚಕ ಸ್ತ್ರೀಲಿಂಗ ರೂಪವಾಗಿದೆ. "ಮಮ್ ಆಯಿ ಅಥವಾ ಮಮ್ಮಾಯಿ ಅಂದರೆ 'ನಮ್ಮತಾಯಿ' ಎಂಬ ಒಬ್ಬ ಜನಪದ ದೇವತೆ ಅಥವಾ ರಾಕ್ಷಸಿಯ ಹೆಸರಿನಿಂದ ಬಂದುದು ಎಂಬುದಾಗಿ ತಿಳಿಯಲಾಗಿದೆ."[೩೧] ಎಂದು ಶಿವರುದ್ರಪ್ಪನವರು 'ಮುಂಬೈ ಜಾತಕ ವಿಶ್ಲೇಷಣೆ' ಯಲ್ಲಿ ತಿಳಿಸಿದ್ದಾರೆ. 'ಅಮ್ಮೂರು' ಎಂಬ ಪದ 'ಅಮ್ಮನವರು' ಎಂಬುದರ ಸಂಕ್ಷಿಪ್ತ ರೂಪವಾಗಿದೆ. ಅಮ್ಮನವರು ಎಂಬುದನ್ನು ಜನಸಾಮಾನ್ಯರು ಅಮ್ನೂರು ಎಂಬುದಾಗಿ ರೂಢಿಗತಗೊಳಿಸಿರುವುದು ಕಂಡು ಬರುತ್ತದೆ. ಈಗಾಗಲೇ ಗಣಗಳ ಗುಂಪನ್ನು ಗೋಂದಾಲ್, ಗೋಂದೋಳ್ ಎಂಬುದಾಗಿ ಮಾರ್ಪಡಿಸಿ ಕರೆಯಲಾಗಿದೆ ಎಂಬುದನ್ನು ಸ್ಪಷ್ಟಪಡಿಸಲಾಗಿದೆ. 'ಗೋಂದೋಳು' ಎಂಬ ಪದವೇ ಕ್ರಮೇಣ ಜನಪದರ ಬಾಯಲ್ಲಿ ಗೋಂದಾಲ್, ಗೊಂದಲ ಎಂಬ ಸರಳ ಉಚ್ಚಾರಕ್ಕೆ ಮರಳಿದೆ ಎಂದು ಹೇಳಬೇಕು. ಇಂಥದಕ್ಕೆ ಉತ್ತಮ ನಿದರ್ಶನವೆಂದರೆ 'ಗ್ರಹಪೂಜೆ-ಗೆರೆಪೂಜೆ'. ಮರಾಟಿಗರ ಮದುವೆ ಸಂಪ್ರದಾಯದಲ್ಲಿ ನವ ವಧುವರರು ಮದುವೆ ಮಂಟಪದಲ್ಲಿ ನವಗ್ರಹ ಪೂಜೆ ಮಾಡಬೇಕಾಗುತ್ತದೆ. ಈ ನವಗ್ರಹ ಪೂಜೆ ಅನಕ್ಷರಸ್ಥರ ಬಾಯಲ್ಲಿ ಗೆರೆಪೂಜೆ ಎಂದಾಗಿದೆ. ಅಂಬಾಭವಾನಿ, ದುರ್ಗೆ ಎನ್ನುವುದು ಕೂಡ ದೇವಿಯ ವಿವಿಧ ನಾಮಗಳು. ಪ್ರಾದೇಶಿಕವಾಗಿ ಇಂತಹ ನೂರಾರು ಹೆಸರುಗಳು ಕಾಣಸಿಗುತ್ತವೆ.

ಸಾಮಾನ್ಯವಾಗಿ ಕರ್ನಾಟಕದ ಬಹುತೇಕ ದೇವಿ-ದೇವತೆಯರ ಆರಾಧನೆಗಳು ಮಂಗಳವಾರ ಮತ್ತು ಶುಕ್ರವಾರದ ದಿನಗಳಂದು ನಡೆಯುವುದು ಕಂಡು ಬರುತ್ತದೆ. ಮರಾಟಿಗರ ಗೋಂದೋಳು ಪೂಜೆಯು ಕೂಡ ಮಂಗಳವಾರ ಅಥವಾ ಶುಕ್ರವಾರ ನಡೆಯುತ್ತವೆ. ಜನಪದರ ನಂಬಿಕೆಯಂತೆ ಮಂಗಳವಾರ ಮತ್ತು ಶುಕ್ರವಾರ 'ಕಡುದಿನ' ಗಳು

ಅಂದರೆ ವಿಶೇಷವಾದ ದಿನಗಳು. ಗೋಂದೋಳು ಆಚರಣೆಯ ಪ್ರಧಾನ ಪೂಜಾರಿ ಮತ್ತು ದರ್ಶನ ಪಾತ್ರಿಯವರನ್ನು ಕುಟುಂಬದ ಯಜಮಾನ ಅಥವಾ ಪರಿವಾರ ಬೇಟಿಯಾಗಿ ಒಂದು ದಿನವನ್ನು ನಿಗದಿಪಡಿಸುತ್ತಾರೆ. ನಿಗದಿತ ದಿವಸಕ್ಕೆ ಅನುಗುಣವಾಗಿ ಗೊನೆ ಕಡಿಯಲಾಗುತ್ತದೆ.[೨] ಪೂಜಾ ದಿನಕ್ಕೆ ಒಂದು ದಿನ ಮುಂಚಿತವಾಗಿ ಸಂಬಂಧಿಕರು, ಆಮಂತ್ರಿತರೆಲ್ಲರೂ ಮನೆಯಲ್ಲಿ ಹಾಜರಿದ್ದು ಮನೆಯಲ್ಲಾ ಸಂಭ್ರಮ ಸಡಗರದಿಂದಿರುವುದು ಕಂಡುಬರುತ್ತದೆ. ಶುಭದಿನದಂದು ಪೂಜಾ ಪರಿಕರಗಳೊಂದಿಗೆ 'ಪೂಜಾರಿ ಬಳಗ' ಮಧ್ಯಾಹ್ನ ೧೨ ಗಂಟೆ ಸುಮಾರಿಗೆ ಮನೆಗೆ ಬರುತ್ತಾರೆ. ಮನೆಯವರು ಆಧರದಿಂದ ಬರಮಾಡಿಕೊಳ್ಳುತ್ತಾರೆ. ಗೋಂದೋಳು ಪೂಜೆಯಲ್ಲಿ ಏಳು, ಒಂಭತ್ತು ಅಥವಾ ಹನ್ನೊಂದು ಬೆಸ ಸಂಖ್ಯೆಯ ಗುರುಪದೇಶವಿರುವ ಪೂಜಾರಿಗಳಿರುತ್ತಾರೆ. 'ಗುರುಮಾರಿಕೆ'[೩] (ಗುರುಪದೇಶ) ಇಲ್ಲದೆ ಯಾರೂ ಕೂಡ ಪೂಜೆಯಲ್ಲಿ ಕುಳಿತುಕೊಳ್ಳಲು ಅವಕಾಶವಿರುವುದಿಲ್ಲ ಮತ್ತು ಸ್ತ್ರೀ ಪುರುಷರೆಂಬ ಭೇಧ ಭಾವವಿರುವುದು ಕಂಡು ಬಾರದು. ಕುಟುಂಬದ ಪ್ರಥಮ ಮಹಿಳೆ ತನ್ನ ಕುಟುಂಬದ ಸದಸ್ಯರ ಉಪಸ್ಥಿತಿಯಲ್ಲಿ ಆರಂಭಿಕ ಪೂಜಾ ದೀಪವನ್ನು ಬೆಳಗಿಸುತ್ತಾಳೆ. ಮುಖ್ಯ ಪೂಜಾರಿಯ ಪ್ರಾರಂಭಿಕ ಅರಿಕೆ (ಪ್ರಾರ್ಥನೆ) ಯೊಂದಿಗೆ ಪೂಜೆ ಆರಂಭವಾಗುತ್ತದೆ.

ಎಲ್ಲಾ ಪೂಜಾರಿಗಳು ನಂದಾದೀಪಕ್ಕೆ ಮೂರು-ಮೂರು ಸಲ ತೆಂಗಿನ ಎಣ್ಣೆಯನ್ನು ಬಿಟ್ಟು ಒಬ್ಬರನ್ನೊಬ್ಬರು ಕಾಲು ಮುಟ್ಟಿ ಗೌರವ ಸೂಚಿಸುತ್ತಾರೆ. ಜೋಡಿಸಿದ ಎರಡು ತೋರು ಬೆರಳುಗಳಿಂದ ತೆಂಗಿನೆಣ್ಣೆಯನ್ನು ನೆಲಕ್ಕೆ ಮುಟ್ಟಿಸುತ್ತಾರೆ. ಮನೆತನದಲ್ಲಿ ಗತಿಸಿದ ಹಿರಿಯರಿಗೆ ಈ ರೀತಿಯಾಗಿ ಗೌರವವನ್ನು ಅರ್ಪಿಸಲಾಗುತ್ತದೆ. ಈ ಸಂಪ್ರದಾಯವನ್ನು ಮರಾಟಿಗರ ಮರಾಠಿ ಭಾಷೆಯಲ್ಲಿ 'ಪಾಯದ್' ಎಂದು ಕರೆಯಲಾಗುತ್ತಿದೆ. ಅನಂತರ ಪೂಜಾರಿ ವೃಂದದವರು ಎಲೆಡಿಕೆಯನ್ನು ಸ್ವೀಕರಿಸಿ ಅಭ್ಯಂಗ ಸ್ನಾನ ಮಾಡಿ ಪುಣ್ಯಾರ್ಚನೆ ಪಡೆದು ಶುದ್ಧಿಗೊಳಪಡುತ್ತಾರೆ. ಹಾಗೆಯೇ ಈಡು ಬಿಟ್ಟ ಎರಡು ಹಂದಿಗಳಿಗೆ ಮತ್ತು ನಾಲ್ಕು ಕೋಳಿಗಳಿಗೆ ಮುಖ್ಯ ಪೂಜಾರಿ ಅನ್ನಾಹಾರ ನೀಡಿ, ಮಧ್ಯಾಹ್ನದ ಆಹಾರ ಸ್ವೀಕರಿಸುತ್ತಾರೆ.

ಸೂರ್ಯಾಸ್ತದ ಸಮಯದಲ್ಲಿ ಮನೆಯ ಹೊರಗಡೆ ಭೈರವನ ಬನದಲ್ಲಿ ಪೂಜೆಯ ಎರಡನೆ ಹಂತವಾಗಿ ಅಸುರಕ್ರಿಯೆಯ ಕಾರ್ಯ ನೆರವೇರುತ್ತದೆ. ಭೈರವನ ಬನದಿಂದ ಬಂದು ಸ್ನಾನ ಮಾಡಿ ಪೂಜಾರಿಗಳೆಲ್ಲರೂ ಪ್ರಮುಖ ದೇವಕ್ರಿಯೆ ಪೂಜೆಗೆ ಅಣಿಯಾಗುತ್ತಾರೆ. ಮನೆಯೊಳಗಡೆ ದೇವರಮಾನಿ (ಪೂಜಾರಿ) ಯವರೆಲ್ಲರೂ ವೃತ್ತಾಕಾರದಲ್ಲಿ ಕುಳಿತು ಮಹಮ್ಮಾಯಿಯ 'ಗದ್ದಿಗೆ' ಏರಿಸುವ ಕಾರ್ಯ ಮಾಡುತ್ತಾರೆ. ಪ್ರಾದೇಶಿಕವಾಗಿ ಭಿನ್ನತೆಯಿದ್ದು ಕೆಲವು ಮನೆಗಳಲ್ಲಿ ಹೊರಗಡೆ ಅಂಗಳದಲ್ಲಿಯೂ 'ಗದ್ದಿಗೆ' ಏರಿಸುವುದು ಕಂಡುಬರುತ್ತದೆ. ಬೆಳ್ತಿಗೆ ಅಕ್ಕಿಯನ್ನು ಬಳಸಿ ಸೂರ್ಯ, ಚಂದ್ರ, ನಾಗ, ನಕ್ಷತ್ರ, ಅದರ ಸುತ್ತಲೂ ಪಶು (ಕಾಮಧೇನು) ಡಮರುಗ (ಶಿವ) ದ ಚಿತ್ರವನ್ನು ಬರೆಯಲಾಗುತ್ತದೆ. ಇಲ್ಲಿ ಬುಡಕಟ್ಟು ಜನರ ಮೂಲದೇವರನ್ನು ಕಾಣುತ್ತೇವೆ. ಭಾರತದ ಬಹುತೇಕ ಬುಡಕಟ್ಟು ಸಮುದಾಯಗಳ ಆರಾಧ್ಯದೈವ ಶಿವನಾಗಿದ್ದಾನೆ. ಹಾಗೆಯೇ ಸೂರ್ಯ, ಚಂದ್ರ, ನಕ್ಷತ್ರ ಮತ್ತು ಪಶು ಇತ್ಯಾದಿಗಳನ್ನು ಮಾನವ ಆದಿಕಾಲದಿಂದಲೂ ಪೂಜಿಸುತ್ತಾ ಬಂದಿರುವುದು ಕಂಡು ಬರುತ್ತದೆ. ನಮ್ಮ ಬಹುತೇಕ ಪೂಜೆ ಆಚರಣೆಗಳಲ್ಲಿ ಮಂಡಲಾಕಾರದ ರಚನೆಯಲ್ಲಿಯೇ ಪೂಜಾಕಾರ್ಯಗಳು ನಡೆಯುವುದು ಕಂಡು ಬರುತ್ತದೆ. ಡಾ.

ಚಂದ್ರಶೇಖರ ಕಂಬಾರರು ಇದರ ಬಗ್ಗೆ ಈ ರೀತಿ ವಿಶ್ಲೇಷಿಸುತ್ತಾರೆ. ''ಆರಾಧನಾ ಕುಣಿತಗಳೆಲ್ಲ ಮಂಡಲಾಕಾರದಲ್ಲಿಯೇ ಇದ್ದವು. ಬಹುತೇಕ ಆಚರಣಾ ಕುಣಿತಗಳು ಮಂಡಲದ ಪೂಜೆಯೇ ಆಗಿವೆ. ಬಹುಶಃ ಆದಿಮಾನವ ತನ್ನ ಸುತ್ತಲಿನ ಜಗತ್ತು ಜೀವನಗಳನ್ನು ಮಂಡಲಾಕಾರದಲ್ಲಿಯೇ ಗ್ರಹಿಸಿದನೆಂದು ತೋರುತ್ತದೆ. ಸೂರ್ಯ ಹುಟ್ಟಿದಲ್ಲಿಯೇ ಹುಟ್ಟುವುದು, ಋತುಮಾನಗಳು ಪುನರಾವರ್ತನೆಯಾಗುವುದು, ಮನುಷ್ಯನ ಹುಟ್ಟು ಸಾವು ಇವೆಲ್ಲ ಅವನಿಗೆ ಮಂಡಲದ ಕಲ್ಪನೆಯನ್ನು ಪ್ರಚೋದಿಸಿರಬೇಕು. ತೀರ ಆದಿಮಕಾಲದ ಸಮೃದ್ಧಿಯ ಕುಣಿತಗಳು ಮಂಡಲಾಕಾರದಲ್ಲಿಯೇ ಇದೆ. ಜೀವನಾನುಭವದಂತೆ ಅವರ ಕಲಾನುಭವವೂ ಮಂಡಲಾಕಾರವಾಗಿಯೇ ಇರುವುದು.'' ಇಲ್ಲಿ ಗೋಂದೋಳು ಪೂಜಾಕಾರ್ಯವೂ ಮಂಡಲಾಕಾರದ ಗದ್ದಿಗೆಯೊಂದಿಗೆ ಆರಂಭವಾಗುವುದು. ಅಂತೆಯೇ ಗೋಂದೋಳು ಕುಣಿತ ಕೂಡ ಮಂಡಲಾಕಾರದಲ್ಲಿಯೇ ಇರುವುದು ಕಂಡುಬರುತ್ತದೆ. ಮಂಡಲದ ಮಧ್ಯದಲ್ಲಿ ಕೊಡಿ ಬಾಳೆಲೆಯಲ್ಲಿ ಬೆಳ್ತಿಗೆ ಅಕ್ಕಿಯ ಮೇಲೆ ಹಿತ್ತಾಳೆ ಬಿಂದಿಗೆ (ಚೊಂಬು) ಇಡಲಾಗುತ್ತದೆ. ಬಿಂದಿಗೆಯ ಬಾಯಿಯಲ್ಲಿ ಮಾವಿನ ಐದು ಯಾ ಏಳು ಎಲೆಗಳೊಂದಿಗೆ ಒಂದು ಸಿಯಾಳವನ್ನು ಇಡುತ್ತಾರೆ. ಇದಕ್ಕೆ ಗದ್ದಿಗೆ ಏರಿಸುವುದು ಎಂದು ಹೆಸರು. ಅಕ್ಕಪಕ್ಕದಲ್ಲಿ ಎರಡು ಕಡೆ ನಂದಾದೀಪ ಬೆಳಗಿಸುತ್ತಾರೆ. ಮಂಡಲದ ಸನಿಹದಲ್ಲಿ ಮಹಾಗಣಪತಿಯ ಸ್ವಸ್ತಿಕ ಮತ್ತು ಭೈರವನ ಕಲಶವನ್ನು ಇಡಲಾಗುತ್ತದೆ. ಮಂಡಲದ ಪ್ರತಿ ವೃತ್ತಕ್ಕೂ ತೆಂಗಿನಕಾಯಿ ಹಾಗೂ ಹಣ್ಣುಗಳನ್ನು ಇಡುತ್ತಾರೆ. ಹಾಗೆಯೇ ಒಂದು ಬಾಣಲೆಯಲ್ಲಿ ತೆಂಗಿನೆಣ್ಣೆ ಮತ್ತು 'ಭಂಡಾರ ಮಡಕೆ'[೧೯] ಯಲ್ಲಿ ಶೇಂದಿ (ಹೆಂಡ) ಯನ್ನು ಇಡಲಾಗುತ್ತದೆ. ಸಂಪ್ರದಾಯದಂತೆ ಇದು ಪೂಜೆಯ ಆದಿಯಿಂದ ಅಂತ್ಯದವರೆಗೂ ಉಳಿದಿರಬೇಕು. ಇಲ್ಲಿ ಶೇಂದಿಯನ್ನು ತೀರ್ಥವೆಂದು ಸ್ವೀಕರಿಸುವುದು ಕಂಡುಬರುತ್ತದೆ. ಬುಡಕಟ್ಟು ಸಮುದಾಯಗಳಲ್ಲಿನ ಬಹುತೇಕ ಆಚರಣೆ ಸಂಪ್ರದಾಯಗಳಿಗೆ ಮದ್ಯಮಾಂಸಗಳ ನಿಷೇಧವಿಲ್ಲ ಎಂಬುದು ಇದರಿಂದ ತಿಳಿಯಬಹುದಾಗಿದೆ. ದೊಡ್ಡಬಳ್ಳಾಪುರ ತಾಲೂಕಿನ ಕಛೇರಿಪಾಳ್ಯದ ಸಾವಿರ ಕಣ್ಣಮ್ಮ ಗ್ರಾಮದೇವತೆಯ ಜಾತ್ರೆಯಲ್ಲಿ ಶೇಂದಿಯನ್ನು ಪೂಜಿಸಿ ತೀರ್ಥವೆಂದು ಕೊಡುವುದನ್ನು ಸಿದ್ಧಲಿಂಗಯ್ಯ ಅವರು ತಿಳಿಸುತ್ತಾರೆ.[೨೦] ಹೀಗೆ ಶೇಂದಿ ತೀರ್ಥದ ಉದಾಹರಣೆಗಳು ನಮಗೆ ಸಾಕಷ್ಟು ಸಿಗುತ್ತವೆ. ಮಹಾಮ್ಮಾಯಿಯ ಕಲಶ ಪಾತ್ರೆ 'ಗೇಟ್'[೨೧] ಯ ಒಳಗಡೆ ಪಂಚಾಮೃತ ಹಾಕಿ ಅದರ ಸುತ್ತಲೂ ಕಿಸ್ಕರ ಹೂಗಳಿಂದ ಅಲಂಕರಿಸಲಾಗುತ್ತದೆ. ಮಂಡಲ ನೋಡಲು ಆಕರ್ಷಕವಾಗಿದ್ದು ಅದರ ಮಧ್ಯದಲ್ಲಿ ಕಲಶ ಪಾತ್ರೆ ಮತ್ತು ಮಹಮ್ಮಾಯಿಯ 'ಸತ್ತಿಗೆ' ಯನ್ನು ಕುಳ್ಳಿರಿಸಲಾಗುತ್ತದೆ. ಸತ್ತಿಗೆಯು ಬೆಳ್ಳಿಯ ಬಂಗಾರದಿಂದ ಮಾಡಿರುತ್ತಾರೆ. ಮಹಮ್ಮಾಯಿಗೆ ಹಿಂದುಗಡೆಯಿಂದ ಪೂಜೆ ಸಲ್ಲುವುದು ಗೋಂದೋಳು ಪೂಜೆಯ ಮತ್ತೊಂದು ವೈಶಿಷ್ಟ್ಯವಾಗಿದೆ. ಇದಕ್ಕೆ ಸಂಬಂಧಪಟ್ಟ ಜನಪದ ಕತೆ ಆಚರಣೆಯ ಐತಿಹ್ಯದಲ್ಲಿ ನೀಡಲಾಗಿದೆ. ಮಹಮ್ಮಾಯಿ ಮತ್ತು ಭೈರವನ ಗದ್ದಿಗೆಗೆ ಅನೇಕ ರೀತಿಯ ನೈವೇದ್ಯಗಳನ್ನು ಅರ್ಪಿಸುವುದರೊಂದಿಗೆ ಹಂತಾನುಹಂತವಾಗಿ ಸುಮಾರು ೪೮ ಆರತಿಗಳನ್ನು ಮಾಡಲಾಗುತ್ತದೆ.

ರಾತ್ರಿ ಸುಮಾರು ೮ ಗಂಟೆಗೆ 'ಈಸ್‌ದೇವ್' ಪೂಜೆ[೨೨] ನಡೆಯುತ್ತದೆ. ಮನೆಯ ಪ್ರಧಾನ ಒಲೆಯಲ್ಲಿ ಪಂಚಕಜ್ಜಾಯವನ್ನು ಹಾಕಿ ಒಲೆಯ ಭಸ್ಮ (ಬೂದಿ) ವನ್ನು ಪೂಜೆಯಲ್ಲಿ ಮಹಮ್ಮಾಯಿಗೆ ಮತ್ತು ಭೈರವನಿಗೆ ಅರ್ಪಿಸಲಾಗುತ್ತದೆ. ಹಿಂದಿನ ಕಾಲದಲ್ಲಿ ಸ್ಮಶಾನಕ್ಕೆ ಹೋಗಿ ಭಸ್ಮ ತಂದು ಅರ್ಪಿಸಲಾಗುತ್ತಿದ್ದು, ಕ್ರಮೇಣ ಒಲೆಯ

ಭಸ್ಮವನ್ನೇ ಅವಲಂಬಿಸಲಾಯಿತೆಂದು ಹಿರಿಯ ವಕ್ತೃಗಳು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಪೂಜೆಯ ಆದಿಯಿಂದ ಅಂತ್ಯದವರೆಗೆ ಅನೇಕ ಸಲ ಗತಿಸಿದ ಹಿರಿಯರನ್ನು ನೆನಪಿಸಿ ಶೇಂದಿಯನ್ನು ನೆಲಕ್ಕೆ ಅರ್ಪಿಸಿ ಸೇವಿಸುವುದರ ಮೂಲಕ ಅವರಿಗೆ ಗೌರವವನ್ನು ಸೂಚಿಸುವುದು ಕಂಡುಬರುತ್ತದೆ. ಗತಿಸಿದ ಹಿರಿಯರು ತಮ್ಮ ಬೆಂಗಾವಲಾಗಿಯೇ ಇರುತ್ತಾರೆನ್ನುವ ಬುಡಕಟ್ಟು ಜನರ ನಂಬಿಕೆ ಇಲ್ಲಿ ಕಾರ್ಯರೂಪದಲ್ಲಿರುವುದು ಸ್ಪಷ್ಟವಾಗುತ್ತದೆ. ಶ್ರೀದೇವಿಯ ಗದ್ದಿಗೆಗೆ ಅಡ್ಡಲಾಗಿ ಒಂದು ಪರದೆ ಹಿಡಿದು ಭೈರವನಿಗೆ ಹಂದಿ ಮತ್ತು ಕೋಳಿಗಳ ಬಲಿ ಕೊಡಲಾಗುತ್ತದೆ. ಜಾಗಟೆ, ಓಲಗ, ಶೃತಿಗಳ ಅಬ್ಬರದ ಮಧ್ಯೆ ಭಕ್ತಾದಿಗಳು ಗೋವಿಂದಾ.... ಗೋವಿಂದಾ.... ಎಂದು ಜೋರಾಗಿ ಉದ್ಘೋಷ ಮಾಡುತ್ತಾರೆ. ಇವೆಲ್ಲದರ ಮಧ್ಯೆ ಗದ್ದಿಗೆಯ ಸ್ವಲ್ಪ ದೂರದಲ್ಲಿ ಕೋಳಿಗಳನ್ನು ಮತ್ತು ಹಂದಿಗಳನ್ನು ಪೂಜಾರಿಗಳಲ್ಲೊಬ್ಬರು ಕೊಯ್ದು ರಕ್ತತರ್ಪಣ ನೀಡುತ್ತಾರೆ. ಒಂದು ಹೆಂಟೆ ಕೋಳಿಯ ಬಲಗಾಲಿನ ಒಂದು ತುಂಡನ್ನು ಒಲೆಯಲ್ಲಿ ಹಾಕಿ ಬೇಯಿಸಿ ಅಸುರ-ಗಣಗಳಿಗೆ ನೈವೇದ್ಯ ಮಾಡಲಾಗುತ್ತದೆ. ಹಂದಿಯ ತೊಡೆಯ ಒಂದು ತುಂಡು ಭಾಗವನ್ನು ತೆಗೆದು ಒಲೆಯಲ್ಲಿ ಬೇಯಿಸಿ ನೈವೇದ್ಯ ಮಾಡುತ್ತಾರೆ. ಹಾಗೆಯೇ ಹಂದಿಗಳ ಒಂದೊಂದು ಬಲಗೈಯ ತುಂಡುಗಳನ್ನು ಅವುಗಳ ಬಾಯಿಯಲ್ಲಿ ಇಟ್ಟು ಗದ್ದಿಗೆಯ ಹತ್ತಿರ ಎರಡು ಬದಿಯಲ್ಲಿ ಇಡಲಾಗುತ್ತದೆ. ಮತ್ತು ಅವುಗಳ ತಲೆಯ ಮೇಲೆ ಎರಡು ದೀಪಗಳನ್ನು ಉರಿಸಲಾಗುತ್ತದೆ. ಪುಷ್ಪಾಲಂಕಾರ ಮಾಡಿ ಪೂಜೆ ಮುಂದುವರಿಯುತ್ತದೆ. ಒಂಟಿ ಹೆಣ್ಣು ಇರಬಾರದೆಂದು ಜನಪದರ ನಂಬಿಕೆಯು ಇಲ್ಲಿ ಸಂಪ್ರದಾಯಕ್ಕೆ ಎಡೆಮಾಡಿ ಕೊಡುತ್ತದೆ. ಈ ಸಂಪ್ರದಾಯದಂತೆ 'ಶಕ್ತಿ ಕುಳಿತುಕೊಳ್ಳುವುದು' ಎಂಬುದಾಗಿ ಕರೆಯಲಾಗುತ್ತದೆ. ಅದೇ ವೇಳೆಗೆ ಮನೆಯ ಅಂಗಳದಲ್ಲಿ ಭಜನಾ ಕಾರ್ಯಕ್ರಮ ಆರಂಭವಾಗುತ್ತದೆ. ಅಂಗಳದಲ್ಲಿ ನೆರೆದ ಆಸಕ್ತ ಭಕ್ತಾದಿಗಳೆಲ್ಲರೂ ಸೇರಿ ಭಜನೆ ಮಾಡುತ್ತಾರೆ. ಪ್ರತಿಯೊಂದು ಗೋಂದೋಳು ಪೂಜೆಗಳಲ್ಲಿಯೂ ಭಜನಾ ಕಾರ್ಯಕ್ರಮ ಇದ್ದೇ ಇರುತ್ತದೆ. ಇತ್ತೀಚೆಗೆ ಮರಾಟಿ ಯುವಕರು ಸೇರಿ ಭಜನಾ ತಂಡಗಳನ್ನು ಕಟ್ಟಿಕೊಂಡಿರುವುದು ಕಂಡು ಬರುತ್ತದೆ. ಗೋಂದೋಳು ಪೂಜೆಯನ್ನು ಮಾಡಿಸುವವರು ನಿರ್ದಿಷ್ಟ ಹಣ ನೀಡಿ ಭಜನಾ ತಂಡವನ್ನು ಕರೆಸಿಕೊಳ್ಳುತ್ತಾರೆ. ಆ ಮುಖೇನ ಧಾರ್ಮಿಕ ಸಂಪ್ರದಾಯವೊಂದು 'ಬ್ಯುಸಿನೆಸ್' (ಉಧ್ಯಮ)ದ ತೆಕ್ಕೆಯೊಳಗೆ ಸೇರಿಕೊಳ್ಳುವುದು ಸ್ಪಷ್ಟವಾಗುತ್ತದೆ. ಭಕ್ತಿ ಭಾವವಿದ್ದರೂ ಅದರ ಮೂಲದಲ್ಲಿ ಭಕ್ತಿ ಪಲ್ಲಟಗೊಂಡು ಹಣ ಗಳಿಕೆಯ ಸಂಸ್ಕೃತಿಯತ್ತ ಹೊರಳುತ್ತಿರುವುದು ವಿಷಾದನೀಯ. ಸುಮಾರು ೧ ಗಂಟೆಯ ಕಾಲ ಶ್ರೀದೇವಿಯನ್ನು ಕುರಿತ ಭಕ್ತಿಗೀತೆಗಳೊಂದಿಗೆ ಇತರ ಎಲ್ಲಾ ಭಕ್ತಿಗೀತೆಗಳನ್ನು ಭಜಿಸಲಾಗುತ್ತದೆ. ಇವೆಲ್ಲದರ ಮಧ್ಯೆ ಪೂಜಾ ಕಾರ್ಯ ಮುಂದುವರಿಯುತ್ತಲೇ ಇರುತ್ತದೆ. ಈ ಸಂದರ್ಭವನ್ನು ನೋಡಿದಾಗ ಒಂದು ಮನೆಯಲ್ಲಿ ಏಕಕಾಲದಲ್ಲಿ ಅನೇಕ ರೀತಿಯ ಕಾರ್ಯಗಳನ್ನು ಗಮನಿಸಬಹುದು. ಮನೆಯ ಪೂಜಾ ಅಂಗಣದಲ್ಲಿ ಮುಖ್ಯ ಪೂಜೆ ನಡೆಯುತ್ತಿದ್ದರೆ, ಹೊರಗೆ ಅಂಗಳದಲ್ಲಿ ಭಜನೆ ನಡೆಯುತ್ತಿರುತ್ತದೆ. ಮತ್ತೊಂದು ಕಡೆ ಅನ್ನ ಸಂತರ್ಪಣೆಗಾಗಿ ಹಂದಿ, ಕೋಳಿಗಳ ಅಡುಗೆ ತಯಾರಾಗುತ್ತಿರುತ್ತದೆ. ಮಕ್ಕಳು ಮಹಿಳೆಯರು, ನಿದ್ದೆ, ಮಾತುಕತೆಯಲ್ಲಿ ತೊಡಗಿಕೊಂಡಿದ್ದರೆ ಆಮಂತ್ರಿತ ಯುವಕರು ಇಸ್ಪೀಟ್ ಆಟಗಳಲ್ಲಿ ಭಾಗಿಯಾಗಿರುವುದು ಕಂಡು ಬರುತ್ತದೆ.

**ಗೋಂದೋಳು ಕುಣಿತ ಮತ್ತು ದರ್ಶನ**

ಭಜನಾ ಕಾರ್ಯಕ್ರಮ ಕೊನೆಗೊಂಡ ಕೂಡಲೇ ಗೋಂದೋಳು ಕುಣಿತ ಪ್ರಾರಂಭವಾಗುತ್ತದೆ. ಗೋಂದೋಳು ಕುಣಿತ ಮತ್ತು ದರ್ಶನ ಗೋಂದೋಳು ಪೂಜೆಯ ಪ್ರಮುಖ ವಿಧಿಗಳಲ್ಲಿ ಒಂದು. ಐದು ಜನ ಯುವಕರು ಕುಣಿತಕ್ಕೆ ಸಿದ್ಧರಾಗುತ್ತಾರೆ. ಕುಣಿತದಲ್ಲಿ ಬಹುತೇಕ ಯುವಕರು ಮರಾಟಿ ಯುವಕರೇ ಆಗಿದ್ದು ಇತರ ಸಮುದಾಯದ ಯುವಕರೂ ಕೂಡ ಅಲ್ಲಲ್ಲಿ ಭಾಗವಹಿಸುವುದು ಕಂಡುಬರುತ್ತದೆ. ದಕ್ಷಿಣ ಕನ್ನಡ ಮತ್ತು ಕಾಸರಗೋಡು ಜಿಲ್ಲೆಯ ಬಹುತೇಕ ಪ್ರದೇಶಗಳಲ್ಲಿ ಯುವಕರು ಕುಣಿತದ ಸಮಯದಲ್ಲಿ ಲುಂಗಿ ಸುತ್ತಿಕೊಂಡಂತೆ ಬರೀ ಮೈಯಲ್ಲಿ ಭಾಗವಹಿಸುತ್ತಾರೆ. ಆದರೆ ಉಡುಪಿ ಜಿಲ್ಲೆಯಲ್ಲಿ ಕುಣಿತಗಾರರ ವೇಷಭೂಷಣದಲ್ಲಿ ವ್ಯತ್ಯಾಸಗಳು ಕಂಡುಬರುತ್ತದೆ. ಅನೇಕ ರೀತಿಯ ಅಲಂಕಾರಗಳನ್ನು ಮಾಡಿ ಗೋಂದೋಳು ಕುಣಿತದಲ್ಲಿ ಭಾಗವಹಿಸುತ್ತಾರೆ. ಪ್ರಧಾನ ಪೂಜಾರಿಯು ಐದು ದೀವಟಿಗೆಗಳನ್ನು 'ಗದ್ದಿಗೆ ನಂದಾ ದೀಪ' ದಿಂದ ಉರಿಸಿ ಕುಣಿತಗಾರರಿಗೆ ನೀಡುತ್ತಾನೆ. ಅಂಗಳದ ಒಂದು ಬದಿಯಲ್ಲಿ ಮಂಡಲಾಕಾರವಾಗಿ (ವೃತ್ತಾಕಾರ) ಕುಣಿಯುತ್ತಾರೆ. ಇವರ ಮಧ್ಯದಲ್ಲಿ ಹಾಡುಗಾರನು ಶ್ರುತಿಯೊಂದಿಗೆ ಹಾಡು ಹಾಡುತ್ತಾನೆ. ಹಿಮ್ಮೇಳದಲ್ಲಿ ಓಲಗದವರಿರುತ್ತಾರೆ. ಕುಣಿತದ ನಡೆ ಪೂರ್ಣ ವೃತ್ತಾಕಾರದಲ್ಲಿದ್ದು ಎಡಬದಿಗೆ ಮತ್ತು ಬಲಬದಿಗೆ ಹೀಗೆ ಬದಲಾಗುತ್ತಿರುತ್ತದೆ, ಈ ಬದಲಾವಣೆ ಮುಖ್ಯ ಹಾಡುಗಾರನನ್ನು ಅವಲಂಬಿಸಿರುತ್ತದೆ. ಕುಣಿತದ ಹಾಡು ಹಳೆತಲೆಮಾರಿನಲ್ಲಿ ಮರಾಠಿ ಭಾಷೆಯಲ್ಲಿರುತ್ತಿದ್ದರೆ ಇಂದು ಕನ್ನಡ ಭಾಷೆಯಲ್ಲಿ ಕಂಡು ಬರುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ಮತ್ತು ಕಾಸರಗೋಡು ಜಿಲ್ಲೆಯ ತಾಲೂಕಿನಲ್ಲಿ ಇಂದಿಗೂ ಮರಾಠಿ ಭಾಷೆಯ ಹಾಡಿನೊಂದಿಗೆ ಕುಣಿತವಿದೆ. ಗೋಂದೋಳು ಕುಣಿತದ ಹಾಡು ಕಥನ ರೂಪದಲ್ಲಿದೆ. ನರ್ತನದ ಆವರ್ತನಕ್ಕೆ ಹೊಂದಿಕೊಂಡು ಶ್ರೀದೇವಿಯ ಹುಟ್ಟು ಪ್ರಸಾರ ಮತ್ತು ಮಹಿಮೆಯನ್ನು ವರ್ಣನಾತ್ಮಕವಾಗಿ ವಿವರಿಸುತ್ತದೆ. ಮುಖ್ಯ ಹಾಡುಗಾರ "ಮಣ್ಣಿನ ಕೋಟೆ ಕಟ್ಟಿದಳಂತೆ ತಾಯಿ" ಎಂದು ಹಾಡಿದಾಗ ಕುಣಿತದವರು "ಲಾಗೆಲೋ ಪನಿ ಲಾಗೆಲಾಲೋ" ಎಂಬ ಸೊಲ್ಲನ್ನು ಮಾತ್ರ ಹಾಡುತ್ತಿರುತ್ತಾರೆ. ಒಂದು ಪೂಜೆಯಲ್ಲಿ ಎರಡು ಮೂರು ಮಂದಿ ಪೂಜಾರಿಗಳಿಗೆ ದರ್ಶನ (ದೇವರ ಮೈಮೇಲೆ ಬರುವುದು, ಆವಾಹನೆ) ವಿರುತ್ತದೆ. ಓರ್ವ ದರ್ಶನಪಾತ್ರಿ ದರ್ಶನದಲ್ಲಿಯೇ ಪೂಜಾ ಅಂಗಣದಿಂದ ಕುಣಿತದ ಹತ್ತಿರ ಬಂದು ಎಲ್ಲಾ ದೀವಟಿಗೆಗಳನ್ನು ತನ್ನ ಕೈಗೆ ತೆಗೆದುಕೊಳ್ಳುತ್ತಾನೆ. ದೀವಟಿಗೆಗಳನ್ನು ತನ್ನ ಎದೆಗೆ, ತಲೆಗೆ, ಮೈ ಕೈಗಳಿಗೆ ಒತ್ತಿಕೊಳ್ಳುತ್ತಾ ಕುಟುಂಬದ ಯಜಮಾನನ್ನು, ಹಿರಿಯರನ್ನು ಉದ್ದೇಶಿಸಿ ಒಪ್ಪು-ತಪ್ಪುಗಳನ್ನು ನುಡಿಯುತ್ತಾನೆ. ತಪ್ಪಿದ್ದಲ್ಲಿ ಕಾರಣಗಳನ್ನು ಒಪ್ಪಿದ್ದಲ್ಲಿ ಅಭಯವನ್ನು, ಸಂತೋಷವನ್ನು ದೇವಿಯ ಹೆಸರಿನಲ್ಲಿ ನುಡಿಯುತ್ತಾನೆ. ನಂತರ ಎಲ್ಲಾ ದೀವಟಿಗೆಗಳಿಗೆ ಎಣ್ಣೆ ಹಚ್ಚಿ ಕುಣಿತಗಾರರ ಕೈಗೆ ಕೊಟ್ಟು ದರ್ಶನದಲ್ಲಿಯೇ ಮನೆಯನ್ನು (ಪೂಜಾ ಅಂಗಣಕ್ಕೆ) ಪ್ರವೇಶಿಸುತ್ತಾನೆ. ಕುಣಿತ ಮುಂದುವರಿಯುತ್ತಾ ಹೋದಂತೆ ನಂತರ ಪ್ರಮುಖ ದರ್ಶನಪಾತ್ರಿಗೆ ಆವಾಹನೆಯಾಗುತ್ತದೆ. ಈ ಸಮಯದಲ್ಲಿ ಕುಟುಂಬಿಕರು ಆಮಂತ್ರಿತರು ಎಲ್ಲರೂ ಎದ್ದು ನಿಂತು ದರ್ಶನಪಾತ್ರಿಯ ನುಡಿಗಳನ್ನು ಆಲಿಸುತ್ತಾರೆ. ಯಜಮಾನ ಪೂಜೆಯ, ಹರಕೆಯ ಕಾರಣಗಳನ್ನು ನೀಡುತ್ತಾನೆ. ಒಪ್ಪು-ತಪ್ಪುಗಳನ್ನು ಪರೋಕ್ಷ ರೀತಿಯ ನುಡಿಕಟ್ಟುಗಳ ಮೂಲಕ ಹೇಳುತ್ತಾನೆ. ದರ್ಶನಪಾತ್ರಿಯು ಹಿಂಗಾರ ಸೇವೆ,[=] ಬತ್ತಿ ಸೇವೆಗಳನ್ನು ನೆರವೇರಿಸುತ್ತಾನೆ.

ಎಲ್ಲಾ ದೀವಟಿಗೆಗಳನ್ನು ತೆಗೆದುಕೊಂಡು ಆವೇಶ ಭರಿತನಾಗಿ ಕುಣಿಯುತ್ತಾ ಭಯಮಿಶ್ರಿತ ಮುಖಭಾವಗಳನ್ನು ಪ್ರದರ್ಶಿಸುತ್ತಾನೆ. ದರ್ಶನಪಾತ್ರಿ ಕುಟುಂಬದ ಯಜಮಾನ, ಸದಸ್ಯರಿಗೆ ಅಭಯದಾನ, ಪ್ರಸಾದಗಳನ್ನು ನೀಡುತ್ತಾನೆ. ಆಮಂತ್ರಿತರಿಗೆಲ್ಲರಿಗೂ ಹಿಂಗಾರ, ಕುಂಕುಮದ ಪ್ರಸಾದದೊಂದಿಗೆ ಅಭಯದಾನ ನೀಡುತ್ತಾನೆ. ಪ್ರತಿಯೊಬ್ಬರೂ ಭಕ್ತಿಭಾವದಿಂದ ಪ್ರಾರ್ಥಿಸಿ ಪ್ರಸಾದ ಸ್ವೀಕರಿಸುತ್ತಾರೆ. ಅಲ್ಲಿಗೆ ದರ್ಶನಪಾತ್ರಿಯ ಆವಾಹನೆ ಕೊನೆಗೊಂಡು ಪೂಜೆ ಅಂತಿಮ ಹಂತಕ್ಕೆ ಬರುತ್ತದೆ. ನಂತರ ಎಲ್ಲಾ ಪೂಜಾರಿ ವೃಂದದವರು ಮಹಮ್ಮಾಯಿಗೆ ಮಂಗಳಾರತಿ ಮಾಡಿ, ದೇವಿಗೆ ಹೊಗಳಿಕೆ ಶುಭನಮನಗಳನ್ನು ಹಾಡಿನ ಮೂಲಕ ಸಲ್ಲಿಸುತ್ತಾರೆ.

ಆಚರಣೆಯ ಕೇಂದ್ರ ಬಿಂದು ದೇವಿ ಅಥವಾ ಮಹಮ್ಮಾಯಿ ದರ್ಶನಪಾತ್ರಿಯ ಮೇಲೆ ಆವಾಹನೆಗೊಂಡು ಅಭಯದಾನ ಮಾಡುವಂಥದ್ದು. ಈ ತರಹದ ಆಚರಣೆಗಳನ್ನು ನಾವು ರಾಜ್ಯದ, ದೇಶದ ಎಲ್ಲಾ ಭಾಗಗಳಲ್ಲಿಯೂ ಕಾಣುತ್ತೇವೆ. ತುಳುಸಂಸ್ಕೃತಿಯ ದೈವಾರಾಧನೆಯಲ್ಲಿ ಕೂಡ ಇದುವೇ ಕೇಂದ್ರ ಬಿಂದು. ಇಲ್ಲಿ ಮಹಮ್ಮಾಯಿ ಆವಾಹನೆಗೊಂಡಾಗ ಉರಿಯುತ್ತಿರುವ ದೀವಟಿಗೆಗಳನ್ನು ತೆಗೆದುಕೊಂಡು ತನ್ನ ಎದೆಗೆ, ತಲೆಗೆ ಇಟ್ಟುಕೊಂಡು ಮನೆಯ ಯಜಮಾನನಿಗೆ ದೇವಿಯ ಮಹಿಮೆಯನ್ನು, ಶಕ್ತಿಯನ್ನು ಕೆಲವು ನುಡಿಗಟ್ಟುಗಳ ಮೂಲಕ ನೀಡುತ್ತಾನೆ. ಸೇರಿದ ಭಕ್ತಾದಿಗಳೆಲ್ಲರೂ ಮುಖ್ಯ ದರ್ಶನ ಪಾತ್ರಿಯ ನುಡಿಗಟ್ಟು ಆಲಿಕೆಗಾಗಿ ಕಾಯುತ್ತಿರುತ್ತಾರೆ. ಎದೆಗೆ ತಲೆಗೆ ದೀವಟಿಗೆಗಳನ್ನಿಟ್ಟಾಗ ನೋವಾಗದೆ ಕೂದಲು ಬೆಂಕಿಯ ಜ್ವಾಲೆಯಿಂದ ರಕ್ಷಿಸಲ್ಪಡುವ ದೇವಿಯ ಸತ್ಯ ಎಂದು ಎಲ್ಲರೂ ನಂಬಿರುತ್ತಾರೆ. ಒಂದು ವೇಳೆ ಹಾಗೇನಾದರೂ ಸುಟ್ಟರೆ ಮನೆಯಲ್ಲಿನ ಸೂತಕ, ಅಶುದ್ಧಿಯಿಂದ ಎಂದು ನಿರ್ಧಾರಕ್ಕೆ ಬರುವುದನ್ನು ಕ್ಷೇತ್ರಕಾರ್ಯದಿಂದ ಕಂಡುಕೊಳ್ಳಲಾಗಿದೆ.

ವೈಜ್ಞಾನಿಕವಾಗಿ ನಾವು ನೋಡಿದಾಗ ಯಾವುದೇ ರೀತಿಯ ನೋವನ್ನು ಮೆದುಳು ಗ್ರಹಿಸಿದಾಗ ಮತ್ತು ಅದರ ಅನುಭವ ಶರೀರಕ್ಕೆ ಉಂಟಾಗುತ್ತದೆ. ಈ ಗ್ರಹಿಕೆ ಪರಿಸರ,ಪರಿಸ್ಥಿತಿ, ಶರೀರ ಮತ್ತು ಮನಸ್ಸಿನ ಸ್ಥಿತಿಯನ್ನು ಅವಲಂಬಿಸಿರುವುದು. ಪ್ರಶಾಂತ ವಾತಾವರಣದಲ್ಲಿ ಮೆದುಳು ನೋವನ್ನು ಬಹಳ ಬೇಗನೆ ಗ್ರಹಿಸುತ್ತದೆ. ಆದರೆ ಹೆಚ್ಚು ಸದ್ದುಗದ್ದಲಗಳಿಂದ ಕೂಡಿದ ಪರಿಸ್ಥಿತಿಯಲ್ಲಿ ಬೇಗ ಗ್ರಹಿಸುವುದಿಲ್ಲ. ಇಲ್ಲಿ ಅಂದರೆ ಗೋಂದೋಳು ಪೂಜೆಯಲ್ಲಿ ಆವಾಹನೆಗೊಂಡ ವ್ಯಕ್ತಿಯ ದೇವಿಯ ಬಗೆಗೆ ಧೃಡ ನಂಬಿಕೆ, ದೈವಭಕ್ತಿ ಗೌರವಗಳನ್ನು ಆತನ ಜೀವನ ಪರ್ಯಂತ ಪಾಲಿಸುತ್ತಾ ಬರುತ್ತಿರುವವನು. ಆ ಮೂಲಕ ಆತ ತನ್ನ ಮನಸ್ಸನ್ನು ಕೇಂದ್ರೀಕರಿಸಿದಾಗ ಯಾವುದೇ ರೀತಿಯ ನೋವಿನ ಗ್ರಹಿಕೆ, ಅನಾಹುತ ನಿಧಾನವಾಗುತ್ತದೆ. ವಿರಳವಾಗಿ ಕೆಲವು ದರ್ಶನಪಾತ್ರಿಗಳ ಕೂದಲು, ಮೈ ಸುಟ್ಟು ಬೊಬ್ಬೆಯೇಳಲು ಕೇಂದ್ರೀಕೃತ ಮನಸ್ಸಿನ ಕೊರತೆ ಕಾರಣವಾಗಿರಲು ಸಾಧ್ಯವಿದೆ. ದರ್ಶನದಲ್ಲಿ ವ್ಯಕ್ತಿಯ ಶರೀರವಿಡೀ ಬೆವರಿನಿಂದ ತೊಯ್ದಂತಿರುವುದು ಕೂಡ ಕಂಡುಬರುತ್ತದೆ. ಗೋಂದೋಳು ಪೂಜೆಯಲ್ಲಿ ಸರಿಸುಮಾರು ಸಂಜೆ ೭ ರಿಂದ ಮಧ್ಯರಾತ್ರಿಯ ತನಕ ದೀಪಗಳ ಮಧ್ಯೆ ಮನೆಯೊಳಗಡೆ ಪೂಜಾ ಕಾರ್ಯದಲ್ಲಿ ತೊಡಗಿರುವುದನ್ನು ಕೂಡ ಕಾಣುತ್ತೇವೆ. ಆದರೆ ಜನಪದೀಯ ಆಚರಣೆಗಳೆಲ್ಲಾ ನಂಬಿಕೆಗಳ ತಳಹದಿಯ ಮೇಲೆಯೇ ನಿಂತಿರುವುದು ನಮಗೆ ತಿಳಿದಂಥ ವಿಚಾರವಾಗಿದೆ. ಎಲ್ಲಾ ರೀತಿಯಲ್ಲಿ ವೈಜ್ಞಾನಿಕವಾಗಿಯೇ ಮುಂದುವರೆಯಲು ಅಸಾಧ್ಯ. ಪರಂಪರಾಗತ ನಂಬಿಕೆಗಳ ಹಿಂದೆ ಮಾನವನ ಕಲ್ಯಾಣದ ವಿಚಾರವೂ ಅಡಗಿರುವುದಕ್ಕೆ ಇಂದಿಗೂ



ಭಜನಾ ಕಾರ್ಯಕ್ರಮ



ಭಕ್ತರಿಗೆ ಅಭಯದಾನ

ಕಂಡುಬರುವ ಆಚರಣೆಗಳೇ ಸಾಕ್ಷಿ. ನಂಬಿಕೆಗಳು ಮಾನಸಿಕ ಸ್ಥೈರ್ಯದ ಜೊತೆಗೆ ಶಾರೀರಿಕ ಆರೋಗ್ಯವನ್ನೂ, ಸಂತೋಷವನ್ನೂ ನೀಡುತ್ತವೆ.

ಬುಡಕಟ್ಟು ಜನರು ಅನಾದಿ ಕಾಲದಿಂದಲೂ ನೀರು, ಗಾಳಿ, ಬೆಳಕು ಮತ್ತು ಭೂಮಿಯನ್ನೊಳಗೊಂಡ ಪ್ರಕೃತಿಗೆ ಅತೀ ಮಹತ್ವ ನೀಡಿರುವುದು ಕಂಡುಬರುತ್ತದೆ. ಅವೆಲ್ಲವೂ ಬದುಕಿನ ಅವಿಭಾಜ್ಯ ಅಂಗಗಳೇ ಆಗಿವೆ. ಗ್ರಾಮೀಣ ಪ್ರದೇಶಗಳಲ್ಲಿ ಬುಡಕಟ್ಟು ಜನರಲ್ಲಿ ಇಂದಿಗೂ ಹಬ್ಬ, ಜಾತ್ರೆ, ಪೂಜೆ, ಪುನಸ್ಕಾರಗಳಲ್ಲಿ ನೀರು, ಬೆಳಕಿನ ಸ್ಥಾನ ಮಹತ್ತರವಾದುದು. ಈ ಗೋಂದೋಳು ಆಚರಣೆಯಲ್ಲಿ ಕೂಡ ಬೆಂಕಿಯ ಪ್ರಾಧಾನ್ಯತೆಯನ್ನು ನೋಡುತ್ತೇವೆ. ರಾಜ್ಯದ ಅನೇಕ ಸ್ಥಳಗಳಲ್ಲಿ ವಿವಿಧ ಅನೇಕ ಆಚರಣೆಗಳಲ್ಲಿ ಕೊಂಡ ಹಾಯುವ ಮೂಲಕ ದೈವಭಕ್ತಿಯನ್ನು ಸ್ಪಷ್ಟಪಡಿಸಿದಂತೆ ಇಲ್ಲಿ ದರ್ಶನ ಪಾತ್ರಿಗಳು ದೀವಟಿಗೆಗಳಿಂದ ತಮ್ಮ ಮೈಯೆಲ್ಲಾ ಇಟ್ಟುಕೊಳ್ಳುವ ಮೂಲಕ ದೈವಭಕ್ತಿನ್ನು ಸೃಷ್ಟಿಸುತ್ತಾರೆ.

ಇಂತಹ ಬಹುತೇಕ ಆಚರಣೆಗಳಲ್ಲಿನ ಪೂಜಾರಿ, ಅರ್ಚಕರ ಅಚಲವಾದ ದೃಢನಂಬಿಕೆ, ದೈವಭಕ್ತಿ ಮೆದುಳಿನಲ್ಲಿಯ 'ಎಂಡಾರ್ಫಿನ್' ಎಂಬ ರಾಸಾಯನಿಕ ವಸ್ತುವಿನ ಪ್ರಮಾಣದಲ್ಲಿ ವ್ಯತ್ಯಾಸ ಉಂಟುಮಾಡುವುದಿಲ್ಲ ಎಂದು ವಿಜ್ಞಾನ ಹೇಳುತ್ತದೆ. ವಿಜ್ಞಾನದ ಎಲ್ಲಾ ಸತ್ಯಗಳೇನಿದ್ದರೂ ಇಂತಹ ಸಂಪ್ರದಾಯ ಆಚರಣೆಗಳು ಸಮಾಜವನ್ನು, ಸಮುದಾಯವನ್ನು ನಿಯಂತ್ರಣದಲ್ಲಿಟ್ಟುಕೊಳ್ಳುವ ಶಕ್ತಿಯನ್ನು ಪಡೆದಿದೆ ಎಂಬುದೂ ವಾಸ್ತವ. ಸಂಪ್ರದಾಯ ಬಗೆದು ಹೋದರೆ ಆ ವ್ಯಕ್ತಿಯ ಇರವನ್ನು ಸಮಾಜ ಇಷ್ಟಪಡುವುದಿಲ್ಲ ಮತ್ತು ಮನ್ನಣೆ ನೀಡುವುದಿಲ್ಲ.

ಗೋಂದೋಳು ಕುಣಿತದ ಹಾಡುಗಳು ಕಥನ ರೂಪದಲ್ಲಿವೆ. ಪ್ರಾದೇಶಿಕವಾಗಿ ಭಿನ್ನತೆಯೂ ಕಂಡುಬರುವುದು. ಆದರೂ ಮೂಲ ಮಹಾಮ್ಮಾಯಿಯ ಮಹಿಮೆ ಹುಟ್ಟು ಪ್ರಸಾರಗಳ ವರ್ಣನೆಯೇ ಮುಖ್ಯವಾಗಿರುತ್ತದೆ. ಬಂಟ್ವಾಳ ತಾಲೂಕಿನ ಮಲಾರ್ ಕೋಡಿ ಅಣ್ಣು ನಾಯ್ಕರ ಅಭಿಪ್ರಾಯದಂತೆ ಗೋಂದೋಳು ಕುಣಿತದ ಹಾಡು ಸುಮಾರು ೪೮ ಶ್ಲೋಕಗಳನ್ನು ಒಳಗೊಂಡಿದೆ. ಇಂದಿನ ತಲೆಮಾರಿನಲ್ಲಿ ಯಾರಿಗೂ ಅಷ್ಟು ತಿಳಿದಿಲ್ಲ ಒಂದು ವೇಳೆ ಸರಿಯಾದ ರೀತಿಯಲ್ಲಿ ಕುಣಿಯುತ್ತಾ ೪೮ ಶ್ಲೋಕಗಳನ್ನು ಹಾಡಿದನೆಂದರೆ ಅಲ್ಲಿ ಮಹಾಮ್ಮಾಯಿಯ ಆವಾಹನೆಯಾಗಿ ದೇವಿ ಒಲಿದು ಬರುತ್ತಾಳೆಂದು ಹೇಳುತ್ತಾರೆ. ಸಮಯದ ಅಭಾವವೂ ಇರುವುದರಿಂದ ಕೇವಲ ಐದು, ಏಳು, ಅಥವಾ ಒಂಭತ್ತು ಚರಣಗಳನ್ನು ಮಾತ್ರ ಹಾಡುತ್ತಾರೆ.

ಹಾಡು - ೧

ಕಲ್ಲಿನ ಕೋಟೆ ಕಟ್ಟಿದಳಂತೆ ತಾಯೀ |
ಕಲ್ಲಿನ ಕೋಟೆ ಮುರಿದಾಳಂತೆ (ಮುಖ್ಯಗಾಯಕ)
ಲಾಗೇಲೋ ಪನಿ ಲಾಗೆಲಾಲೋ || (ಕುಣಿತಗಾರ)

ಮಣ್ಣಿನ ಕೋಟೆ ಕಟ್ಟಿದಳಂತೆ ತಾಯೆ |
ಮಣ್ಣಿನ ಕೋಟೆ ಮುರಿದಾಳಂತೆ ||

ಲಾಗೇಲೋ ಪನಿ ಲಾಗೆಲಾಲೋ |

ಕಬ್ಬಿಣ ಕೋಟೆ ಕಟ್ಟಿದಳಂತೆ ತಾಯೇ |

ಕಬ್ಬಿಣ ಕೋಟೆ ಮುರಿದಾಳಂತೆ ||

ಲಾಗೇಲೋ ಪನಿ ಲಾಗೆಲಾಲೋ ||

ಬೆಳ್ಳಿಯ ಕೋಟೆ ಕಟ್ಟಿದಳಂತೆ ತಾಯೇ |

ಬೆಳ್ಳಿಯ ಕೋಟೆ ಮುರಿದಾಳಂತೆ ||

ಲಾಗೇಲೋ ಪನಿ ಲಾಗೆಲಾಲೋ ||

ಚಿನ್ನದ ಕೋಟೆ ಕಟ್ಟಿದಳಂತೆ ತಾಯೇ |

ಚಿನ್ನದ ಕೋಟೆ ಮುರಿದಾಳಂತೆ ||

ಲಾಗೇಲೋ ಪನಿ ಲಾಗೆಲಾಲೋ ||

ವಜ್ರದ ಕೋಟೆ ಕಟ್ಟಿದಳಂತೆ ತಾಯೇ |

ವಜ್ರದ ಕೋಟೆ ಮುರಿದಾಳಂತೆ ||

ಲಾಗೇಲೋ ಪನಿ ಲಾಗೆಲಾಲೋ ||

ನಾಲ್ಕು ದೇಶವ ನೋಡುತ್ತಾಳೆ ತಾಯೇ |

ನಾಲ್ಕು ದೇಶವ ನೋಡುತ್ತಾಳೆ ||

ಲಾಗೇಲೋ ಪನಿ ಲಾಗೆಲಾಲೋ ||

ಹಾಡು - ೨

ಎಂಥಾ ಭೂಮಿಲಿ ಹುಟ್ಟಿದೆವ್ವ ಕಾಸ್‌ಗೊಳಗ ಪಾತಾಳದೇವಿ |

ಎಂತಾನಮರದಲ್ನಾಡೊ ದೈಲುಬಾ ಮಾಯಿಂಗಾರ್ದೆ ಬಾರೆ ಬಾ ||

ಎಂಥಾ ಕರ್ನಾಡಿಗೆಜ್ಜೆ ಹಿಡಕೊಂಡು ಬಂದು ಬಾರೋ ಮಾಯಿಂಗಾರ್ದ್ದೆ ಬಾರೆಬಾ |

ಎಂಥಾ ಚೊಲ್ನಾಡಿ ಬೆತ್ನ ಹಿಡಕೊಂಡು ಬಂದು ಬಾರೊ ಮಾಯಿಂದಾರ್ದ್ದೆ ಬಾರೆಬಾ |

ಎಂಥಾ ಸುರಾಭೂಮಿ ಪರದೆ ವ ದೇವ ಪರಶುರಾಮ ಸೃಷ್ಟಿ ||

ಎಂಥ ಬ್ರದಮಾದಿ ಬಡಕಾನು ಚೆಂಬ ಯಬಗಾಡ ಸಗ್ಡ ಬೂರಾಯೇ |
ಈ ಯಬಗಾಡ ಸೆಗ್ಡ ಬೂರಾಯಿ ಒಯಿಸೊಲೇ ಮಹಮ್ಮಾಯೇ |
ಈ ಮಹಮ್ಮಾಯಿಂಚೆ ಪೇರ್ದ್ದಪೆರ  ಬೆಂಬಗೆ ಜನಿಪೇರಾಂಬೇ |
ಈ ಮಹಮ್ಮಾಯಿಂಚೆ ಪೇರ್ದ್ ಪೆರಬೆಂಬ ಬತ್ತನಿ ಪೇರಾಂಬೇ |
ಓಮಚೆ ನವೋನಿಗೆ ಚೆಂಬ ಒಮಚೆನವೋನಿಯೇ | ಐಕಲ್‌ರಂಬೇತೆ ನವೋನಿಗೆ ಚೆಂಬ ಐಕಲ್ ರೆಂಬೆತೆನವೋನಿಯೇ
ದಿಗದಂಬೇತೆ ನವೋನಿಗೆ ಚೆಂಬ ದಿಗದಂಬೇತೆನವೋನಿಯೇ | ಐಸೀ ಬೀರ್‌ದಾವುಲಿಗೆ ಚೆಂಬ ತುಳಸೀ ಬಿರ್‌ದಾವುಲಿಯೇ
ಎನೆಂದಾಬುಲು ಒಯಿನೊಲಿಗೆ ಚೆಂಬ ಸಂಕೆಸೂರು ಒಯಿಸೋಲೇ |

ಬೌರೆವ ಬೌರೆವ ಕಾಲೇ ನೀಲಾದೇವಾ | ಬವೋನುದಾಲೆ ಅನುಬಸ್ರಿಪುಲ |
ಬಸ್ರೀಪುಲರಂಗ್ ಪರಿಮಲ ಕೆವುನಿಗೆಲಾ ದೇಲಾ | ಬವೋನು ದಾಲೆಮನು ಪಿಂಗಾರೇಪುಲ |
ಪಿಂಗರೆ ಪುಲರಂಗ್ ಪರಿಮಲ ಕೆವುನಿಗೆಲಾ ದೇವ | ಬವೊನು ದಾಲೆಮನು ಮಲ್ಲಿಗೇಪುಲ |
ಮಲ್ಲಿಗೆ ಪುಲರಂಗ್ ಪರಿಮಳ ಕೆವುನಿಗೆಲಾ ದೇವಾ |

ಪಸ್ತಸಂಬ್ರಪರಣೆ ಪಲ್ಲಸಂಕೆ ಸೂರುದೈತೆ ೀ | ಸಂಕೆ ಸೂರು ದೈತೆ ಚೆಂಬ ಕಾಂಡಿಲೆಯೇರೊಂಡು |
ರೊಂಡು ಕಾಡೂನು ಚೆಂಬ ಗುಮ್ಮಟೆ ಕಡವಿಲೆ | ರೊಂಡು ಕಾಡೂನು ಚೆಂಬ ಚೌಂಡಿಗೆ ಕಡವಿಲೆ |
ಚೌಂಡಿಗೆ ಕೂಡೂನು ಚೆಂಬ ದಾಂತ್ ಕಡವಿಲೆ | ದಾಂತ್ ಕಾಡೂನು ಚೆಂಬ ಜೀಬ್ ಕಡವಿಲೆ |

ಒ ಹಿಂದೆಂತ ನೀನು ಬಾರೆಯ್ಯ ಪರಶುರಾಮ | ಮುಂದೆಂತ ನಾನು ಹೋಗುತ್ತಲೇ |
ಪರಶುರಾಮ ಮಗನಂತೆ ಪರಮಕಲ್ಯಾನಂತೆ | ಪರಶುರಾಮ ಮಗನಂತೆ ಪರಮಕಲ್ಯಾ |
ಕೋಟೆಲಿದಾನಂತೆ ಎಲೇ ಜೋಡೋ ಸ್ವಲ್ಪ | ಕೋಟೆಲಿದಾನಂತೆ ಎಲೇ ಜೋಡೋ |
ಆಕಾಶ ಮೇಲೆ ತಿರುಗಿದಳೋ ಮಹಾದೇವಿ | ಆಕಾಶ ಮೇಲೆ ತಿರುಗಿದಾಲಂತೆ |

ನುಡಿರೆಯ್ಯ ಮಾರಿಯನೋಡೋಮಾತು ತಾಯೇ | ನುಡಿರೆಯ್ಯ ಮಾರಿಯ ನೋಡುತ್ತಲೇ |
ಮನೆ ಮನೆ ದೇವಿಯಂತೆ ನೋಡೋ ಮಾತು ತಾಯೆ | ಮನೆ ಮನೆ ದೇವಿಯಂತೆ ನೋಡುತ್ತಲೇ |
ಭೂಮಿದೇವಿಯಂತೆ ಹುಟ್ಟಿಯಾಲೇ ಮಹಾದೇವಿ | ಭೂಮಿದೇವಿಯಂತೆ ಹುಟ್ಟಿಯಾಲಂತೆ |

ಭಕ್ತರ ಮನೆಗೆಂತ ಹೋದಾಳೋ ಮಹಾದೇವಿ | ಭಕ್ತರ ಮನೆಗೆಂತ ಹೋದಾಳೋ |

ಕೋಟೆಪೇಟೆನಂತೆ ತಿರುಗಿದಳೋ ಮಹಾದೇವಿ ೯ ಕೋಟೆ ಪೇಟಿನಂತೆ ತಿರುಗಿದಳಂತೆ |

ಅಗ್ನಿ ಪಾತ್ರವನ್ನು ಧರಿಸಿಹಳೊ ಮಾದೇವಿ | ಅಗ್ನಿ ಪಾತ್ರವನ್ನು ಧರಿಸಿಹಳಂತೆ ||

**ಹಾಡು - ೩**

ಮಹಾಮಾಯಿ ಮಹಾದೇವಿ ಹುಟ್ಯಾಳೊ|

ಮಾಯಾ ರಾಜ್ಯದಲಿ ಹುಟ್ಟಿದಲೋ || ಸೊ ||

ಲಾಗೇಲೋ ಷನಿ ಲಾಗೆಲಾಲೊ |

- - - - - - - - - - - - - - - - - -

- - - - - - - - - - - - - - - - - -

- - - - - - - - - - - - - - - - - -

- - - - - - - - - - - - - - - - - -

**ಜಪತಪ**

ಸೂರ್ಯನ ಜಪವ ಮಾಡ್ಯಾಳೋ ತಾಯಿ |

ಸೂರ್ಯನ ಜಪವ ಮಾಡ್ಯಾಳೋ || ಸೊ ||

ಚಂದ್ರನ ಜಪವ ಮಾಡ್ಯಾಳೋ ತಾಯಿ |

ಚಂದ್ರನ ಜಪವ ಮಾಡ್ಯಾಳೋ ತಾಯಿ || ಸೊ ||

- - - - - - - - - - - - - - - - - -

- - - - - - - - - - - - - - - - - -

**ರೋಗಸೃಷ್ಟಿ**

ಒಂದೊಂದು ಜಪಕೆ ಒಂದೊಂದು ರೋಗವ ಮಾಡ್ಯಾಳೋ ದೇವಿ |

ಒಂದೊಂದು ರೋಗವ ಮಾಡ್ಯಾಳೋ || ಸೊ ||

- - - - - - - - - - - - - - - - - -

- - - - - - - - - - - - - - - - - -

ಪ್ರಸರಣ

ಅಂಬರ ಮಾರ್ಗ ನೋಡ್ಯಾಳೋ ದೇವಿ |

ಅಂಬರ ಮಾರ್ಗ ನೋಡ್ಯಾಳೋ || ಸೊ ||

ಒಂದೊಂದು ಮನೆಗೆ ಒಂದೊಂದು ರೋಗವ ಹಾಕ್ಯಾಳೋ ದೇವಿ |

ಒಂದೊಂದು ರೋಗವ ಹಾಕ್ಯಾಳೋ || ಸೊ ||

- - - - - - - - - - - - - - - - - -

- - - - - - - - - - - - - - - - - - -

ನಿವಾರಣೆ

ರಾಶಿ ಪೂಜೆಯ ಮಾಡ್ಯಾರಂತೆ ದೇವಿ |

ರಾಶಿ ಪೂಜೆಯ ಮಾಡ್ಯಾರಂತೆ || ಸೊ ||

- - - - - - - - - - - - - - - - - - -

- - - - - - - - - - - - - - - - - - -

ಸಾವಿರ ಮನೆಯ ಸಾವಿರ ರೋಗವ ತೆಗೆದಾಳೋ ದೇವಿ |

ಸಾವಿರ ರೋಗವ ತೆಗೆದಾಳೋ || ಸೊ ||

ಹಾಡು - ೪

೧

ಭಕ್ತಿ ಗೋಂದೋಳು ಗಾ ಮಾಯೆ ಶಕ್ತಿ ಗೋಂದೋಳು ಗಾ |

ನಾಚ್ ಗೋಂದೋಳು ಗಾ ಮಾಯೆ ಕೇಳ್ ಗೋಂದೋಳು ಗಾ ||

ಪ್ರೀತಿ ಗೋಂದೋಳು ಗಾ ಮಾಯೆ ನೀತಿ ಗೋಂದೋಳು ಗಾ |

ಸತ್ಯ ಗೋಂದೋಳು ಗಾ ಮಾಯೆ ನಿತ್ಯ ಗೋಂದೋಳು ಗಾ ||

ದಾಂಚಿ ಗೋಂದೋಳು ಗಾ ಮಾಯೆ ಅರಿಮ್ಮೆ ಗೋಂದೋಳು ಗಾ |

ಶಾಂತಿ ಗೋಂದೋಳು ಗಾ ಮಾಯೆ ಭೀತಿ ಗೋಂದೋಳು ಗಾ ||

ಸೌಖ್ಯ ಗೋಂದೋಳು ಗಾ ಮಾಯೆ ಸಂತಸ ಗೋಂದೋಳು ಗಾ |

ತೃಪ್ತಿ ಗೋಂದೋಳು ಗಾ ಮಾಯೆ ಮುಕ್ತಿ ಗೋಂದೋಳು ಗಾ ||
ಲಾಗೇಲೋ ಪನಿ ಲಾಗೇಲಾಲೋ ||

೨

ಅಂಬಾ ಓ ಯೆಂಬಾ ಜಗದಂಬಾ ಮಹಮ್ಮಾಯೆ |
ಎಲ್ಲಾ ತರದ ಹೂಗಳಲ್ಲೂ ಇರುವಳಮ್ಮಾ ಮಾಯೆ ||
ಮಲ್ಲಿಗೆ ಪುಷ್ಪದಲ್ಲಿ ಇಹಳಮ್ಮಾ ಮಾಯೇ |
ಗೋರಂಟಿ ಪುಷ್ಪದಲ್ಲಿ ಇಹಳಮ್ಮಾ ಮಾಯೇ |
ಸಂಪಿಗೆ ಪುಷ್ಪದಲ್ಲಿ ಇಹಳಮ್ಮಾ ಮಾಯೇ |
ಕೇದಿಗೆ ಪುಷ್ಪದಲ್ಲಿ ಇಹಳಮ್ಮಾ ಮಾಯೇ |
ತುಳಸಿಯ ದಳದಲ್ಲಿ ಇಹಳಮ್ಮಾ ಮಾಯೇ |
ಅಬ್ಬಲ್ಲಿಗೆ ಹೂವಲ್ಲಿ ಇಹಳಮ್ಮಾ ಮಾಯೇ |
ಕಬ್ಬಿನ ಸಿಹಿಯಲ್ಲೂ ಇಹಳಮ್ಮಾ ಮಾಯೇ |
ಲಾಗೇಲೋ ಪನಿ ಲಾಗೆಲಾಲೋ ||

೩

ಅಂಬಾ ಓ ಯೆಂಬಾ ಜಗದಂಬಾ ಮಹಮ್ಮಾಯೆ |
ಸಂಜೆ ಮಲ್ಲಿಗೆಯಲ್ಲೂ ಇಹಳಮ್ಮ ಮಾಯೆ ||
ದುಂಡು ಮಲ್ಲಿಗೆಯಲ್ಲೂ ಇಹಳಮ್ಮ ಮಾಯೆ |
ಚೆಂಡು ಮಲ್ಲಿಗೆಯಲ್ಲೂ ಇಹಳಮ್ಮ ಮಾಯೆ ||
ಕಸ್ತೂರಿ ಮಲ್ಲಿಗೆಯಲ್ಲೂ ಇಹಳಮ್ಮ ಮಾಯೆ |
ಜಾಜಿ ಮಲ್ಲಿಗೆಯಲ್ಲೂ ಇಹಳಮ್ಮ ಮಾಯೆ ||
ಸುಗಂದಿ ಪುಷ್ಪದಲ್ಲು ಇಹಳಮ್ಮ ಮಾಯೆ |
ಹಿರಿಗಾರದೆಸಳಲ್ಲು ಇಹಳಮ್ಮ ಮಾಯೆ ||
ನಾಗ ಸಂಪಿಗೆಯಲ್ಲು ಇಹಳಮ್ಮ ಮಾಯೆ |

ಬಿಲ್ವ ಪತ್ರೆಯಲ್ಲು ಇಹಳಮ್ಮ ಮಾಯಿ ||
ಲಾಗೇಲೋ ಪನಿ ಲಾಗೆಲಾಲೋ ||

೪

ಅಂಬಾ ಓ ಯೆಂಬಾ ಜಗದಂಬಾ ಮಹಮ್ಮಾಯಿ |
ಮಾಮ್ಮಾಯಂಚಿ ದೂತೊ ಭೈರವ ದೇವಾ ||
ಕಾಶಿ ಕಾಲ ಭೈರವನೆಂದು ಕರೆದರು ತಾಯೇ |
ಅಗ್ನಿ ಭೈರವನೆಂದು ಕರೆದರು ತಾಯೇ ||
ಶಕ್ತಿ ಭೈರವನೆಂದು ಕರೆದರು ತಾಯೇ |
ರುದ್ರ ಭೈರವನೆಂದು ಕರೆದರು ತಾಯೇ ||
ಆಕಾಶ ಭೈರವನೆಂದು ಕರೆದರು ತಾಯೇ |
ಪಾತಾಳ ಭೈರವನೆಂದು ಕರೆದರು ತಾಯೇ ||
ರಕ್ತ ಭೈರವನೆಂದು ಕರೆದರು ತಾಯೇ |
ಲಾಗೇಲೋ ಪನಿ ಲಾಗೇ ಲಾಲೋ

೫

ಅಂಬಾ ಓ ಯೆಂಬಾ ಜಗದಂಬಾ ಮಹಮ್ಮಾಯೇ |
ಸತಾದೆಯ್ಯಾರ್ ಪೈಲಣೆ ಪೊಡ್ಯೋಲಂಕೇಶ್ವರ್ ದೈತ್ ||
ದೈತಾಂಚಿ ಕಡಲೆ ತಲಾತ್ |
ತಲಾತ್ ಕಡೂಣ್ ಪಂಚಾರತ್ ಕಡವಲ್ಲೆ ||
ದೈತಾಂಚಿ ಕಡಲ್ಲೇ ಕೇಲಸ್ |
ಕೇಂಸ್ ಕಡೂಣ್ ಚವಲ ಕಡವಲ್ಲೆ ||
ದೈತಾಂಚಿ ಕಡಲ್ಲೇ ಬೊಟ |
ಬೊಟ ಕಡೂಣ್ ದಿವ್ಯೆಕಡವಲ್ಲೆ ||
ದೈತಾಂಚಿ ಕಡಲ್ಲೇ ಪೊಟ್ |

ಪೊಟ್ ಕಡೂಣ್ ಉದ್ಕು ಕಡವಲ್ಲೆ ||

ದೈತಾಂಚಿ ಕಡಲ್ಲೇ ಟಿಕ್ಲೆ |

ಟಿಕ್ಲೆ ಕಡೂಣ್ ಶ್ರುತಿ ಕಡವಲ್ಲೆ ||

ದೈತಾಂಚಿ ಕಡಲ್ಲೆನಾಕ್ |

ನಾಕ್ ಕಡೂಣ್ ಶಂಕ್ ಕಡವಲ್ಲೆ ||

ಲಾಗೇಲೋ ಪನಿ ಲಾಗೇಲಾಲೋ ||

೬

ಅಂಬಾ ಓ ಯೆಂಬಾ ಜಗದಂಬಾ ಮಹಮ್ಮಯೇ |

ದೈತಾಂಚಿ ಕಡಲ್ಲೇ ಅಂತ್ ||

ಅಂತ್ ಕಡೂಣ್ ಮಾಳ್ ಕಡವಲ್ಲೆ||

ದೈತಾಂಚಿ ಕಡಲ್ಲೆ ಕಾಣ್ |

ಕಾಣಂ ಕಡೂಣು ತಾಳ ಕಡವಲ್ಲೆ |

ಲಾಗೇಲೋ ಪನಿ ಲಾಗೇಲಾಲೋ ||

ಶೃಂಗಾರ ಇಲ್ಲಿವುಂಗಾಮಾಯೆ ಶೃಂಗಾರ್ ಇಲ್ಲೆವುಂಗಾ |

ಪೆಣ್ಣೆಕ್ಲೆ ಪೊಳು ವೋರ್ ಮಾಯೆ ಶೃಂಗಾರ್ ಇಲ್ಲೆವುಂಗಾ ||

ಪಿಂಗಾರ್ ಪೊಳ್ ವೋರ್ ಮಾಯೆ ಶೃಂಗಾರ್ ಇಲ್ಲೆವುಂಗಾ |

ಮಲ್ಲಿಗೆ ಪುಳವೋರ್ ಮಾಯೆ ಶೃಂಗಾರ್ ಇಲ್ಲೆವುಂಗಾ |

ಸಂಪಿಗೆ ಪೊಳ್‌ವೋರ್ ಮಾಯೆ ಶೃಂಗಾರ್ ಇಲ್ಲೆವುಂಗಾ |

ಮಂದಾರ ಪೊಳ್‌ವೋರ್ ಮಾಯೆ ಶೃಂಗಾರ್ ಇಲ್ಲೆವುಂಗಾ ||

ತುಳಸಿ ಪೊಳ್‌ವೋರ್ ಮಾಯೆ ಶೃಂಗಾರ್ ಇಲ್ಲೆವುಂಗಾ ||

೭

ಸತಾ ದೆರ್ಯ್ಯಾ ಪೈಲಣೆ ಪೊಡ್ಯೊಲಂಕೇಸೂರ್ ದೈತ್ |

ವಾಂಚಿ ಕಳಾಂತ್ ಎಗೆ ಮಾಯೆ ದುರ್ಗಾಪರಮೇಶ್ವರಿ ||

ನಚೀತ್ ಏಗೆ ಮಾಯೆ ಎಂಸೇತ್ ಯೇ |

ಶಕ್ತಿಂತ್ ಏಗೆ ಮಾಯೆ ಭಕ್ತಿಂತ್ ಯೇ |

ಮಾಯೇಂತ್ ಏಗಾ ಮಾಯೆ ದವೇಂತ್ ಯೇ |

ಸೌಮ್ಯ ರೂಪಾಂತ್ ಏಗಾ ಮಾಯೆ ಉಗ್ರ ರೂಪಾಂತ್ ಯೇ |

ಕಾಳಿ ರೂಪಾಂತ್ ಏಗಾ ಮಯೆ ಚಂಡಿ ಕೆವೋಣ್ ಯೇ |

ಶಾರದೆ ವೋಣ್ ಏಗಾ ಮಯೆ ಚಂಡಿ ಸರಸ್ವತಿ ವೋಣ್ ಯೇ |

ದುರ್ಗೆ ವೋಣ್ ಏಗಾ ಮಯೆ ಬೈರವಿ ವೋಣ್ ಯೇ |

ಶಾಂಭವಿ ವೋಣ್ ಏಗಾ ಮಯೆ ಮುಕಾಂಬೆ ಕೆವೋಣ್ ಯೇ |

ಏಕ್ಯಾಂಸ್ ರಕ್ಷಣೆ ಕೇರ್ ಮಾಯೆ ಮಹಾಮಾಯೇ |

ವಿದ್ಯೆ ಬುದ್ಧಿ ಸೌಖ್ಯ ದೀಗೆ ಮಾಯೇ ಮಹಾಮಾಯೇ |

ಸುಖ ಸಂಪತ್ ದೀಗೆ ಮಾಯೇ ಮಹಾಮಾಯೇ |

ಲಾಗೇಲೋ ಪನಿ ಲಾಗೇಲಾಲೋ ||

### ೪.೨ ಭೈರವ ಪೂಜೆ

ಶಿವೋಪಾಸನೆ ಬಹಳ ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿದೆ. ವೇದ ಪೂರ್ವ ಯುಗದ ಸಿಂಧೂ ಕೊಳ್ಳದ ನಾಗರಿಕತೆಯ ಕಾಲದಲ್ಲಿಯೇ ಶಿವೋಪಾಸನೆ ಇತ್ತೆಂದು ಇತಿಹಾಸ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ''ಭಾರತದಲ್ಲಿ ಭೈರವನು ಪ್ರಚಲಿತವಿರುವ ನಂಬಿಕೆಯಲ್ಲಿ ಒಬ್ಬ ಗ್ರಾಮ ದೇವತೆ. ಭೈರವನು ಶಿವನ ಒಂದು ಅಂಶ. ರಾಕ್ಷಸ ಸ್ವಭಾವದ ಭೈರವನು ಹುಟ್ಟಿದ ತಕ್ಷಣ ದೇವತೆಗಳನ್ನೆಲ್ಲಾ ಶಿವನ ಅನುಮತಿಯಿಲ್ಲದೆ ನಿಗ್ರಹಿಸಿದ. ಅದರಿಂದ ಶಿವನು ಕೋಪಗೊಂಡು ಅವನನ್ನು ಒಂದು ಮರವಾಗಿ ಪರಿವರ್ತಿಸಿದನು. ಅನಂತರ ಶಾಂತಚಿತ್ತನಾಗಿ 'ಯಾರು ಈ ಭೈರವನನ್ನು ಮತ್ತು ದೇವತೆಯನ್ನು ಪೂಜಿಸುತ್ತಾರೋ ಅವರು ಯಥೇಚ್ಛವಾಗಿ ಪುರಸ್ಕೃತರಾಗುತ್ತಾರೆ.' ಎಂದು ತಿಳಿಸಿದನು. ಭೈರವನು ಹುಟ್ಟಿದೊಡನೆ ದೇವತೆಗಳನ್ನು ನಿಗ್ರಹಿಸಿ ಶಿವನ ಕೋಪ ಮತ್ತು ಶಾಪಕ್ಕೆ ಗುರಿಯಾಗಿ ಮರವಾದ್ದರಿಂದ ಆ ಮರಕ್ಕೆ 'ದಮನಕ' (ತಾತಿರಿ) ಎಂದೇ ಹೆಸರಾಗಿದೆ'' ಇಲ್ಲಿ ಉಲ್ಲೇಖಿಸಿದಂತೆ ಮರಾಟಿಗರ ಭೈರವನು ಮರಗಳಿಂದ ಕೂಡಿದ ಬನದಲ್ಲಿ ಆರಾಧಿಸಲ್ಪಡುತ್ತಾನೆ.

ತುಳು ನಿಘಂಟಿನಲ್ಲಿ ''ಭೈರವೆ (Bhairave) ೧. ಈಶ್ವರ: ಭೈರವ (God Shiva) ೨. ಶಿವನ ಒಂದು ಅವತಾರ ರೂಪದ ಭೂತ (A Man Festaion of God Shiva in from of a Bhuta) ಎಂದು ಅರ್ಥವನ್ನು ಹೇಳಿದ್ದಾರೆ. ಭೈರವಗ್ ಕರಿಪುನಿ-ಭೈರವ ಎಂಬ ಭೂತಕ್ಕೆ ಬಲಿ ಕೊಡುವ ಆಚರಣೆ (A Ritural of offesing Foods of Bhirava)'' ಎಂದು ಹೇಳಲಾಗಿದೆ.

''ಕರ್ನಾಟಕದಲ್ಲಿ ಭೈರವ ಪೂಜೆಯು ಬಹುಶಃ ಕಾಪಾಲಿಕರಿಂದ ಬಂದಿರಬೇಕು. ಶೈವಧರ್ಮದ ಒಂದು ಶಾಖೆ ವಾಮಾಚಾರ ಪದ್ಧತಿಯು ಕಾಪಾಲಿಕರದ್ದು. ಏಳನೆಯ ಶತಮಾನದ ತಾಮ್ರಪಟಗಳಿಂದ ನಾಸಿಕ ಜಿಲ್ಲೆಯ ಕಾಪಾಲೇಶ್ವರ

ದೇವಸ್ಥಾನದಲ್ಲಿ ಕಾಪಾಲಿಕರಿದ್ದು, ಕೃಷ್ಣ ಮಿಶ್ರನ ಪ್ರಭೋದ ಚಂದ್ರೋದಯದ ಕಾಪಾಲಿಕರು ಮಹಾ ಭೈರವನ ಆರಾಧಕರಾಗಿದ್ದರು. ಅದೇ ತಾನೆ ಕಡಿದ ನರಮುಂಡಗಳ ರಕ್ತದಿಂದ ಭೈರವನನ್ನು ತೃಪ್ತಿ ಪಡಿಸುತ್ತಿದ್ದರು.''[೫] ಆದ್ದರಿಂದ ಬಹು ಹಿಂದಿನ ಕಾಲದಿಂದಲೇ ಭೈರವನಿಗೆ ಬಲಿ ಪದ್ಧತಿ ಮೂಲಕ ಪೂಜೆ ಸಲ್ಲುತ್ತಿತ್ತು ಎಂಬುದು ಸ್ಪಷ್ಟವಾಗುತ್ತದೆ.

ಚೆನ್ನಪ್ಪ ಗೌಡರ 'ಭೂತಾರಾಧನೆ ಜಾನಪದೀಯ ಅಧ್ಯಯನ' ಗ್ರಂಥದಲ್ಲಿ ಸುಮಾರು ೩೬೦ ತುಳುನಾಡಿನ ಭೂತಗಳ ಹೆಸರಿದ್ದು ಅದರಲ್ಲಿ ಭೈರವ ಭೂತವೂ ಒಂದು. ತುಳುನಾಡಿನಲ್ಲಿ ನಾಗಾರಾಧನೆಯ ಪರಿಕಲ್ಪನೆ ವೈಶಿಷ್ಟ್ಯಪೂರ್ಣವಾದುದು. ಪುರಾಣದ ಪ್ರಕಾರ ಸ್ಕಂದನೆಂಬ ಕಾರ್ತಿಕೇಯನನ್ನು ನಾಗರೂಪದಿಂದ ಸುಬ್ರಹ್ಮಣ್ಯನೆಂಬ ಹೆಸರಿನಲ್ಲಿ ಆರಾಧಿಸುವುದು. ನಾಡಿನ ಎಲ್ಲಾ ಊರುಗಳಲ್ಲಿ ಶಾಸ್ತಾವುಗಳೆಂಬ ಕಲ್ಲುಗಳು ನಾಗರೂಪಿಯಾದ ಸುಬ್ರಹ್ಮಣ್ಯನ ವಿಗ್ರಹಗಳಾಗಿವೆ. ಪ್ರಸಿದ್ಧ ಕ್ಷೇತ್ರವಾದ ಕುಕ್ಕೆ ಸುಬ್ರಹ್ಮಣ್ಯ, ಮಂಜೇಶ್ವರ, ಕುಡುಪು, ಕಾಳಾವರ ಹಾಗೂ ಇನ್ನಿತರ ಕ್ಷೇತ್ರಗಳಲ್ಲಿ ನಾಗವಿಗ್ರಹಕ್ಕೆ ಸುಬ್ರಹ್ಮಣ್ಯನ ಹೆಸರಿನಲ್ಲಿ ಪೂಜೆ ಸಲ್ಲುತ್ತದೆ. ಈ ಎಲ್ಲಾ ಪೂಜೆಗಳು ದೇವಕ್ರಿಯೆಯಲ್ಲಿ ವೈದಿಕ ರೂಪದಿಂದ ನಡೆದರೆ ಮರಾಟಿಗರ 'ಭೈರವ ಪೂಜೆ' ನಾಗನಿಗೆ ಅಸುರಕ್ರಿಯೆಯ ಮೂಲಕ ಸಲ್ಲುವುದು ವಿಶಿಷ್ಟವಾಗಿದೆ. ಬುಡಕಟ್ಟು ಜನರ ಆರಾಧನೆಗೂ ಇತರರ ಆರಾಧನೆಗೂ ಇರುವ ಭಿನ್ನತೆಯನ್ನು ಇಲ್ಲಿ ನಿಚ್ಚಳವಾಗಿ ಗುರುತಿಸಲು ಸಾಧ್ಯ.

''ತುಳುನಾಡಿನಲ್ಲಿ ಭೈರವ ಮತ್ತು ಗೋರಖನಾಥನನ್ನು ಪೂಜಿಸುವ ಜೋಗಿ ಪುರುಷ ಎಂಬ ಸಮುದಾಯವಿದ್ದು ಇವರು ಮರಾಠಿ ಮತ್ತು ತುಳುವನ್ನು ಮಾತನಾಡುವವರು.''[೬] (George Weston Brigge p. 47) ತುಳುನಾಡಿನಲ್ಲಿ ಇತರರೂ ಕೂಡ (ಮಲೆಕುಡಿಯ ಬುಡಕಟ್ಟು, ಭೈರರು ಒಕ್ಕಲಿಗರು) ಭೈರವನ ಆರಾಧಕರಾಗಿದ್ದಾರೆ.

ಕರ್ನಾಟಕದ ಎಲ್ಲಾ ಭಾಗಗಳಲ್ಲಿ ಭೈರವನ ಆರಾಧಕರಿದ್ದಾರೆ. ದೇವಕ್ರಿಯೆ ಮತ್ತು ಅಸುರಕ್ರಿಯೆಗಳ ಮುಖೇನ ಭೈರವನನ್ನು ಆರಾಧಿಸಲಾಗುತ್ತಿದೆ. ಭೈರವನು ಶಿವನ ಒಂದು ಅವತಾರವಾಗಿದ್ದು ಜನಪದ ದೈವವೆಂದು ಮದ್ಯ ಮಾಂಸಾದಿಗಳಿಂದ ಆರಾಧನೆಗೊಳ್ಳುವುದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಂಡು ಬರುತ್ತಿದೆ.

ಈ ಆಚರಣೆಯು ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ, ಪುತ್ತೂರು, ಬಂಟ್ವಾಳ ಮತ್ತು ಕೇರಳದ ಕಾಸರಗೋಡು ತಾಲೂಕುಗಳಲ್ಲಿ ಕಂಡು ಬರುತ್ತದೆ. ಜಿಲ್ಲೆಯ ಇತರ ಪ್ರದೇಶಗಳಲ್ಲಿ ವಿರಳವಾಗಿ ಆಚರಿಸಲ್ಪಡುತ್ತದೆ. ಮರಾಟಿಗರ ಪ್ರಮುಖ ಆಚರಣೆಗಳಲ್ಲಿ ಒಂದಾದ ಗೋಂದೋಳು ಪೂಜೆಯು ಅವರ ಆರಾಧ್ಯ ದೇವತೆಯ ಮಹಮ್ಮಾಯಿಯನ್ನು ಪೂಜಿಸುವ ಮೂಲಕ ಸಂತೃಪ್ತಿಪಡಿಸುವುದಾಗಿದೆ. ಭೈರವನ ಪೂಜೆಯ ಮೂಲಕವೇ ಅದರ ಆರಂಭ. ಭೈರವನನ್ನು ಮಹಮ್ಮಾಯಿಯ ಭಂಟನೆಂದು ನಂಬಿರುವ ಮರಾಟಿಗರು ಅಸುರ ಕ್ರಿಯೆಯಿಂದ ಭೈರವನನ್ನು ಪೂಜಿಸಿದರೆ ದೇವಕ್ರಿಯೆಯಿಂದ ದೇವಿಯನ್ನು ಆರಾಧಿಸುತ್ತಾರೆ. ಜಿಲ್ಲೆಯ ಪ್ರತಿಯೊಬ್ಬ ಮರಾಟಿಗನ ಜಮೀನಿನಲ್ಲಿ ಭೈರವನ ಬನಗಳನ್ನು ಕಾಣುತ್ತೇವೆ. ಭೈರವನ ಪೂಜೆಗಾಗಿ ಬನದಲ್ಲಿ ಕಲ್ಲು ಸ್ಥಾಪಿಸಿರುತ್ತಾರೆ. ಆ ಕಲ್ಲನ್ನು 'ಭೂತದ ಕಲ್ಲು' ಎಂದು ಕರೆಯುತ್ತಾರೆ. ಬನವು ಮುಖ್ಯವಾಗಿ ಕಾಸರಕನ ಮರ (ತುಳುಃ ಕಾಯರ್) ಮತ್ತು ಹಾಲೆ ಮರ (ತುಳುಃ

ಪಾಲೆಮರ) ಗಳನ್ನು ಹೊಂದಿರಲೇಬೇಕೆಂಬ ಸಂಪ್ರದಾಯವಿದೆ. ಇವುಗಳ ಜೊತೆಗೆ ಇತರ ಎಲ್ಲಾ ರೀತಿಯ ಗಿಡ ಮರಗಳನ್ನು ಬನ ಹೊಂದಿದ್ದು, ಮರದ ಬುಡದಲ್ಲಿರುವ ಕಲ್ಲುಗಳೇ ಭೈರವನ ಪ್ರತೀಕ.

ಮರಾಟಿಗರು ಭೈರವನ ಬಗೆಗೆ ವಿಶಿಷ್ಟ ನಂಬಿಕೆಯನ್ನಿರಿಸಿಕೊಂಡಿದ್ದಾರೆ. ಭೈರವನು ನಾಗನ ರೂಪದಲ್ಲಿ ನಮಗೆ ಅಭಯ ನೀಡುತ್ತಾನೆ. ತಮ್ಮ ಸುಖ ಸಂಸಾರ, ಬೆಳೆ, ಜಾನುವಾರು, ಜಮೀನುಗಳ ಗಡಿ ರಕ್ಷಣೆಯನ್ನು ಮಾಡುತ್ತಾನೆ, ನಂಬಿದಲ್ಲಿ ಯಾವತ್ತೂ ನಮ್ಮ ಕೈ ಬಿಡುವುದಿಲ್ಲ ಎಂಬ ಆಶಯ ಅವರದು. ''ಭೈರವನು ನಾಗನ ರೂಪದಲ್ಲಿ ಭಕ್ತರಿಗೆ ದರ್ಶನ ನೀಡುವನೆಂಬ ನಂಬಿಕೆಯಿದೆ. ಭೈರವನ ಕ್ಷೇತ್ರದಲ್ಲಿ ನಾಗನಿಗೂ ಪೂಜೆ ಸಲ್ಲುತ್ತದೆ.'' ಎಂಬ ಹೇಳಿಕೆ ಉಲ್ಲೇಖನೀಯ. ಈ ಉಲ್ಲೇಖಕ್ಕೆ ಪೂರಕವೆಂಬಂತೆ ಮರಾಟಿಗರು ಭೈರವ ಬನಗಳೆಲ್ಲ ಸೊಂಪಾಗಿ ಗಿಡ ಮರಗಳಿಂದ ಕೂಡಿರುವುದು ಮತ್ತು ಅಕಸ್ಮಾತ್ ನಾಗರಹಾವು ಕಂಡರೆ ಯಾವುದೇ ರೀತಿಯ ಕಷ್ಟ ಕೊಡದೇ ಅದರ ಪಾಡಿಗೆ ಬಿಟ್ಟುಬಿಡುವುದನ್ನು ನೋಡಬಹುದಾಗಿದೆ. ಪ್ರಾಣಿ ಶಾಸ್ತ್ರಜ್ಞರ ಪ್ರಕಾರ ಹೂಮಣ್ಣಿನ ತಾಣ ಸರ್ಪದ, ನಾಗರಹಾವಿನ ಸಂತಾನಾಭಿವೃದ್ಧಿಗೆ ಪೂರಕ ಪರಿಸರವಾಗುತ್ತದೆ. ಶಿಷ್ಟರು ನಾಗರಹಾವಿಗೆ ಹಾಲೆರೆದು ಪೂಜಿಸಿದರೆ ಪರಿಶಿಷ್ಟರು, ಬುಡಕಟ್ಟು ಜನರು ಬಲಿಪದ್ಧತಿಯ ಮೂಲಕ ಪೂಜಿಸುವುದನ್ನು ಈ ಭೈರವ ಆರಾಧನೆಯ ಮೂಲಕ ನೋಡುತ್ತೇವೆ.

ನಿಗದಿಪಡಿಸಿದ ದಿನ ಪೂಜೆಯ ಪೂಜಾರಿಯು ಮಡಿಯಿಂದಿದ್ದು ಅಕ್ಕಿಯಿಂದ ತಯಾರಿಸಿದ ಉಪಹಾರ ಸೇವಿಸುವಂತಿಲ್ಲ. ಮಧ್ಯಾಹ್ನ ಬನಕ್ಕೆ ಹೋಗಿ ಸ್ವಚ್ಛಗೊಳಿಸಿ ಬರುತ್ತಾರೆ. ಈಡು ಬಿಟ್ಟ ಕೋಳಿಗಳಿಗೆ ಅನ್ನಾಹಾರ ನೀಡಿ ತಾನು ಆಹಾರ ಸ್ವೀಕರಿಸುತ್ತಾನೆ. ಪುರುಷರಿಬ್ಬರು ಅಡುಗೆಯ ತಯಾರಿ ಮಾಡುತ್ತಾರೆ. ಅಕ್ಕಿರೊಟ್ಟಿ, ಅನ್ನ, ಮೀನಿನ ಸಾರು (ತೊರಕೆ ಮೀನು ಮತ್ತು ಹುರುಳಿ) ಇವು ಭೈರವ ಬನದಲ್ಲಿ ಬಡಿಸುವ (ಎಡೆ ಇಡುವ) ಆಹಾರಗಳು.

ಗೋಂದೋಳು ಪೂಜೆಯ ದಿನ ಸಾಯಂಕಾಲ ನಾಲ್ಕು, ಐದು ಗಂಟೆ ಸಮಯಕ್ಕೆ ಭೈರವ ಬನಕ್ಕೆ ಹೋದರೆ, ಇತರೆ ಕಾಲಾವದಿಯ ಆಚರಣೆಗಳಲ್ಲಿ ಸೂರ್ಯಾಸ್ತಮಾನದ ನಂತರವೇ ಬರುತ್ತಾರೆ. ಆಮಂತ್ರಿತ ಭಕ್ತಾಧಿಗಳೆಲ್ಲರೂ (ಸ್ತ್ರೀಯರನ್ನು ಹೊರತುಪಡಿಸಿ) ಭೈರವನ ಬನಕ್ಕೆ ಬರುತ್ತಾರೆ. ಸ್ಥಾಪಿತ ಕಲ್ಲಿನ ಮೇಲೆ ಮೊದಲು ಬೆಳ್ತಿಗೆ ಅಕ್ಕಿ ಮತ್ತು ತೆಂಗಿನಕಾಯಿಯನ್ನು ಇಟ್ಟು ಆರಂಭಿಕ ಪ್ರಾರ್ಥನೆ ಮಾಡುತ್ತಾರೆ. ಭಕ್ತಾಧಿಗಳು ಭಕ್ತಿಪೂರ್ವಕವಾಗಿ ಅಗರ ಬತ್ತಿ, ತೆಂಗಿನಕಾಯಿ ಮತ್ತು ಸಾರಾಯಿಯನ್ನು ತಂದು ಅರ್ಪಿಸುವುದು ಕಂಡು ಬರುತ್ತದೆ. ಬನದ ನಾಲ್ಕು ದಿಕ್ಕಿಗೆ ನಾಲ್ಕು ಬಾಳೆಲೆಯಲ್ಲಿ ಕಜ್ಜಾಯ (ಹುರುಳಿ ಮತ್ತು ಮೀನು) ವನ್ನು ಇಡಲಾಗುತ್ತದೆ. ನಂತರ ಅಕ್ಕಿ, ತೆಂಗಿನ ಕಾಯಿಯನ್ನು ತೆಗೆದು ಅನ್ನ , ರೊಟ್ಟಿಯನ್ನು ಕಲ್ಲಿನಲ್ಲಿಟ್ಟು ಪ್ರಾರ್ಥಿಸಿ ಕೋಳಿಗಳನ್ನು ರಕ್ತತರ್ಪಣವನ್ನು ನೀಡಲಾಗುತ್ತದೆ. ಒಂದು ಕ್ಷಣ ಎಲ್ಲರೂ ಮೌನವಾಗಿ ಬೇರೆ ಕಡೆ ತಮ್ಮ ಲಕ್ಷ್ಯ ವಹಿಸುವಂತೆ ಮಾಡಲಾಗುತ್ತದೆ. ತೀರ್ಥ ಪ್ರಸಾದವಾಗಿ ಸಾರಾಯಿ, ಶೇಂದಿಯನ್ನು, ಬೇಯಿಸಿದ ಮೀನು ಹುರುಳಿಯನ್ನು ನೀಡಲಾಗುತ್ತದೆ. ಪೂಜಾರಿ ಭಕ್ತಾಧಿಗಳೆಲ್ಲರಿಗೂ ತೆಂಗಿನ ಕಾಯಿ ಒಡೆದು ಭೈರವನ ಹೆಸರಿನಲ್ಲಿ ಆಶೀರ್ವಾದ ಮಾಡುತ್ತಾನೆ. ಅಂತಿಮವಾಗಿ ಬನದ ಸ್ವಲ್ಪ ದೂರದಲ್ಲಿ ಲಘು ಭೋಜನ ಮಾಡುವುದರೊಂದಿಗೆ ಪೂಜೆಯು ಮುಕ್ತಾಯವಾಗುತ್ತದೆ. ಹರಕೆಯ ಹೆಸರಲ್ಲಿ ತಂದು ಬಲಿಕೊಟ್ಟ ಕೋಳಿಗಳನ್ನು ಅವರವರ ಮನೆಗೆ ಒಯ್ಯುತ್ತಾರೆ.

ಭೈರವನ ಪೂಜೆಯು ಮೂರು ವಿವಿಧ ಸಂದರ್ಭದಲ್ಲಿ ನಡೆಯುವುದು ಕಂಡು ಬರುತ್ತದೆ. ಮೊದಲನೆಯದಾಗಿ ಭೈರವ ಪೂಜೆಯನ್ನು ವಾರ್ಷಿಕವಾಗಿ ನಿಗದಿಪಡಿಸಿದ ದಿನ ಆಚರಿಸುವಂಥದ್ದು. ಇದನ್ನು 'ಕಾಲಾವಧಿ ಪೂಜೆ', ಕಾಶಿಕಾಲ ಭೈರವ ಎಂದೂ ಕರೆಯುತ್ತಾರೆ.

ಮರಾಟಿಗರ ಪ್ರತಿಯೊಂದು ಕುಟುಂಬಕ್ಕೂ ತಮ್ಮ ಮನೆಯಲ್ಲಿ ಆರಾಧ್ಯದೇವತೆ ಮಹಮ್ಮಾಯಿಯ ಗೋಂದೋಳು ಪೂಜೆ ಮಾಡಬೇಕೆಂಬ ಮಹದಾಸೆ ಇರುತ್ತದೆ. ಕುಟುಂಬದ ತರವಾಡು (ಪ್ರಧಾನ) ಕುಟುಂಬದ ಜಮೀನಿನಲ್ಲಿ ಮಾತ್ರ ಭೈರವನ ಬನವಿರುತ್ತದೆ. ಒಂದು ವೇಳೆ ಭೈರವನ ಬನವಿರದ ಮನೆಯಲ್ಲಿ ಗೋಂದೋಳು ಪೂಜೆ ನಡೆಯುವ ಸಂದರ್ಭದಲ್ಲಿ ತಾತ್ಕಾಲಿಕವಾಗಿ ಮನೆಯಿಂದ ಸ್ವಲ್ಪ ದೂರದಲ್ಲಿ ಎರಡು ಕಲ್ಲುಗಳನ್ನು ಹಾಕಿ ಭೈರವನನ್ನು ಅಸುರ ಕ್ರಿಯೆಯಲ್ಲಿ ತೃಪ್ತಿಪಡಿಸಲಾಗುತ್ತದೆ. ನಂತರ ಕಲ್ಲುಗಳನ್ನು ತೆಗೆದು ಮುಂದುವರಿಯುತ್ತಾರೆ. ಅದನ್ನು 'ಮೂಡು ಕಾಲ ಭೈರವ' ಎಂದು ಕರೆಯುತ್ತಾರೆ.

ಅಗ್ನಿ ಭೈರವ ಎಂಬುದಾಗಿ ಅತೀ ವಿರಳವಾಗಿ ಭೈರವನನ್ನು ಪೂಜಿಸುವುದು ಇತ್ತೆಂದು ಹಿರಿಯರು ತಮ್ಮ ಅನುಭವಗಳನ್ನು ಬಿಚ್ಚಿಡುತ್ತಾರೆ. ಒಂದು ಕುಟುಂಬಕ್ಕೆ ತೀವ್ರತರದ ಮಾನಸಿಕ, ದೈಹಿಕ ಅಥವಾ ಜಾನುವಾರು, ಕೃಷಿ ಬೆಳೆಗಳಿಗಾಗಲೀ ಕಷ್ಟಕಾರ್ಪಣ್ಯಗಳು ಎದುರಾದಾಗ ಯಜಮಾನ ಪ್ರತಿ ಮಂಗಳವಾರ ಅಥವಾ ಶುಕ್ರವಾರ ವ್ರತಾಚರಣೆಯಲ್ಲಿ ಭೈರವನನ್ನು ಸ್ತುತಿಸಿ ತೆಂಗಿನಕಾಯಿಯನ್ನು ಬನದ ಕಲ್ಲಿಗೆ ಒಡೆಯುತ್ತಾನೆ. ಸತತವಾಗಿ ಹದಿನೆಂಟು ವಾರ ಈ ರೀತಿಯಲ್ಲಿ ಭೈರವನನ್ನು ಭಜಿಸಿ ಕಷ್ಟದ ದಾರಿ ತೋರಿಸಿದವರನ್ನು ಶಿಕ್ಷೆಗೆ ಒಳಪಡಿಸಬೇಕೆಂದು ಪ್ರಾರ್ಥಿಸುತ್ತಾರೆ.

ಪ್ರತಿಯೊಂದು ಸಮುದಾಯಗಳಲ್ಲಿಯೂ ಆಚರಣೆ ಸಂಪ್ರದಾಯಗಳಲ್ಲಿ ವಿಧಿನಿಷೇಧಗಳು ಪರಂಪರಾಗತವಾಗಿ ಬಂದಿರುತ್ತವೆ. ಇಂದು ಇಂತಹ ನಿಷೇಧಗಳು ಕೆಲವು ಸಮುದಾಯ, ಸಮಾಜಗಳಲ್ಲಿ ತಮ್ಮ ಬಲ ಕಡಿಮೆಯಾದರೆ ಇತರೆ ಕೆಲವು ಸಮುದಾಯಗಳಲ್ಲಿ ಇಂದಿಗೂ ಕಟ್ಟುನಿಟ್ಟಾಗಿ ಪಾಲಿಸಲ್ಪಡುವುದನ್ನು ಸಂಶೋಧನೆಗಳು ತಿಳಿಸುತ್ತವೆ. ಭೈರವನ ಆಚರಣೆಯಲ್ಲಿ ಕೆಲವೊಂದು ವಿಧಿ ನಿಷೇಧಗಳು ಇಂದಿಗೂ ಪಾಲಿಸಿಕೊಂಡು ಬಂದಿರುವುದು ಕಂಡು ಬರುತ್ತದೆ.

೧. ಭೈರವನ ಪೂಜೆ ಮಾಡಲು ಮರಾಟಿಗರ ಹೊರತು ಇತರ ಜಾತಿಗಳಿಗೆ ನಿಷೇಧವಿದೆ. ಪೂಜೆಗಾಗಿನ ಅಡುಗೆಯನ್ನು ಕೂಡ ಮರಾಟಿಗರೇ ಮಾಡಬೇಕು.

೨. ಭೈರವನ ಬನಕ್ಕೆ ಸ್ತ್ರೀಯರಿಗೆ ಪ್ರವೇಶವಿರುವುದಿಲ್ಲ. ಮುಟ್ಟಿನ ಸಂದರ್ಭದಲ್ಲಿ ಸ್ತ್ರೀಯರು ಬನದ ಹತ್ತಿರ ಸುಳಿಯುವುದಿಲ್ಲ.

೩. ಭೈರವನ ಬನದ ಯಾವುದೇ ಗಿಡ ಮರ ಕಡಿಯುವುದು ನಿಷೇಧ. ಒಂದು ವೇಳೆ ಕಡಿದರೆ ಆಪತ್ತು ಕಟ್ಟಿಟ್ಟ ಬುತ್ತಿ ಎಂಬುದು ಹಿರಿಯರ ನಂಬಿಕೆ.

೪. ಪೂಜಾ ನಂತರದ ಅಡುಗೆಯನ್ನು ಮನೆಯೊಳಗೆ ತರುವಂತಿಲ್ಲ. ಹೊರಗಡೆಯೇ ಮುಗಿಸಬೇಕು.

ಒಟ್ಟಾರೆಯಾಗಿ ಭೈರವನ ಆರಾಧನೆಯನ್ನು ಪರಿಶೀಲಿಸಿದಾಗ ಭೈರವ ಓರ್ವ ಜನಪದ ದೈವನಾಗಿ ಕಂಡು ಬರುತ್ತಾನೆ. ಆತ ಶೈವಾರಾಧನೆಯ ಪ್ರಾಕ್‌ರೂಪ. ಪುರಾತನ ಕಾಲದಿಂದಲೂ ವೃಕ್ಷಗಳು, ಶಿಲೆಗಳು, ಹುತ್ತಗಳು ದೈವ ದೇವರುಗಳ ಕಲ್ಪನಾ ವಿಕಾಸಕ್ಕೆ ಕಾರಣವಾಗಿವೆ. ಅದರ ಬೆನ್ನೆಲುಬಾಗಿ ಆಚರಣೆಗಳು, ಸಂಪ್ರದಾಯಗಳು ನಿಂತಿವೆ. ಭೈರವನ ಬನದಲ್ಲಿರುವ ಕಾಸರಕ ಮತ್ತು ಹಾಲೆ ಮರಗಳಿಗೆ ವಿಶೇಷ ಮಹತ್ವವಿದೆ. ಕಾಸರಕನ ಮರಕ್ಕೆ ತುಳು ಸಂಸ್ಕೃತಿಯಲ್ಲಿ ವಿಶಿಷ್ಟ ಸ್ಥಾನವಿದೆ. ಅದು ದುಷ್ಟಶಕ್ತಿಗಳನ್ನು ನಿಗ್ರಹಿಸುವ ಮರ ಎಂಬುದು ಜನಪದರ ನಂಬಿಕೆಯಾಗಿದೆ. ಹಾಲೆ ಮರವು ಹಾಲು ಒಸರುವ ವೃಕ್ಷವಾಗಿದ್ದು ಸಮೃದ್ಧಿಯ ಸೂಚಕವಾಗಿದೆ. ಆದ್ದರಿಂದ ಭೈರವ ದುಷ್ಟ ಶಕ್ತಿಗಳ ನಿಗ್ರಹ ಮತ್ತು ಸಮೃದ್ಧಿಯ ಪರಿಕಲ್ಪನೆಯ ಆಶಯವನ್ನು ಪ್ರಕಟಿಸುವ ದೈವವಾಗಿದೆ.

ದೇಶದ ಬಹುತೇಕ ಬುಡಕಟ್ಟು ಸಮುದಾಯಗಳಲ್ಲಿ ಪ್ರಕೃತಿ ಆರಾಧನೆ ಜೊತೆಗೆ ಪ್ರಾಣಿಗಳನ್ನು ಆರಾಧಿಸುತ್ತಲೇ ಬಂದಿರುವುದು ಕಂಡು ಬರುತ್ತದೆ. ಪ್ರಾಣಿಗಳಲ್ಲಿ ಒಂದು ರೀತಿಯಲ್ಲಿ ನಿಕಟ ಸಂಬಂಧವನ್ನಿರಿಸಿಕೊಂಡ ಅನೇಕ ಸಮುದಾಯಗಳು ತಾಂತ್ರಿಕ ಶಕ್ತಿಯನ್ನು ಒಲಿಸಿಕೊಳ್ಳುವುದಕ್ಕೋಸ್ಕರ ಈ ಪ್ರಾಣಿಗಳನ್ನು ಬಳಸಿಕೊಂಡಿರುವುದನ್ನು ಸಂಶೋಧಕರು ದೃಢಪಡಿಸುತ್ತಾರೆ. ಪ್ರಾಣಿ ಆರಾಧನೆ ಎನ್ನುವುದು ಕೃಷಿ ಸಂಸ್ಕೃತಿಯ ತಾತ್ವಿಕತೆಯ ಒಂದು ಅಂಗವಾಗಿಯೂ ಕಂಡು ಬರುತ್ತದೆ. ಪ್ರಾಣಿಗಳನ್ನು ಸಾಕಿ ಸಲಹಿ ಆರಾಧಿಸಿ ಬಲಿ ಕೊಟ್ಟು ಪ್ರಕೃತಿಯಲ್ಲಿದೆ ಎನ್ನುವ ದುಷ್ಟಶಕ್ತಿಯನ್ನು ನಿಯಂತ್ರಿಸುವುದರ ಜೊತೆಗೆ ಉತ್ತಮ ಕೃಷಿಯ ಮೂಲಕ ತಮ್ಮ ಬದುಕನ್ನು ಹಸನುಗೊಳಿಸುವುದಾಗಿದೆ.

ಪ್ರಾಣಿ ಬಲಿಗೆ ಸಂಬಂಧಿಸಿದಂತೆ ಜಗತ್ತಿನಾದ್ಯಂತ ಅನೇಕ ರೀತಿಯ ಆಚರಣೆಗಳು ಇವೆ. ಪ್ರಾಣಿಬಲಿಯನ್ನು ಕಾನೂನಿನಡಿಯಲ್ಲಿ ಬಂಧಿಸಲು ಹೋದರೂ ಸಾಧ್ಯವಾಗುತ್ತಿಲ್ಲ. ಕಾರಣ ಮಾನವನು ಮೂಲದಿಂದಲೇ ಪ್ರಾಣಿಯನ್ನು ಒಂದು ಆಹಾರವಾಗಿ ಕಂಡು ಕೊಂಡಿದ್ದರಿಂದ. ''ಪ್ರಾಚೀನ ಸಂಸ್ಕೃತಿಗಳಲ್ಲಿ ಬಲಿ ಎಂದರೆ ನಿರ್ದಿಷ್ಟವಾಗಿ ದೈಹಿಕ ಬಲಿಯೇ ಆಗಿತ್ತು. ಉದ್ದೇಶ ಪೂರ್ವಕವಾದ ಸಾವು ಅಥವಾ ರಕ್ತ ಚೆಲ್ಲುವಿಕೆಯ ಜೊತೆಗೆ ಇದು ಸಂಬಂಧಪಟ್ಟದೆ. ಸಮುದಾಯದ ಭಾಗವೇ ಆದ ಮನುಷ್ಯ ಅಥವಾ ಪ್ರಾಣಿಯನ್ನು ಉದಾತ್ತೀಕರಣದ ನೆಲೆಯಲ್ಲಿ ಕೊಲ್ಲುವಿಕೆಯ ಮೂಲಕ ಅಲೌಕಿಕ ಶಕ್ತಿಗೆ ಅರ್ಪಿಸಿ ಅಲೌಕಿಕ ಶಕ್ತಿ ಮತ್ತು ಮನುಷ್ಯರ ನಡುವೆ ಸಂಬಂಧವನ್ನು ಸ್ಥಾಪಿಸುವುದೇ ಈ ಕ್ರಿಯೆಯ ಮುಖ್ಯ ಮುಖ್ಯ ನೆಲೆಯಾಗಿದೆ.'' ಡಾ.ಅಶೋಕ ಆಳ್ವರ ವಿಚಾರ ಇಲ್ಲಿ ಗಮನೀಯ. ಎಂಬ ಅಲೌಕಿಕ ನೆಲೆ ಶಕ್ತಿಗಳ ಬಗೆಗಿನ ನಂಬಿಕೆಗಳು ಇರುವ ತನಕ ಈ ಪ್ರಾಣಿಬಲಿಗಳನ್ನು ನಿಯಂತ್ರಿಸುವುದು ಕೂಡ ಅಸಾಧ್ಯ ಎಂಬುದು ಸತ್ಯ.



ಭೈರವ ಬನ



ಬನದಲ್ಲಿ ಪ್ರತಿಷ್ಠಾಪಿಸಿದ ಕಲ್ಲುಗಳು



ಭೈರವ ಬನದಲ್ಲಿ ಪೂಜಾಕಾರ್ಯ



ಕೋಳಿಯ ಬಲಿ

೪.೩ ಬಾಲೆಸಾಂತು

ಮೌಖಿಕ ಪರಂಪರೆಯಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯನ್ನು 'ತುಳುನಾಡು' ಎಂದೇ ಕರೆಯಲಾಗಿದೆ. ಇದು ಪರಂಪರೆಯ ಮತ್ತು ಇಲ್ಲಿನ ವಾಸಿಗಳಿಗೆ ಗೌರವವನ್ನು ತಂದು ಕೊಡುವ ಹೆಸರು. ಇಲ್ಲಿ ಹಲವಾರು ಭಾಷೆಗಳ, ವೃತ್ತಿಗಳ ಜನಾಂಗಗಳಿವೆ. ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ತಮ್ಮದೇ ಆದ ಲೋಕದೃಷ್ಟಿ, ಅನನ್ಯತೆಗಳನ್ನು ಹೊಂದಿದ ಸಮುದಾಯಗಳು ಒಟ್ಟಿಗೆ ಬಾಳ್ವೆ ನಡೆಸುತ್ತಿದ್ದಾರೆ. ಇಲ್ಲಿನ ಕುಣಿತಗಳು ಮತ್ತು ಆರಾಧನಾ ಸಂಪ್ರದಾಯಗಳು ಶ್ರೀಮಂತ ಸಂಸ್ಕೃತಿಗಳಲ್ಲಿ ಒಂದೆನಿಸಿವೆ. ಅಂತಹ ಕುಣಿತಗಳನ್ನು ಆಧರಿಸಿ, ಈ ಪ್ರದೇಶದ ಒಟ್ಟು ಸಾಂಸ್ಕೃತಿಕ ಸ್ವರೂಪವನ್ನು ತಿಳಿದುಕೊಳ್ಳಲು ಸಾಧ್ಯವಿದೆ.

ಜನಸಾಮಾನ್ಯರು ಋತುಮಾನಕ್ಕೆ ಅನುಗುಣವಾಗಿ ವ್ಯವಸಾಯ ಬೇಸಾಯಗಳ ಮತ್ತು ಇನ್ನಿತರ ಕೆಲಸಗಳ ಜಂಜಾಟದ ನಡುವೆ ವಿರಾಮದ ಸಮಯದಲ್ಲಿ ಜನಪದ ಆಚರಣೆ, ದೈವಾರಾಧನೆ, ಜನಪದ ಆಟ ಮುಂತಾದ ಹತ್ತು ಹಲವು ಪ್ರಕಾರಗಳ ಮುಖೇನ ಮನೋರಂಜನೆ, ನೆಮ್ಮದಿಯನ್ನು ಪಡೆಯುತ್ತಾರೆ. ಜಿಲ್ಲೆಯ ಬಹು ಸಮುದಾಯಗಳ ಬಹು ಸಂಸ್ಕೃತಿಯಲ್ಲಿ ಕಂಡು ಬರುವ ಆಟಿ ಕಳೆಂಜ, ಜೋಗಿ ಪುರುಷ, ಮಾದಿರ ಕುಣಿತ, ಪಿಲಿಪಂಜಿ ಕುಣಿತ, ಸಿದ್ಧವೇಷಗಳಂಥ ಜನಪದ ಕುಣಿತಗಳಂತೆಯೇ ಮರಾಟಿಗರ 'ಬಾಲೆಸಾಂತು' ಕುಣಿತವೂ ಒಂದು.

ಮರಾಟಿಗರು ಎಲ್ಲೆಲ್ಲಿ ವಾಸಿಸುತ್ತಿದ್ದರೋ ಅಲ್ಲೆಲ್ಲಾ ಕಂಡು ಬರುತ್ತಿದ್ದ ಈ ಬಾಲೆಸಾಂತು ಕುಣಿತ ಇಂದು ಸಂಪೂರ್ಣ ನಶಿಸಿ ಹೋಗುವ ಅಂಚಿನಲ್ಲಿದೆ. ಜಿಲ್ಲೆಯ ಬಂಟ್ವಾಳ ತಾಲೂಕಿನ ವಿಟ್ಲ, ಅಡ್ಯನಡ್ಕ ಪರಿಸರದಲ್ಲಿ ಮರಾಟಿಗರು ಇತರ ಸಮುದಾಯದವರೊಂದಿಗೆ ಸೇರಿ ಈಗ್ಗೆ ಐದಾರು ವರ್ಷಗಳ ಹಿಂದೆ ಆಚರಿಸಿದ್ದಾರೆ. ಆದರೆ ಈ ಪ್ರದರ್ಶನಾತ್ಮಕ ಕುಣಿತ ಕ್ಷೇತ್ರಕಾರ್ಯದ ಸಮಯದಲ್ಲಿ ಎಲ್ಲೂ ಕಂಡು ಬಂದಿಲ್ಲ. ಕೆಲವೊಂದು ಬಿಡಿ ಬಿಡಿ ಲೇಖನಗಳಲ್ಲಿ 'ಬಾಲೆಸಾಂತು' ಕುಣಿತವನ್ನು ಪರಿಚಯಿಸಲಾಗಿದೆ. ಇಂತಹ ಆಕರಗಳನ್ನು ಮತ್ತು ಹಿರಿಯರು ಕಂಡುಂಡ ಅನುಭವಗಳನ್ನು ಆಧಾರವಾಗಿಟ್ಟುಕೊಂಡು 'ಬಾಲೆಸಾಂತು'ವನ್ನು ಪರಾಮರ್ಶಿಸಲಾಗಿದೆ.

ಹಿನ್ನೆಲೆ

ಬಾಲೆಸಾಂತು ಉತ್ಸವದ ಹಿನ್ನೆಲೆಯಾಗಿ ಮರಾಟಿಗರಲ್ಲಿ ಪ್ರಮುಖವಾದ ಕತೆಯೊಂದು ದೊರಕುತ್ತದೆ. ಮೌಖಿಕವಾದ ಈ ಜನಪದ ಕತೆಯಲ್ಲಿ ಪ್ರಾದೇಶಿಕವಾಗಿ ಅಲ್ಪಸ್ವಲ್ಪ ಭಿನ್ನತೆಯೂ ಕಂಡು ಬಂದಿದೆ. ಕತೆ ಈ ಪರಿಸರದ ಪ್ರಸಿದ್ಧ ಧಾರ್ಮಿಕ ಕ್ಷೇತ್ರವಾದ ಶೃಂಗೇರಿಯ ಶ್ರೀಶಾರದಾಂಬೆಯ ಆರಾಧನೆಗೆ ಸಂಬಂಧಪಟ್ಟದ್ದಾಗಿದೆ.

ಬಾಲಮ್ಮ ಎಂಬ ಅನಾಥ ಹುಡುಗಿಯೊಬ್ಬಳಿಗೆ ಕನಸಿನಲ್ಲಿ ಶೃಂಗೇರಿಯ ಶಾರದಾಂಬೆಯು ಕಾಣಿಸಿಕೊಂಡು ಬದುಕಿನ ದಾರಿ ತೋರಿಸಿ ಹರಸಿದಳು. ಬಾಲಮ್ಮ ಶೃಂಗೇರಿಗೆ ಬಂದು ಗುರುಗಳನ್ನು ಕಂಡು ಅವರ ಅಪ್ಪಣೆಯಂತೆ ಶ್ರೀ ಶಾರದಾಂಬೆಯ ದರ್ಶನಮಾಡಿ ಘಟ್ಟದ ಮೇಲೆ ಬಂದು ಓರ್ವನನ್ನು ಮದುವೆಯಾಗಿ ಸುಖ ಜೀವನದಿಂದಿದ್ದಳು. ಎಲ್ಲಿದ್ದರೂ ಮಾಯಿ ಹುಣ್ಣಿಮೆಯಂದು ಶ್ರೀ ಶಾರದಾಂಬೆಯ ಮತ್ತು ಕ್ಷೇತ್ರದ ಗುರುಗಳ ದರ್ಶನ ಮಾಡುವೆನೆಂದು ಕೊಟ್ಟ ಮಾತನ್ನು ಸುಖ ಸಂಸಾರದ ಗುಂಗಿನಲ್ಲಿ ಮರೆಯುತ್ತಾಳೆ. ಆಗ ಅವಳಿಗೆ ಶ್ರೀ ಶಾರದಾಂಬೆಯನ್ನು

ನೆನಪಿಸುವುದಕ್ಕೋಸ್ಕರ ಶೃಂಗೇರಿಯ ಗುರುಗಳು ಇಬ್ಬರು ಸನ್ಯಾಸಿಗಳನ್ನು ಬಾಲಮ್ಮನ ಮನೆಗೆ ಕಳುಹಿಸುತ್ತಾರೆ. ಸನ್ಯಾಸಿಗಳು ಬಾಲಮ್ಮನ ಮನೆಗೆ ಬಂದು ನಾವು ಶೃಂಗೇರಿಯಿಂದ ಭಿಕ್ಷೆಗಾಗಿ ಬಂದಿದ್ದೇವೆ ಎಂದು ಹೇಳಿದರೂ ಅವಳು ಕೇಳದೆ ತನ್ನ ಮನೆಯ ಆಳುಗಳನ್ನಾಗಿ ಮಾಡಿಕೊಳ್ಳುತ್ತಾಳೆ. ಶೃಂಗೇರಿಯ ಗುರುಗಳು ಕೊರಗ ದಂಪತಿಗಳನ್ನು, ಪುರೋಹಿತರನ್ನು, ಮಂಗ ಕುಣಿಸುವವರನ್ನು, ಭೂತದ ದರ್ಶನ ಪಾತ್ರಿಯನ್ನು ಮತ್ತು ಓಲೆಗಾರರನ್ನು ಕಳುಹಿಸಿದಾಗಲೆಲ್ಲಾ ಬಾಲಮ್ಮ ಅವರನ್ನೆಲ್ಲರನ್ನೂ ತನ್ನ ಮನೆಯ ಕೆಲಸಕ್ಕೆ ನೇಮಿಸಿಕೊಳ್ಳುತ್ತಾಳೆ. ಈ ಎಲ್ಲಾ ಸಂದರ್ಭಗಳಲ್ಲೂ ಅವಳಿಗೆ ಶ್ರೀ ಶಾರದಾಂಬೆಯ ಮತ್ತು ಗುರುಗಳ ನೆನಪು ಬರದೇ ಹೋಯಿತು. ಇದರಿಂದ ಕೋಪಗೊಂಡ ಶೃಂಗೇರಿಯ ಗುರುಗಳು ಮಾಯಿ (ಫೆಬ್ರವರಿ) ಹುಣ್ಣಿಮೆಯ ದಿನದಂದು ವೇಷತೊಟ್ಟು ಬಾಲಮ್ಮನ ಮನೆಗೆ ಬರುತ್ತಾರೆ. ಗುರುಗಳನ್ನು ಕಂಡಾಗ ಬಾಲಮ್ಮನಿಗೆ ತನ್ನ ತಪ್ಪಿನ ಅರಿವಾಯಿತು. ಗುರುಗಳ ಕಾಲಿಗೆರಗಿ ತನ್ನ ತಪ್ಪನ್ನು ಮನ್ನಿಸಬೇಕೆಂದು ಪ್ರಾರ್ಥಿಸುತ್ತಾಳೆ. ನಿನ್ನ ತಪ್ಪಿಗಾಗಿ ನಿನ್ನನ್ನು ಮಾಯ ಮಾಡುವುದಾಗಿ ಗುರುಗಳು ಹೇಳುತ್ತಾರೆ. ಮಾಯ ಮಾಡಿದರೂ ನನ್ನ ಹೆಸರು ಶಾಶ್ವತವಾಗಿರುವಂತೆ ಮಾಡಬೇಕೆಂದು ಪರಿಪರಿಯಾಗಿ ಬೇಡಿಕೊಳ್ಳುತ್ತಾಳೆ. ''ನೀನು ಮುಂದೆ 'ಬಾಲೆಸಾಂತು' ವಾಗಿ ಮಾಯಾವಿಯಾಗಿರು. ನಾನು ಯಾವ ರೀತಿ ವೇಷ ಹಾಕಿದೆನೋ ಅದೇ ರೀತಿ ಮಾಯಿ ತಿಂಗಳಲ್ಲಿ ವೇಷಧರಿಸಿ ಮನೆಮನೆಗೆ ಹೋಗಿ ಭಿಕ್ಷೆ ಬೇಡುವ ಮೂಲಕ ಶಾರದಾಂಬೆಯನ್ನು ಆರಾಧಿಸಿದರೆ ಕಷ್ಟನಷ್ಟಗಳು, ಊರಿನ ಅನಿಷ್ಟಗಳು ದೂರವಾಗಿ ಸಮೃದ್ಧಿಯಾಗುವುದು" ಎಂದು ಹೇಳಿ ಬಾಲಮ್ಮನನ್ನು ಅದೃಶ್ಯ ಮಾಡುತ್ತಾರೆ.

ಇದರ ನೆನಪಿಗಾಗಿ ಬಾಲೆಸಾಂತು ಆಚರಣೆಯನ್ನು ಮಾಯಿ ತಿಂಗಳ ಚತುರ್ಥಿಯಿಂದ ಹುಣ್ಣಿಮೆಯವರೆಗೆ ಆಚರಿಸುತ್ತಾರೆ. ಒಣಗಿದ ಬಾಳೆಲೆಗಳನ್ನು ಕಟ್ಟಿಕೊಂಡಿರುವ ವೇಷಗಾರರಿರುತ್ತಾರೆ. ಇದನ್ನು 'ಚಾಂಬರ್ದ ಮರ' ಎಂದು ಕರೆಯುತ್ತಾರೆ. ಬಾಲಮ್ಮನನ್ನು ಎಚ್ಚರಿಸಲು ಬಂದಂಥ ಎಲ್ಲಾ ವೇಷಗಾರರು ಕುಣಿತದಲ್ಲಿ ಸಂಕೇತವಾಗಿರುತ್ತಾರೆ.

ಈ ಕಥೆಗೆ ಸಂಬಂಧಪಟ್ಟಂತೆ ಯಾವುದೇ ಲಿಖಿತ ಆಧಾರಗಳಾಗಲೀ ಐತಿಹ್ಯಗಳಾಗಲೀ ಕಂಡು ಬಂದಿಲ್ಲ. ಕೆಲವು ಲೇಖನಗಳಲ್ಲಿ ಬಾಲೆಸಾಂತು ಕುಣಿತವನ್ನು, ಹಿನ್ನೆಲೆ ಕಥೆಯನ್ನು ನೀಡಲಾಗಿದೆ. ಹಾಗೆಯೇ ಕಥೆಗಳಲ್ಲಿ ಅಲ್ಪಸ್ವಲ್ಪ ಭಿನ್ನತೆಯೂ ಇದೆ. ಒಂದು ಕಥೆಯಲ್ಲಿ 'ಬಾಲಮ್ಮ' ನೇ 'ಬಾಲೆಸಾಂತು' ವಾಗಿ ಕಾಣಿಸಿಕೊಂಡಿದ್ದಾಳೆ.[೧೦] ಹಾಗೆಯೇ ಮತ್ತೊಂದು ಕಥೆಯಲ್ಲಿ ಬಾಲಮ್ಮನ ಮಗಳಾಗಿ ಬಾಲೆಸಾಂತು ಕಂಡು ಬರುತ್ತಾಳೆ. ಮತ್ತು ಕೋಟೆಯ ಕೊಂಕಣಿಗನನ್ನು ಮೋಹಿಸುತ್ತಾಳೆ.[೧೧] ಬಾಲಮ್ಮನ ಜಾತಿಯನ್ನು ಸೂಚಿಸಿಲ್ಲ. ಮರಾಟಿಗರೇ ಮುಖ್ಯ ಭೂಮಿಕೆಯಲ್ಲಿರುವ ಮತ್ತು ಮರಾಟಿ ಪಾಡ್ದನ (ಹಾಡು) ಇರುವ ಕಾರಣದಿಂದ ಬಾಲಮ್ಮ ಅಥವಾ ಬಾಲೆಸಾಂತು ಅನಾಥ ಮರಾಟಿ ಹೆಣ್ಣು ಆಗಿರಬೇಕು ಎಂದು ಊಹಿಸಲು ಸಾಧ್ಯವಿದೆ. ಒಂದು ಸಮುದಾಯದ ಅಥವಾ ಒಂದು ವರ್ಗದ ಜನಪದ ಆಚರಣೆಗಳು ಅದೇ ವರ್ಗದ ಜನರನ್ನೇ ಅಥವಾ ನಾಯಕ ನಾಯಕಿಯರ ಕುರಿತಾದ ಕತೆಯನ್ನೇ ನೀಡುತ್ತದೆ. ಹಾಗೆಯೇ ಅವರದೇ ಆದ ಭಾಷೆಯ ಹಾಡುಗಳು ಕೇಳಿಬರುತ್ತದೆ. ಉದಾ: ಸುಳ್ಯ ಪರಿಸರದ ಗೌಡರ ಸಿದ್ಧವೇಷ ಕುಣಿತ ಮತ್ತು ಅದರ ಹಾಡು ಗೌಡರ ಅರೆಕನ್ನಡದಲ್ಲಿದೆ.

ಶೃಂಗೇರಿ ಮರಾಟಿಗರ ಮೂಲಮಠ ಎಂದು ಹಲವು (ಬಹುತೇಕ) ವಕ್ತ ಭಾಂದವರು ಹೇಳುತ್ತಾರೆ. ಅದಕ್ಕಾಗಿಯೇ ಬಾಲೆಸಾಂತುಪಿನ ಕಥೆಯನ್ನು ಆಧಾರವಾಗಿ ನೀಡುತ್ತಾರೆ. ಆದರೆ ಒಂದೇ ಒಂದು ಮೌಖಿಕ ಕಥನದಿಂದ ಶೃಂಗೇರಿ ಮೂಲಮಠ ಎಂದು ನಿಖರವಾಗಿಸುವುದು ಕಷ್ಟಸಾಧ್ಯ. ಕರಾವಳಿ ಮಲೆನಾಡು ಪ್ರದೇಶದ ಅನೇಕ ಜಾತಿ ಸಮುದಾಯದವರು ಶೃಂಗೇರಿ ಮಠಕ್ಕೆ ನಡೆದುಕೊಳ್ಳುವುದನ್ನು ಗಮನಿಸಬೇಕಾಗುತ್ತದೆ.

ಅದೃಶ್ಯ ಅಥವಾ ಮಾಯ ಮಾಡುವ ಪ್ರಕ್ರಿಯೆಗಳು ನಮ್ಮ ಬಹುತೇಕ ಜನಪದ ಕತೆ, ಕಾವ್ಯಗಳಲ್ಲಿ ಕಂಡು ಬರುವಂಥದ್ದು. ಅಲೌಕಿಕ ಶಕ್ತಿಯ ಬಗ್ಗೆ ನಂಬಿಕೆಗಳಿಂದ ಇಂದಿಗೂ ಅನೇಕ ಆಚರಣೆಗಳು ಜೀವಂತವಾಗಿಯೇ ಮುಂದುವರಿಯುತ್ತಿರುವುದು ವಾಸ್ತವ ಸಂಗತಿ. ತುಳುನಾಡಿನ ದೈವಾರಾಧನೆಯ ಹಿನ್ನೆಲೆಯಲ್ಲಿ ಈ ಮಾಯವಾಗುವಿಕೆ, ಅದೃಶ್ಯವಾಗುವ ಪ್ರಕ್ರಿಯೆ ಪ್ರಧಾನವಾಗಿ ಕಂಡುಬರುತ್ತಿದೆ. ದೈವಾರಾಧನೆಯಲ್ಲಿ ತುಳುನಾಡಿನ ಭೌಗೋಳಿಕ ಪರಿಸರ, ವಾತಾವರಣ, ಮಣ್ಣಿನ ಸೊಗಡು ಮಿಳಿತಗೊಂಡಿದೆ. ಹಾಗೆಯೇ ನೂರಾರು ವರ್ಷಗಳಿಂದ ತುಳುನಾಡಿನಲ್ಲಿ ಬದುಕುತ್ತಿರುವ ಮರಾಟಿಗರೂ ಕೂಡ ಇದಕ್ಕೆ ಹೊರತಾಗಿಲ್ಲ.

ಪ್ರಸ್ತುತ ಅಧ್ಯಯನ ಮಾರಾಟಿಗರ ಜಾನಪದೀಯ ಅಧ್ಯಯನವಾಗಿದೆ. ಜನಪದರ ಜೀವನವನ್ನು ಸಾಹಸವನ್ನು, ಅವರ ಕಲ್ಪನೆ, ದೂರಾಲೋಚನೆಗಳನ್ನು ನಾವು ಜನಪದ ಕತೆ ಸಾಹಿತ್ಯಗಳ ಮೂಲಕ ನೋಡಲು ಸಾಧ್ಯವಿದೆ. ಅವರ ಆಲೋಚನೆ, ನಂಬಿಕೆಗಳು ವಿವಿಧ ಆಚರಣೆಗಳ, ಸಂಪ್ರದಾಯಗಳ ಮೂಲಕ ಪ್ರಕಟಗೊಳ್ಳುತ್ತವೆ ಮತ್ತು ಪ್ರಸರಣ ಗೊಳ್ಳುತ್ತವೆ. ಆಚರಣೆ ಸಂಪ್ರದಾಯಗಳ ವಿಧಿ ವಿಧಾನಗಳಲ್ಲಿ ವ್ಯತ್ಯಾಸಗಳು ಕಂಡು ಬಂದರೂ ಮೂಲ ಆಶಯಗಳು ಒಂದೇ ಆಗಿರುವುದು ಕಂಡುಬರುತ್ತದೆ. ಪ್ರತಿಯೊಂದು ಸಂಪ್ರದಾಯಗಳ ಹಿಂದೆ ಅದಕ್ಕೆ ಪೂರಕವಾಗುವಂಥ ಜನಪದ ಗೀತೆಗಳಿರುತ್ತವೆ ಮತ್ತು ಐತಿಹ್ಯಗಳೂ ಇರುತ್ತವೆ. ಈ ಕತೆ, ಗೀತೆ, ಐತಿಹ್ಯಗಳು ಮುಂದಿನ ತಲೆಮಾರಿಗೆ ಒಂದು ರೀತಿಯಲ್ಲಿ ಸಾಕ್ಷಿಗಳು ಇದ್ದಂತೆ. ಆ ಸಾಹಿತ್ಯದಲ್ಲಿ ಆಯಾ ಸಮುದಾಯದ, ಜನಾಂಗದ ಜೀವನ ಚರಿತ್ರೆ ಒಡಮೂಡಿರುತ್ತದೆ. ಅದರಿಂದ ಆ ಸಮುದಾಯದ ಜನರ ಬದುಕಿನ ರೀತಿ ನೀತಿಗಳನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ.

ಮಾನವೀಯತೆಯನ್ನು, ಮಾನವೀಯ ಹಂಬಲವನ್ನು ಹೊಂದಿರುವ ಜನಪದ ಸಾಹಿತ್ಯಗಳು ಸಾಹಿತ್ಯಾತ್ಮಕತೆಯಿಂದ ಭಿನ್ನತೆಯಿರಬಹುದು. ಅದಕ್ಕೆ ಪ್ರಾದೇಶಿಕ ಸಾಮಾಜಿಕ ರಚನೆಗಳೇ ಕಾರಣ. ತುಳುನಾಡಿನ ಮೂಲ ತುಳುಸಂಸ್ಕೃತಿಯಲ್ಲಿನ ಸಾಹಿತ್ಯವೂ ವಲಸೆ ಬಂದ ಮರಾಟಿಗರ ಸಾಹಿತ್ಯವೂ ಬೇರೆ ಬೇರೆಯಾಗಿದ್ದರೂ ಆಶಯಗಳಲ್ಲಿ ಭಿನ್ನತೆ ಕಂಡುಬಾರದು. ಅಷ್ಟಾಗಿ ಜನಪದ ಸಾಹಿತ್ಯವಿರದ ಮರಾಟಿಗರು ಮೂಲ ತುಳು ಸಂಸ್ಕೃತಿಯ ಸಾಹಿತ್ಯಗಳನ್ನು ತಮ್ಮ ಆಚರಣೆಗಳಿಗೆ ಪೂರಕವಾಗಿರುವಂತೆ ರಚಿಸಿಕೊಂಡಿರಲೂ ಸಾಧ್ಯವಿದೆ. ಈ ಮಾತು ಯಾಕೆ ಪ್ರಸ್ತಾಪಿಸುತ್ತಿದ್ದೇನೆಂದರೆ, ಮರಾಟಿಗರಲ್ಲಿನ ಪಂಜುರ್ಲಿ, ಮಹಮ್ಮಾಯಿ, ಕಲ್ಲುರ್ಟಿ ಆಚರಣೆಗಳ ಹಿಂದಿರುವ ಜನಪದ ಕತೆಗಳನ್ನು ಪರಿಶೀಲಿಸಿದಾಗ ಕಂಡು ಬರುವ ಸಾಮ್ಯತೆಗಳಿಗಾಗಿ ಮತ್ತು ತುಳು ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿ ತಮ್ಮ ಆಚರಣೆಗಳಲ್ಲಿಯೂ ಅಳವಡಿಸಿಕೊಳ್ಳುತ್ತಿರುವುದು.

**ಬಾಲೆಸಾಂತು ಕುಣಿತ**

ಮಾಯಿ (ಫೆಬ್ರವರಿ) ತಿಂಗಳಿನ ಚತುರ್ಥಿಯಂದು ಗೊತ್ತುಪಡಿಸಿದ ಒಂದು ಸ್ಥಳದಲ್ಲಿ ಎಲ್ಲರೂ ಸೇರಿ ಒಂದು ಕಲ್ಲನ್ನು ಪ್ರತಿಷ್ಠಾಪಿಸುತ್ತಾರೆ. ಹೆಚ್ಚಾಗಿ ಕಾಸರಕನ ಮರದ ಬುಡವನ್ನು ಆಯ್ದುಕೊಳ್ಳುತ್ತಾರೆ. ವಿವಿಧ ವೇಷಗಳನ್ನು ಧರಿಸಿ ಶ್ರೀ ಶಾರದಾಂಬೆಯನ್ನು ಸ್ಮರಿಸಿ ತಮ್ಮ ಈ ಕಾರ್ಯ ಸಾಂಗವಾಗಿ ನೆರವೇರಬೇಕೆಂದು ಪ್ರಾರ್ಥನೆ ಮಾಡುತ್ತಾರೆ. ಸ್ಥಾಪಿಸಿದ ಕಲ್ಲಿಗೆ ಮೂರು ಸಲ ಪ್ರದಕ್ಷಿಣೆ ಹಾಕಿ ಮರಾಠಿ ಭಾಷೆಯಲ್ಲಿನ ಹಾಡನ್ನು ಹಾಡುತ್ತಾ ಮನೆ ಮನೆಗೆ ಬೇಟಿ ನೀಡಲು ಆರಂಭಿಸುತ್ತಾರೆ.

ಪ್ರಾರಂಭದಲ್ಲಿ ತಂಡದ ನಾಯಕ ಬಾಲೆಸಾಂತು ಹಾಡನ್ನು ಹಾಡುತ್ತಾನೆ.

ಶೃಂಗೇರಿಚೆ ಶಿಷ್ಯರಮಿ ।

ಬಾಲ್‌ಬಾಲ್ಯೊ ಬಾಲೆಸಾಂತು ॥

ಕಾಟ್‌ಮತೊ ಜೋಗಿರಮಿ ।

ಬಾಲ್‌ಬಾಲ್ಯೊ ಬಾಲೆಸಾಂತು ॥

ಎಂದು ಹಾಡಿದಾಗ ಇತರ ವೇಷಧಾರಿಗಳು 'ಬಾಲ್ ಬಾಲ್ಯೋ ಬಾಲೆ ಸಾಂತು' ಎಂಬ ಸೊಲ್ಲನ್ನು ಹೇಳುತ್ತಾ ಕುಣಿಯುತ್ತಾರೆ. ಸನ್ಯಾಸಿ ಮನೆಯ ಬಾಗಿಲ ಹತ್ತಿರದಲ್ಲಿ ಕುಳಿತು ''ತರುತ್ತಾರೆ, ಅಮ್ಮ ತರುತ್ತಾರೆ. ಅಟ್ಟದಿಂದ ತೆಂಗಿನಕಾಯಿ ತರುತ್ತಾರೆ. ಅಕ್ಕಿ, ಭತ್ತ ತರುತ್ತಾರೆ'' ಎಂದು ಮನೆಯೊಡತಿಗೆ ಕೇಳಿಸುವಂತೆ ಹೇಳುತ್ತಾನೆ. ಶ್ರೀ ಶಾರದಾಂಬೆಯ ಪ್ರಭಾವಳಿಯನ್ನು ತುಳಸಿಕಟ್ಟೆಯ ಎದುರಿಗಿಟ್ಟು ಪೂಜಾರಿ ಪೂಜೆಯನ್ನು ಆರಂಭಿಸುತ್ತಾನೆ. ಮಂಗಳಾರತಿ ಮತ್ತು ಪ್ರಸಾದ ವಿತರಣೆಯಾಗುತ್ತದೆ. ನಂತರ ದರ್ಶನ ಪಾತ್ರಿಗೆ ದೇವರ ಆವಾಹನೆ (ದರ್ಶನ) ಪ್ರಾರಂಭವಾಗುತ್ತದೆ. ಇವುಗಳ ಮಧ್ಯೆ ಕೊರಗ-ಕೊರಪ್ಪೊಳು ನೃತ್ಯ, ಮಂಗನನ್ನು ಕುಣಿಸುವವನಿಂದ ನೃತ್ಯ ನಡೆಯುತ್ತದೆ. ಓಲೆಗಾರ ಹಾಸ್ಯ ಭರಿತ ಓಲೆ ಓದುತ್ತಾನೆ. ಮನೆಯವರೆಲ್ಲಾ ನೋಡಿ ಸಂತೋಷಗೊಂಡು ಅಕ್ಕಿ, ಭತ್ತ, ಅಡಿಕೆ, ತೆಂಗಿನಕಾಯಿ, ಹಣ ಇತ್ಯಾದಿ ನೀಡುತ್ತಾರೆ. ಹೀಗೆ ರಾತ್ರಿಯೆಲ್ಲಾ ಅನೇಕ ಮನೆಗಳಿಗೆ ಬೇಟಿ ನೀಡಿ ಮನೆಯವರನ್ನು ಸಂತೋಷಗೊಳಿಸುತ್ತಾರೆ. ಅನಂತರ ಕಲ್ಲು ಹಾಕಿರುವ ಸ್ಥಳಕ್ಕೆ ಬಂದು ತೆಂಗಿನಕಾಯಿ ಒಡೆದು ವೇಷ ಕಳಚಿ ಸಂಗ್ರಹಿಸಿದ ದವಸಧಾನ್ಯಗಳನ್ನು ಒಂದು ನಿರ್ದಿಷ್ಟ ಮನೆಯಲ್ಲಿಟ್ಟು ಅವರವರ ಮನೆಗೆ ತೆರಳುತ್ತಾರೆ. ಇದೇ ರೀತಿ ಏಳು, ಒಂಭತ್ತು ಅಥವಾ ಹನ್ನೊಂದು ದಿನಗಳವರೆಗೆ ಮುಂದುವರಿಯುತ್ತದೆ.

ಸಂಗ್ರಹಿಸಿದ ಎಲ್ಲಾ ದವಸಧಾನ್ಯಗಳನ್ನು ಮಾಯಿ ಹುಣ್ಣಿಮೆಯ ದಿನದಂದು ಒಟ್ಟಾಗಿಸಿ ತರುತ್ತಾರೆ. ಅದರ ಜೊತೆಗೆ ಮನೆ ಮನೆಯಿಂದ ಅಕ್ಕಿ ರೊಟ್ಟಿಗಳನ್ನು ಮಾಡಿ ತರುತ್ತಾರೆ. ಬಲ್ಯಾರು-ಮೀನು ಮತ್ತು ಹುರುಳಿ ಬೀಜ ಸೇರಿಸಿದ ಸಾಂಬಾರು ಮಾಡುತ್ತಾರೆ. ಸಂಜೆಯ ಸಮಯದಲ್ಲಿ ಪೂಜೆ ಆರಂಭವಾಗುತ್ತದೆ. ಊರಿನ ಜನರೆಲ್ಲಾ ಸೇರುತ್ತಾರೆ. ಸ್ಥಾಪಿತ ಕಲ್ಲಿನ ಹತ್ತಿರ ಶ್ರೀ ಶಾರದಾಂಬೆಯನ್ನು ಪ್ರಾರ್ಥಿಸುತ್ತಾರೆ. ನಲ್ವತ್ತೆಂಟು ಎಡೆ (ಅಗೆಲು) ಗಳನ್ನು ಹಾಕಲಾಗುತ್ತದೆ. ಒಂದೊಂದು ಎಡೆಯಲ್ಲಿ ಎರಡೆರಡು ರೊಟ್ಟಿ ಬಲ್ಯಾರು ಹುರುಳಿ ಪದಾರ್ಥಗಳನ್ನು

ಒಡಿಸಲಾಗುತ್ತದೆ. ಹಾಗೆಯೇ ಪ್ರತಿಯೊಂದು ಎಡೆಗೂ ಒಂದೊಂದು ಕೋಲ್‌ತ್ರಿ (ತೆಂಗಿನಗರಿಗೆ ಬಟ್ಟೆ ಸುತ್ತಿದ ಚಿಕ್ಕ ದೀವಟಿಗೆ) ಯನ್ನು ಉರಿಸುತ್ತಾರೆ. ಹಲಸಿನ ಮರದ ಸೌದೆ ಉಪಯೋಗಿಸಿ ಹೋಮ ಮಾಡುವರು. ವೇಷಗಾರ ತಂಡ ಹೋಮ ಮತ್ತು ಎಡೆಗಳಿಗೆ ಮೂರು ಸುತ್ತು ಪ್ರದಕ್ಷಿಣೆ ಬಂದು ಪೂಜೆ ಮುಂದುವರಿಯುತ್ತದೆ. ಪೂಜೆಯ ನಂತರ ಪೂಜಾರಿ ಕಲ್ಲನ್ನು ಹೊತ್ತು ಆ ಊರಿನ ಅಥವಾ ಗ್ರಾಮದ ಗಡಿಯವರೆಗೆ ಹೋಗಿ ಒಂದು ಕಾಸರಕ ಮರದ ಬುಡದಲ್ಲಿ ಇಟ್ಟು ಆ ಮರಕ್ಕೆ ಮೂರು ಸಾರಿ ಪ್ರದಕ್ಷಿಣೆ ಬರುವನು. ವೇಷಗಾರರೆಲ್ಲರೂ ತಮ್ಮ ತಮ್ಮ ವೇಷಗಳನ್ನೆಲ್ಲಾ ಕಳಚಿ ಒಂದೊಂದು ತೆಂಗಿನಕಾಯಿ ಒಡೆದು ಹಿಂತಿರುಗಿ ಮೊದಲಿನ ಸ್ಥಳಕ್ಕೆ ಬರುತ್ತಾರೆ. ಕೋಲ್‌ತ್ರಿಗಳನ್ನು ಹಿಡಿದುಕೊಂಡು ಹತ್ತಿರದ ಹೊಳೆ ಅಥವಾ ತೋಡುಗಳಿಗೆ ಹೋಗಿ ಪಂಜುಗಳನ್ನು ರಾಶಿ ಹಾಕಿ ಸ್ನಾನ ಮಾಡುತ್ತಾರೆ. ಸ್ನಾನಾನಂತರ ಪಂಜಿನ ರಾಶಿಯನ್ನು ಹಾರಿ ಬರುತ್ತಾರೆ. ಬಳಿಕ ಪ್ರಸಾದ ವಿತರಣೆಯಾಗುತ್ತದೆ. ಕಾಣಿಕೆ (ಬಿಕ್ಷೆ) ಹಾಕಿದ ಮನೆಯವರಿಗೆ ವಿಶೇಷವಾಗಿ ಅಗೆಲನ್ನು ನೀಡಲಾಗುತ್ತದೆ. ಇತರರಿಗೂ ಪ್ರಸಾದ ರೂಪದಲ್ಲಿ ಅಗೆಲನ್ನು ನೀಡುವುದರೊಂದಿಗೆ ಬಾಲೆಸಾಂತು ಉತ್ಸವ ಕೊನೆಗೊಳ್ಳುತ್ತದೆ.

**ಕುಣಿತದಲ್ಲಿ ಕಂಡು ಬರುವ ಪ್ರಧಾನ ಪಾತ್ರಗಳು**

ಸಂಪೂರ್ಣವಾಗಿ ಮರೆಯಾಗಿರುವ ಬಾಲೆಸಾಂತು ಕುಣಿತ ಇತಿಹಾಸದಲ್ಲಿ ಪ್ರಾದೇಶಿಕವಾಗಿ ಭಿನ್ನ ಭಿನ್ನ ಪಾತ್ರಗಳೊಂದಿಗೆ ಆಚರಣೆಯಲ್ಲಿದ್ದವು ಎಂಬ ವಿಷಯ ವಕ್ತ್ರ ಮಾಹಿತಿಗಳಿಂದ ತಿಳಿದು ಬರುತ್ತದೆ.

೧. **ಗುರಿಕಾರ:-** ಅಥವಾ ನಾಯಕ ಕಚ್ಚೆ, ಉದ್ದ ತೋಳಿನ ಅಂಗಿ, ಜರಿಶಾಲು ಧರಿಸಿದ್ದು ಹಣೆಗೆ ವಿಭೂತಿಯಿಟ್ಟಿರುತ್ತಾನೆ. ತಲೆಯಲ್ಲಿ ಮುಂಡಾಸಿರುತ್ತದೆ. ಮರಾಟಿಗರಲ್ಲಿ ಒಂದು ಮನೆತನದ, ಒಂದು ಸೀಮೆಯ ಯಜಮಾನ, ಹಿರಿಯನನ್ನು 'ಗುರಿಕಾರ' ಎಂದು ಕರೆಯಲಾಗುತ್ತದೆ.

೨. **ಪೂಜಾರಿ:-** ಕಚ್ಚೆ, ಶಾಲು ಧರಿಸಿಕೊಂಡು ತಲೆಯಲ್ಲಿ ಜುಟ್ಟು ಬಿಟ್ಟು ಕೃತಕ ಜನಿವಾರ ಹಾಕಿಕೊಂಡಿರುತ್ತಾನೆ. ಮೈಯೆಲ್ಲ ವಿಭೂತಿ ಬಳಿದುಕೊಂಡು ಕೈಯಲ್ಲಿ ಘಂಟಾಮಣಿ ಹಿಡಿದಿರುತ್ತಾನೆ.

೩. **ಸನ್ಯಾಸಿ:-** ಬಿದಿರಿನ ತುಂಡಿನಿಂದ ಶಿಶ್ನದ ಆಕೃತಿಯನ್ನು ಕಟ್ಟಿಕೊಂಡಿರುತ್ತಾನೆ. ಒಣಗಿದ ಬಾಳೆಯ ಎಲೆಯನ್ನು ಕಟ್ಟಿಕೊಂಡಿರುತ್ತಾನೆ. ಈ ಪಾತ್ರದ ವೇಷಭೂಷಣದಲ್ಲಿ ವ್ಯತ್ಯಾಸಗಳು ಕಂಡು ಬರುತ್ತವೆ. ಇದು ಸುಳ್ಯ ಪರಿಸರದ ಗೌಡ ಸಮುದಾಯದವರ 'ಸಿದ್ಧವೇಷ' ವನ್ನು ನೆನಪಿಗೆ ತರುತ್ತದೆ.

೪. **ಕೊರಗ:-** ಸೊಂಟಕ್ಕೆ ಕಪ್ಪು ಬಟ್ಟೆ, ಅದರ ಮೇಲೆ ತೆಂಗಿನ ಗರಿ ಕಟ್ಟಿಕೊಂಡಿರುತ್ತಾನೆ. ಮೈ ಹಾಗೂ ಮುಖಕ್ಕೆ ಪೂರ್ತಿಯಾಗಿ ಮಸಿಹಚ್ಚಿಕೊಂಡು ತಲೆಗೆ ಮುಟ್ಟಾಳೆಯನ್ನು ಇಟ್ಟುಕೊಂಡಿರುತ್ತಾನೆ. ಕೈಯಲ್ಲಿ ಒಂದು ಕೋಲು ಹಾಗೂ ಕಾಲಿಗೆ ಗೆಜ್ಜೆ ಕಟ್ಟಿರುತ್ತಾನೆ. ಇಲ್ಲಿ ಕಪ್ಪು ಬಣ್ಣ ಒಂದು ರೀತಿಯಲ್ಲಿ ಅಸ್ಪೃಶ್ಯತೆಯನ್ನು ಪ್ರತಿನಿಧಿಸುತ್ತಿರುವುದನ್ನು ಗಮನಿಸಬಹುದು.

೫. **ಕೊರಪ್ಪೊಳು:-** ಕಪ್ಪು ಸೀರೆ, ರವಿಕೆ ತೊಟ್ಟು ತಲೆಗೆ ಮುಟ್ಟಾಳೆ ಧರಿಸಿರುತ್ತಾಳೆ. ಬೆತ್ತದಿಂದ ಹೆಣೆದ ಬುಟ್ಟಿಯನ್ನು ಹಿಡಿದಿರುತ್ತಾಳೆ. ಇಲ್ಲಿ ಕೊರಪ್ಪೊಳು ಕೊರಗನ ಹೆಂಡತಿಯಾಗಿ ಪ್ರತಿನಿಧಿಸುತ್ತಾಳೆ.

೬. ಕೊರಪ್ಪೆ:- ಒಂದು ತುಂಡು ಬಟ್ಟೆ ಸುತ್ತಿಕೊಂಡು ತಲೆಗೆ ಮುಂಡಾಸು ಧರಿಸಿರುತ್ತಾನೆ.

ನಿಷೇಧಗಳು:

೧. ಬಾಲೆಸಾಂತು ಆಚರಣೆಯನ್ನು ಎರಡು ವರ್ಷ ಸತತವಾಗಿ ಮಾಡಿ ನಿಲ್ಲಿಸಬಾರದು. ಮೂರು ವರ್ಷ ನಿರಂತರವಾಗಿ ಮಾಡಬೇಕು. ಅಥವಾ ಒಂದೇ ವರ್ಷದಲ್ಲಿ ನಿಲ್ಲಿಸಬಹುದು. ಆ ರೀತಿ ಮಾಡದೇ ಹೋದರೆ ಕಷ್ಟಗಳು ಎದುರಾಗುತ್ತವೆ ಎಂಬ ನಂಬಿಕೆಯಿದೆ.

೨. ಇತರ ಎಲ್ಲಾ ವರ್ಗದವರು ಸೇರಿದರೂ ಮುಖ್ಯ ಪಾತ್ರ ವಹಿಸುವವರು ಮರಾಟಿಗರೇ ಆಗಬೇಕು.

೩. ಉತ್ಸವದಲ್ಲಿ ಉಳಿದ ಸಾಮಾಗ್ರಿಗಳನ್ನು ಯಾರೂ ಬಳಸುವಂತಿಲ್ಲ. ಅದನ್ನು ಮಾರಾಟ ಮಾಡಿ ಬಂದ ಹಣವನ್ನು ಶೃಂಗೇರಿ ಮಠಕ್ಕೆ ಕಳುಹಿಸಿಕೊಡಬೇಕು.

೪. ಮಾಯಿ (ಫೆಬ್ರವರಿ) ತಿಂಗಳಲ್ಲಿ ಮಾತ್ರ ಆಚರಿಸಬೇಕು. ಇತರ ಋತುಮಾನಗಳಲ್ಲಿ ಆಚರಿಸುವಂತಿಲ್ಲ.

೫. ಕುಣಿತದ ಎಲ್ಲಾ ದಿನಗಳಲ್ಲಿ ವೇಷಗಾರರು ಶುದ್ಧಾಚಾರ ನಿಯಮ ಪಾಲಿಸಬೇಕು. ಮದ್ಯಪಾನ, ಮಾಂಸಾಹಾರ ಸೇವನೆ ನಿಷಿದ್ಧ.

೬. ಸ್ತ್ರೀಯರಿಗೆ ಕುಣಿತದಲ್ಲಿ ಅವಕಾಶವಿಲ್ಲ.

ಇಂತಹ ಆಚರಣೆ, ಕುಣಿತಗಳ ಹಿಂದೆ ಜನಸಾಮಾನ್ಯರು,ರೈತರು ತಮ್ಮ ದಣಿದಿರುವ ಮನಸ್ಸಿಗೆ ಮನೋರಂಜನೆಯನ್ನು, ಜೀವನ ಉತ್ಸಾಹವನ್ನೂ ಪಡೆಯುವುದನ್ನು ಕಾಣಬರುತ್ತದೆ. ರೈತರ ಆರೋಗ್ಯದ ಬಗ್ಗೆ ಕಾಳಜಿ ಮತ್ತು ಸಹೋದರ ಭಾವೈಕ್ಯತೆ ಬೆಳೆಸುವುದೂ ಆಚರಣೆಗಳ ಆಶಯವಾಗಿದೆ. ಕುಣಿತದ ಮತ್ತು ಪಾಠಾಂತರವನ್ನು ಗಮನಿಸಿದರೆ ಗೌಡರ ಸಿದ್ದವೇಷಕ್ಕೂ ಈ ಬಾಲೆಸಾಂತುವಿಗೂ ಕೊಡುಕೊಳ್ಳುವಿಕೆಯ ಸಂಬಂಧವಿದೆ ಎಂದು ಊಹಿಸಬಹುದು. ಬಾಲೆಸಾಂತುವಿನ ಮರಾಠಿ ಹಾಡಿನಲ್ಲಿ 'ಶೃಂಗೇರಿಯಿಂದ ಬಂದಿದ್ದೇವೆ' ಎಂಬಂತೆಯೇ ಸಿದ್ದವೇಷದ ಪಾಠದಲ್ಲಿಯೂ 'ಶೃಂಗೇರಿ ಮಠದಿಂದ' ಎಂಬ ಸಾಲೂ ಬರುತ್ತದೆ.[೮]

ಬುಡಕಟ್ಟುಗಳ ಬಹುತೇಕ ಆಚರಣೆಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಮದ್ಯ ಮಾಂಸ ಸೇವನೆ ಅನಿವಾರ್ಯವೆಂಬಂತೆ ಕಂಡುಬರುತ್ತದೆ. ಮತ್ತು ವನಭೋಜನಕ್ಕೆ ವಿಶೇಷ ಮಹತ್ವವನ್ನು ನೀಡುತ್ತಾರೆ. ಆರಂಭದಲ್ಲಿ ಇವುಗಳಿಗೆಲ್ಲಾ ನಿಷೇಧವಿದ್ದರೂ ಅಂತಿಮ ಹಂತದಲ್ಲಿ ಮದ್ಯ ಮಾಂಸಾಹಾರ ಸೇವನೆ ನಡೆಯುತ್ತದೆ.

''ಮುತ್ತಿನಂಥ ಮಾಯಿ ತಿಂಗಳಲ್ಲಿ ಸರ್ವರೂ ರೋಗ ರುಜಿನಗಳಿಂದ ಮುಕ್ತರಾಗಿ ಪ್ರೀತಿ ವಿಶ್ವಾಸದಿಂದ ಸಮೃದ್ಧಿಯ ಸಾಮರಸ್ಯ ಬದುಕು ಬಾಳಲೆಂಬಾಶಯದಿಂದ ಈ ನೃತ್ಯರೂಪಕ ಸಂಘಟಿತವಾದಂತಿದೆ. ಕಲಾ ಪ್ರದರ್ಶನದಲ್ಲಿ ದೇವತೆ- ಭೂತ, ಬೇರೆ ಬೇರೆ ಜಾತಿ, ಧರ್ಮ, ವೃತ್ತಿಗಳಿಗೆ ಸೇರಿದವರ ವೇಷಗಳು, ಜನಪದ, ಡಿಸ್ಕೋ ನೃತ್ಯಗಳು, ಕನ್ನಡ, ಮರಾಠಿ, ತುಳು ಭಾಷೆಯ ಹಾಡುಗಳು ಇವೆಲ್ಲವುಗಳ ಸಮನ್ವಯವಾಗಿ ಒಟ್ಟಂದದಲ್ಲಿ ಈ ಕಲೆ ನಮ್ಮ ಭಾವೈಕ್ಯತೆಗೆ ಹಿಡಿದ ಕನ್ನಡಿಯಾಗುತ್ತದೆ. ಸುಗ್ಗಿಯ ಸಮೃದ್ಧಿಯನ್ನು ಅನುಭವಿಸಿ ಸಂತೋಷಿಸುವ

ಮಂಟಪದಲ್ಲಿ ಕುಳ್ಳಿರಿಸಿ ಶೃಂಗಾರಗೊಳಿಸುವ ಹಾಡಿನ ಜೊತೆಗೆ ಗುಮ್ಮಟೆ ನರ್ತನ. ಹೀಗೆ ಪೂಜೆಯ ಎಲ್ಲಾ ಹಂತಗಳಲ್ಲೂ ಗುಮ್ಮಟೆ ಮೇಳ ಪ್ರಧಾನ ಪಾತ್ರ ವಹಿಸುವುದು ಕಂಡುಬರುತ್ತದೆ.

ಗುಮ್ಮಟೆಗೆ 'ಉಡ' ಎಂಬ ಪ್ರಾಣಿಯ ಚರ್ಮವನ್ನು ಬಳಸುತ್ತಾರೆ. ಇತರೆ ಯಾವುದೇ ಪ್ರಾಣಿಯ ಚರ್ಮವನ್ನು ಬಳಸುವುದಿಲ್ಲವೆಂದು ವಕ್ತೃಗಳು ಮಾಹಿತಿ ನೀಡುತ್ತಾರೆ.

ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ, ಪುತ್ತೂರು, ಬಂಟ್ವಾಳ ಪರಿಸರದಲ್ಲಿನ ಬಾಲೆಸಾಂತು ಕುಣಿತದ ಆಶಯವೇ ಈ ಗುಮ್ಮಟೆ ಕುಣಿತದ ಆಶಯವಾಗಿ ಕಂಡುಬರುತ್ತದೆ. ಮಹಮ್ಮಾಯಿಯ, ಭೈರವನ ಹೆಸರಿನಲ್ಲಿ ಹಾಡುತ್ತಾ ಕುಣಿಯುತ್ತಾ ಊರಿನ ಮಾರಿಯನ್ನು ಹೊಡೆದೋಡಿಸುವ ಆಶಯ ಈ ಜನಪದ ಕುಣಿತದಲ್ಲಿದೆ.

**ಹೋಳಿ ಹಬ್ಬ**

ಉತ್ತರ ಭಾರತದಲ್ಲಿನ ಪ್ರಮುಖ ಹಬ್ಬಗಳಲ್ಲಿ ಹೋಳಿಯೂ ಒಂದು. ಸಂಭ್ರಮ ಸಡಗರದಿಂದ ಅಲ್ಲಿನ ಪ್ರತಿಯೊಬ್ಬರೂ ಆಚರಿಸುವಂತಹ ಹಬ್ಬವಾಗಿದೆ. ಆದರೆ ದಕ್ಷಿಣ ಭಾರತದಲ್ಲಿ ವಿರಳವಾಗಿ ಆಚರಿಸುತ್ತಾರೆ ಈ ಹಬ್ಬವನ್ನು. ಕರ್ನಾಟಕದ ಕರಾವಳಿಯ ಕುಡುಬಿಯರು ಮತ್ತು ಮರಾಟಿ ಬುಡಕಟ್ಟು ಸಮುದಾಯಗಳು ಮಾತ್ರ ಸಂಭ್ರಮ ಸಡಗರದಿಂದ ಆಚರಿಸುತ್ತಾರೆ. ಪ್ರಾದೇಶಿಕವಾಗಿ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ಪರಿಸರವನ್ನು ಬಿಟ್ಟು ಉಳಿದ ಪ್ರದೇಶಗಳಲ್ಲಿ ಸಂಪೂರ್ಣವಾಗಿ ಮರಾಟಿಗರಿಂದ ದೂರವಾಗಿದೆ. ಆದರೆ ನೆರೆಯ ಉಡುಪಿ ಜಿಲ್ಲೆಯಲ್ಲಿರುವ ಮರಾಟಿಗರು ಇಂದಿಗೂ ಹೋಳಿಯನ್ನು ಆಚರಿಸುತ್ತಾರೆ. ಇಲ್ಲಿಂದ ವಲಸೆ ಹೋದ ಮರಾಟಿಗರು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ಪರಿಸರದಲ್ಲಿಯೂ ಹೋಳಿಯನ್ನು ಭಕ್ತಿಗೌರವದಿಂದ ಆಚರಿಸುತ್ತಾರೆ.

ಕೊಡುಕಟ್ಟೆ[೨]ಗೆ ಸಂಬಂಧಿಸಿದ ಮನೆಯ ಹಿರಿಯರೆಲ್ಲ ಗುರಿಕಾರನ ಚಾವಡಿಯಲ್ಲಿ ಸೇರಿ ಹಬ್ಬದ ಪೂರ್ವತಯಾರಿ ಬಗ್ಗೆ ಚರ್ಚಿಸುತ್ತಾರೆ. ಫಾಲ್ಗುಣ ದಶಮಿಯಂದು ಹೋಳಿ ಹಬ್ಬ ಆರಂಭವಾಗುತ್ತದೆ. ಕುಟುಂಬಸ್ಥರೆಲ್ಲ ಅಂದು ರಾತ್ರಿ ಸೇರುತ್ತಾರೆ. ಸಾಂಪ್ರದಾಯಿಕ ವೇಷಭೂಷಣಗಳನ್ನು ಧರಿಸಿ ಖೇಲ್[೨] ಯವರು ಗುಮ್ಮಟೆ (ಗುಂಮ್ಮೈ) ಕೋಲುಗಳೊಡನೆ ಬಂದು ಸೇರುತ್ತಾರೆ.

ಗುರಿಕಾರನು ತುಳಸಿಕಟ್ಟೆಯಲ್ಲಿ ತೆಂಗಿನಕಾಯಿ (ಸಿಪ್ಪೆ ಸಹಿತವಿರುವ) ಯೊಂದನ್ನು ದೇವಿಯ ಸನ್ನಿಧಿಯಲ್ಲೇರಿಸುತ್ತಾನೆ. ಪುರೋಹಿತರ ಉಪಸ್ಥಿತಿಯತಿಯಲ್ಲಿ ಗುರಿಕಾರ ತುಳಸಿಕಟ್ಟೆಯಲ್ಲಿ ಕಳಶವಿಟ್ಟು ದೀಪ ಬೆಳಗಿಸಿ, ಬೆತ್ತದ ಹಿಡಿಗಳನ್ನು ದರ್ಶನಪಾತ್ರಿಗೆ ಕೊಟ್ಟಾಗ ದೇವಿ ಆವಾಹಿತಳಾಗುತ್ತಾಳೆ. ಈ ಮೂಲಕ ಅಧಿಕೃತವಾಗಿ ಹಬ್ಬ ಆರಂಭವನ್ನು ಪಡೆಯುತ್ತದೆ. ಆನಂತರ ಸಾಲಂಕೃತ ಖೇಲೆಯವರಿಂದ ಹಾಡಿನ ಲಯಗತಿಗನುಗುಣವಾಗಿ ಹೆಜ್ಜೆಯಿಕ್ಕುತ್ತಾ ಗುಂಮ್ಮೈ ತಾಳಗಳನ್ನು ಬಾರಿಸುತ್ತಾ ಕುಣಿತ ಆರಂಭ.

ಹಬ್ಬದ ಮೊದಲ ದಿನ ಗುರಿಕಾರನ ಚಾವಡಿ (ಹತ್ತರಕಟ್ಟೆ) ಯಲ್ಲಿ ಕುಣಿತ ಆರಂಭಿಸಿದ ಖೇಲೆ ಐದು ದಿನ ಅಹರ್ನಿಶಿ ಊರೂರು ಸಂಚರಿಸುತ್ತದೆ. ಪ್ರತಿಯೊಂದು ಮನೆಯವರೂ ಮನೆಗೆ ಬಂದ ಖೇಲೆಯವರಿಗೆ ಕುಣಿತ ನೋಡಿ ಆನಂದಿಸಿ ಅಕ್ಕಿ, ತೆಂಗಿನಕಾಯಿ ಇತ್ಯಾದಿಗಳನ್ನು ನೀಡಿ ಗೌರವಿಸುತ್ತಾರೆ. ಹಿಂದೆ ಹತ್ತರಕಟ್ಟೆಯಿಂದ ಹೊರಟ

ಖೇಲೆ ತಂಡ ಪುನಃ ಮರಳುವುದು ಕೊನೆಯ ದಿನದಂದೇ. ಆದರೆ ಕಾಲ ಬದಲಾದಂತೆ ಸಂಪ್ರದಾಯ ಸಡಿಲಗೊಳ್ಳುತ್ತಾ, ಮೂರನೇ ದಿನದಂದು ಮತ್ತೊಮ್ಮೆ ಬರುವುದು ಕಂಡುಬರುತ್ತದೆ. ಮನೆಯಲ್ಲಿರುವ ಚಿಕ್ಕಮಕ್ಕಳನ್ನು ಎತ್ತಿಕೊಂಡು ಖೇಲೆಯವರು ಕುಣಿದರೆ ಮಕ್ಕಳು ಚೆನ್ನಾಗಿ ಬೆಳೆಯುತ್ತಾರೆ. ಒಳ್ಳೆಯ ಭವಿಷ್ಯವಿದೆ ಎಂಬ ನಂಬಿಕೆಯೂ ಕಂಡುಬರುತ್ತದೆ.

ಮರಾಟಿಗರಲ್ಲಿ ಅನೇಕ ಕೂಡುಕಟ್ಟುಗಳಿವೆ. ಹೋಳಿ ಆಚರಣೆ ಸಂದರ್ಭದಲ್ಲಿ ಒಂದು ಕೂಡುಕಟ್ಟಿಗೆ ಸೇರಿದ ಖೇಲೆ ತಂಡದವರು ಇನ್ನೊಂದು ಕೂಡುಕಟ್ಟಿನ ತಂಡವನ್ನು ಬೇಟಿಯಾಗಬಾರದು. ಫಾಲ್ಗುಣ ಮಾಸದ ಹುಣ್ಣಿಮೆಯ ದಿನ ಹೋಳಿಯ ಅಂತಿಮ ದಿನ. ಅಂದು ಗುರಿಕಾರನ ಚಾವಡಿಯಲ್ಲಿ ಕೂಡುಕಟ್ಟಿಗೆ ಸಂಬಂಧಿಸಿದವರೆಲ್ಲರೂ ಸೇರುತ್ತಾರೆ. ಮರುದಿನ ಅದೇ ಮನೆಯಲ್ಲಿ ಎಲ್ಲರಿಗೂ ಔತಣ ಕೂಟವನ್ನು ಏರ್ಪಡಿಸುತ್ತಾರೆ. ಹಬ್ಬದ ದಿನಗಳಲ್ಲಿ ಊರೂರು ಸುತ್ತುತ್ತಾ ಕುಣಿಯುತ್ತಾ ದೇವರ ಸೇವೆಯಲ್ಲಿ ನಿರತರಾಗಿದ್ದ ಖೇಲೆ ಅಂದು ರಾತ್ರಿ ಹತ್ತರಕಟ್ಟೆಯ ತುಳಸಿಜೆಯ ಸನ್ನಿಧಿಗೆ ವಾಪಸಾಗುತ್ತಾರೆ. ತಮ್ಮ ವೇಷಭೂಷಣವನ್ನು ತೆಗೆದು ತಮ್ಮ ತಮ್ಮ ಮನೆಯಲ್ಲಿ ಮಧ್ಯಾಹ್ನದ ಊಟ ಮುಗಿಸಿ ಮತ್ತೆ ಉಡುಪುಗಳನ್ನು ಧರಿಸುತ್ತಾರೆ. ಹತ್ತಿರದ ದೇವಸ್ಥಾನಕ್ಕೆ ಹೋಗಿ ಪ್ರಾರ್ಥಿಸಿ,ಮರಳಿ ಕಟ್ಟೆಯ ಚಪ್ಪರಕ್ಕೆ ಬರುತ್ತಾರೆ. ಚಪ್ಪರದಲ್ಲಿ ಹಾಡು ಕುಣಿತ ಗುಮ್ಮಟೆಗಳು ಪ್ರತಿಧ್ವನಿಸುತ್ತವೆ. ತುಳಸಿಜೆಯ ಸನ್ನಿಧಿಯಲ್ಲಿ ಭಜನೆ, ಕುಣಿತಗಳೊಂದಿಗೆ ಹಬ್ಬದ ಮೊದಲ ದಿನದಂತೆ ದರ್ಶನ ಪಾತ್ರಿಯಲ್ಲಿ ತುಳಸಿಜೆ ಆವಾಹಿತಳಾಗಿ ಭಕ್ತರ ಮುಂದೆ ಕಾಣಿಸಿಕೊಳ್ಳುತ್ತಾಳೆ. ಉಪಸ್ಥಿತರಿರುವ ಭಕ್ತರಿಗೆ ಅಭಯ, ಆಶೀರ್ವಾದವನ್ನು ನೀಡಲಾಗುತ್ತದೆ.

ದರ್ಶನವಾದನಂತರ ಪುನಃ ಕೋಲಾಟ ಗುಂಮ್ಮೆಗಳನ್ನು ಬಾರಿಸಿ ಹಾಡಿನೊಂದಿಗೆ ಕುಣಿತ ಆರಂಭವಾಗುತ್ತದೆ. ಸಂಪ್ರದಾಯದ ಪ್ರಕಾರ ಕೋಲಾಟ ಗುಂಮ್ಮೆಗಳಿಗೆ ಸಂಬಂಧಿಸಿದ ಹಾಡುಗಳನ್ನೆಲ್ಲ ಅಂದು ಹಾಡಿ ಕುಣಿಯಬೇಕು. ಆದರೆ ಇಂದು ಈ ಸಂಪ್ರದಾಯ ಮಾಯವಾಗುತ್ತಿದೆ. ಕೇವಲ ಒಂದೆರಡು ಹಾಡಿನ ಸಾಲನ್ನು ಮಾತ್ರ ಹಾಡಲಾಗುತ್ತದೆ. ಮುಹೂರ್ತ ಸಮೀಪಿಸುತ್ತಿದ್ದಂತೆ ಗುಂಮ್ಮೆಯ ನಾದ, ದೇವರ ನಾಮಗಳೊಂದಿಗೆ ಗುರಿಕಾರರು, ಸೇರಿದ ಸಮಸ್ತರ ಒಪ್ಪಿಗೆ ಪಡೆದು ತುಳಸಿಜೆಯ ಸನ್ನಿಧಿಯಲ್ಲಿ ಹಿಂದೆ ಏರಿಸಲಾಗಿದ್ದ ತೆಂಗಿಕಾಯಿಯನ್ನು ತೆಗೆದು ಕೆಳಗಿರಿಸುತ್ತಾರೆ.

ಮುಂದೆ ಎಲ್ಲರೂ ಸನಿಹದ ದೇವಸ್ಥಾನಕ್ಕೆ ತೆರಳಿ, ಸ್ನಾನ ಮಾಡುತ್ತಾರೆ. ಗುರಿಕಾರನು ನಾಂದಿ ಮತ್ತು ವಚನ ಬದ್ಧತೆಗಳ ಸಂಕೇತವಾಗಿದ್ದ ತೆಂಗಿನಕಾಯಿಯನ್ನು ನೀರಿಗಿಳಿಯುವ ಮೊದಲು ಒಡೆದು ನೀರಿಗೆ ಚೆಲ್ಲುತ್ತಾನೆ. ಐದು ದಿನ ಆವಾಹಿಸಿ ಪೂಜಿಸಿದ ದೈವಿಕ ಶಕ್ತಿಯನ್ನು ಜಲದಲ್ಲಿ ವಿಸರ್ಜಿಸುವ ಸಂಕೇತವಾಗಿದೆ.

ಸ್ನಾನಾನಂತರ ಒಂದು ಬಯಲಲ್ಲಿ ಅಥವಾ ಹೊಲದಲ್ಲಿ ಎಲ್ಲರು ಸೇರಿ ಬೆಂಕಿಯನ್ನು ಹಾಕುತ್ತಾರೆ.. ಉರಿವ ಅಗ್ನಿಗೆ ಗುರಿಕಾರನು ತೆಂಗಿನಕಾಯಿಯನ್ನು ಅರ್ಪಿಸುತ್ತಾನೆ. ಜನರೆಲ್ಲಾ ಬೆಂಕಿಯನ್ನು ಹಾರಿ ದಾಟುತ್ತಾರೆ. ಇದು ಕಾಮದಹನದ ಸಂಕೇತ. ಬೆಂಕಿಯನ್ನು ದಾಟಿ ಬರುವಾಗ ಗಂಡಸರು ತಮ್ಮ ಚಿಟಿಕೆಯಲ್ಲಿ ತಂದ ಸುಟ್ಟ ಭಸ್ಮವನ್ನು ಅಕ್ಷತೆಯೊಂದಿಗೆ ಹರಿವಾಣದಲ್ಲಿ ಕೊಡಲಾಗುತ್ತದೆ. ದೀಪಕ್ಕೆ ವಂದಿಸಿ ಭಸ್ಮವನ್ನು ಹಣೆಗೆ ಹಚ್ಚಿಕೊಳ್ಳುತ್ತಾರೆ. ಎಲ್ಲರೂ ಸಾಲಾಗಿ ಕುಳಿತ ಮೇಲೆ ಹೆಂಗಸರು ಅವರಿಗೆಲ್ಲಾ ನಿವಾಳಿ ತೆಗೆಯುತ್ತಾರೆ. ಸ್ನಾನಕ್ಕೆ ಪೂರ್ವದಲ್ಲಿ ದೇವಿಯ

ಸನ್ನಿಧಿಯಲ್ಲಿ ಇರಿಸಿದ ಗುಂಪ್ಯೆ, ಕೋಲು ಮತ್ತು ದಿರಿಸುಗಳಿಗೆ ಪೂಜೆಮಾಡಿ ಜೋಪಾನವಾಗಿ ತೆಗೆದಿರಿಸಲಾಗುತ್ತದೆ. ಸರ್ವರಿಗೂ ಭೋಜನಾತಿಥ್ಯ ನಡೆದು ಹೋಳಿ ಹಬ್ಬಕ್ಕೆ ಅಂತಿಮ ತೆರೆ ಬೀಳುತ್ತದೆ.

**ಕೆಲವೊಂದು ನಿಯಮ-ನಿಷೇಧಗಳು**

೦೧. ಹತ್ತರಕಟ್ಟೆಯಿಂದ ಹೊರಟ ಖೇಲೆ, ಹಬ್ಬದ ಕೊನೆಯ ದಿನದಂದೇ ಹಿಂತಿರುಗಬೇಕು.

೦೨. ಕೂಡು ಕಟ್ಟಿಗೆ ಸೇರಿದ ಕುಟುಂಬದ ಪ್ರತಿ ಮನೆಯಿಂದ ಕನಿಷ್ಟ ಒಬ್ಬ ಗಂಡಸನಾದರೂ ಖೇಲೆಯಲ್ಲಿ ಪಾಲ್ಗೊಳ್ಳಬೇಕು.

೦೩. ಖೇಲೆಯವರು ಹಬ್ಬದ ಐದು ದಿನಗಳಲ್ಲಿ ಸ್ನಾನ ಮಾಡಬಾರದು.

೦೪. ಗೃಹಸ್ಥರು ಈ ಅವಧಿಯಲ್ಲಿ ಬ್ರಹ್ಮಚರ್ಯವನ್ನು ಪಾಲಿಸಬೇಕು.

೦೫. ಚಹಾ-ಕಾಫಿ, ಬೀಡಿ-ಸಿಗರೇಟು, ಮಾಂಸಾಹಾರ, ಮಾಧಕ ಪದಾರ್ಥ ಸೇವನೆಗೆ ನಿಷೇಧವಿದೆ.

೦೬. ತಲೆ ಹೊರೆ ಹೊರುವುದಕ್ಕೆ ಅವಕಾಶವಿಲ್ಲ.

೦೭. ಅನ್ಯರಲ್ಲಿ ಆಹಾರ ಸೇವನೆ, ಮತ್ತು ಯಾವುದೇ ರೀತಿಯ ಹಿಂಸೆಯ ಮಾಡಬಾರದು.

೦೮. ಸೂತಕದಲ್ಲಿರುವವರು ಹಬ್ಬದಲ್ಲಿ ಭಾಗವಹಿಸಲು ಅವಕಾಶವಿಲ್ಲ.

೦೯. ಬಹಿಷ್ಠೆಯಾದ ಹೆಂಗಸರು ಮನೆಯಲ್ಲಿರಬಾರದು.

೧೦. ಗಂಡಸರು ಈ ಕಾಲದಲ್ಲಿ ಚಪ್ಪಲಿ ಹಾಕಬಾರದು. ಮತ್ತು ಕ್ಷೌರ ನಿಷಿದ್ಧ.

ಈ ಎಲ್ಲಾ ಸಂಪ್ರದಾಯಗಳನ್ನು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬರಲಾಗುತ್ತಿತ್ತು. ಪರಿವರ್ತನೆಯ ಹಾದಿಯಲ್ಲಿ ಅನೇಕ ನಿಷೇಧ-ನಿಯಮಗಳು ತೆರಮರೆಗೆ ಸರಿದಿವೆ. ಪ್ರದೇಶದಿಂದ ಪ್ರದೇಶಕ್ಕೆ, ಸಮುದಾಯದಿಂದ-ಸಮುದಾಯಕ್ಕೆ ಭಿನ್ನ ಭಿನ್ನ ರೀತಿಯಲ್ಲಿ ಹೋಳಿ ಹಬ್ಬ ಆಚರಿಸಲ್ಪಡುವುದು ಕಂಡು ಬರುತ್ತದೆ. ಹಬ್ಬದ ಹೆಸರಿನಲ್ಲಿ, ಜಾತಿ-ಧರ್ಮದ ಹೆಸರಿನಲ್ಲಿ ದೇಶದ ಅನೇಕ ಕಡೆ ಕೋಮು ಗಲಭೆಗಳು ಸಾಮಾನ್ಯವೆನಿಸಿರುವ ಈ ಕಾಲದಲ್ಲಿ ಮರಾಟಿಗರು ಆಚರಿಸುವ ಈ ಹಬ್ಬ ಸಮಾಜದಲ್ಲಿ ಸ್ನೇಹ, ವಿಶ್ವಾಸ, ಔದಾರ್ಯ-ಆತ್ಮೀಯತೆಗಳನ್ನು ಬೆಸೆಯುವುದರಲ್ಲಿ ಎರಡು ಮಾತಿಲ್ಲ.

**೪.೫ ಹಬ್ಬ ಹರಿದಿನಗಳು**

ಭಾರತೀಯ ಸಾಂಸ್ಕೃತಿಕ ಬದುಕಿನಲ್ಲಿ ಹಬ್ಬ ಹರಿದಿನಗಳಿಗೆ ವಿಶೇಷ ಸ್ಥಾನಮಾನವಿದೆ. ವರ್ಷಾರಂಭದ ಯುಗಾದಿಯಿಂದ ಹಿಡಿದು ಮಹಾಶಿವರಾತ್ರಿಯವರೆಗೆ ಬಂದು ಹೋಗುವ ಹಬ್ಬಗಳು ಹತ್ತು ಹಲವು. ನಂಬಿಕೆ ಮತ್ತು ಸಂಪ್ರದಾಯಗಳ ಕ್ರಿಯಾರೂಪಗಳೇ ಹಬ್ಬಗಳು. ಹಬ್ಬಗಳ ಬಗ್ಗೆ ದೇಜಗೌ ಅವರು ಈ ರೀತಿ ವ್ಯಾಖ್ಯಾನಿಸುತ್ತಾರೆ. ''ಹಬ್ಬಗಳು ಗ್ರಾಮೀಣ ಜೀವನದ ಸಾಂಸ್ಕೃತಿಕ ಪ್ರೇರಣೆಗಳೆಂದೂ ಜಾನಪದದ ರಸಿಕತೆಗೂ ಕಲಾಭಿಜ್ಞತೆಗೂ ಹಿಡಿದ ಕನ್ನಡಿಗಳೆಂದೂ ಧಾರಾಳವಾಗಿ ಹೇಳಬಹುದು. ವರ್ಷಕ್ಕೊಮ್ಮೆ ಬರುವ ಹಬ್ಬಗಳು ಜೀವನದ

ರಸನಿಮಿಷಗಳು, ಬಾಳಿಗೆ ತಂಪೆರೆಯುವ ಅಮೃತ ಬಿಂದುಗಳು. ಪ್ರತಿಯೊಂದು ಹಬ್ಬವೂ ಸಂಪ್ರದಾಯವೂ ಅಹುದು, ಸಂಕೀರ್ಣ ಕಲೆಯೂ ಅಹುದು, ಆತ್ಮೋದ್ಧಾರ ಸಾಧನವಾದ ಮಾಧ್ಯಮವೂ ಅಹುದು, ಹೃದಯ ಹೃದಯಗಳನ್ನೊಟ್ಟುಗೂಡಿಸುವ ಸೇತುಶಕ್ತಿಯೂ ಅಹುದು, ಅದು ಐಕ್ಯದ ಮಹತ್ವವನ್ನು ಪ್ರಕಾಶಪಡಿಸುತ್ತದೆ. ವಿಶ್ವಶಕ್ತಿಯಲ್ಲಿನ ವಿಶ್ವಾಸವನ್ನು ಬಲಪಡಿಸುತ್ತದೆ. ಲೌಕಿಕ ಮತ್ತು ಪಾರಮಾರ್ಥಿಕಗಳ ಸಂಗಮ ಸ್ಥಾನವದು. ಸಾಂಸ್ಕೃತಿಕ ಸಂವರ್ಧನೆ ಹಾಗೂ ಸಂರಕ್ಷಣೆಗಳಲ್ಲಿ ಹಬ್ಬದ ಪಾತ್ರ ಮಹತ್ವ ಪೂರ್ಣವಾದುದು.''[೩೦] ಹಾಗಾಗಿಯೇ ಅತೀ ಪುರಾತನ ಕಾಲದಿಂದಲೂ ಅನೇಕ ಹಬ್ಬ ಹರಿದಿನಗಳು ತಲೆಮಾರಿನಿಂದ ತಲೆಮಾರಿಗೆ ಸಾಗಿ ಬಂದಿವೆ ಮತ್ತು ಮುಂದೆ ಸಾಗುತ್ತಿವೆ.

ದಕ್ಷಿಣ ಕನ್ನಡ ಜಿಲ್ಲೆಯ ಮರಾಟಿಗರು ತುಳುನಾಡಿನ ವಾರ್ಷಿಕಾವರ್ತನದ ಹಬ್ಬಗಳನ್ನೆಲ್ಲಾ ಆಚರಿಸುತ್ತಾರೆ. ಪರಂಪರಾಗತವಾಗಿ ಬಂದಂಥ ಹಿಂದೂ ಹಬ್ಬ ಹರಿದಿನಗಳನ್ನೆಲ್ಲಾ ಮರಾಟಿಗರು ಆಚರಿಸುತ್ತಾರೆ. ಜಿಲ್ಲೆಯ ಮರಾಟಿಗರ ವಾರ್ಷಿಕಾವರ್ತನ ಆಚರಣೆಗಳು ಒಟ್ಟು ಜಿಲ್ಲೆಯ ಇತರ ಸಮುದಾಯಗಳ ವಾರ್ಷಿಕಾವರ್ತನದೊಂದಿಗೆ ಅಂತರ್ಗತವಾಗಿರುವುದು ಕಂಡುಬರುತ್ತದೆ. ಜಿಲ್ಲೆಯ ಪ್ರಮುಖ ಆಹಾರ ಬೆಳೆ ಭತ್ತವಾಗಿರುವುದರಿಂದ ಬೇಸಾಯ ಪ್ರಮುಖವಾದ ಕಾಯಕಗಳಲ್ಲಿ ಒಂದಾಗಿದೆ. ಇಂದು ಪರಿಸ್ಥಿತಿ ಬದಲಾಗಿದೆ. ಹೊಲ-ಗದ್ದೆಗಳನ್ನೆಲ್ಲಾ ಅಡಿಕೆ ತೋಟಗಳು ಆವರಿಸಿಕೊಂಡಿವೆ.

ಪಗ್ಗು (ಏಪ್ರಿಲ್-ಮೇ)

ಬಿಸು ಶಿವರಾತ್ರಿ ಗದ್ದೆಯಲ್ಲಿ ಭತ್ತ ಬಿತ್ತುವುದು ಅಥವಾ ಕೈ ಬಿತ್ತು ಹಾಕುವುದು.

ಬೇಷ (ಮೇ-ಜೂನ್)

ಕೃಷಿ ಕೆಲಸ ಆರಂಭ ಗದ್ದೆಗೆ ಬಿತ್ತನ್ನು ಹರಡುವುದು. ಪತ್ತನಾಜೆ.

ಕಾರ್ತೆಲ್ (ಜೂನ್-ಜುಲೈ)

ಮಳೆಗಾಲ ಪ್ರಾರಂಭ

ಆಟಿ (ಜುಲೈ-ಆಗಸ್ಟ್) ಆಟಿ ಅಮವಾಸ್ಯೆ

ಅನಿಷ್ಟದ ಕಾಲ. ಸುಗ್ಗಿಯ ಅಕ್ಕಿ ಮುಗಿಯುವ ಕಾಲ. ಹೊಸ ಬೆಳೆ ಬೆಳೆದಿರುವುದಿಲ್ಲ. ಹಲಸು, ಹಲಸಿನ ಬೀಜ ಇತ್ಯಾದಿಗಳನ್ನು ತಿನ್ನುವ ಕಾಲ.

ಸೋಣ (ಆಗಸ್ಟ್-ಸೆಪ್ಟಂಬರ್) ಸಂಕ್ರಾಂತಿ, ಸೋಣ ಶನಿವಾರ

ಹೊಸ ಬೆಳೆ ಕಟಾವು, 'ಮನೆ ತುಂಬಿಸುವುದು' ಮತ್ತು ಹೊಸ ಅಕ್ಕಿ ಊಟ (ಪುದ್ವಾರ್) ಆಚರಣೆ

ನಿರ್ನಾಲ್ (ಸೆಪ್ಟಂಬರ್-ಅಕ್ಟೋಬರ್)

ಮನೆಯಲ್ಲಿ ಭತ್ತ ತುಂಬಿರುವುದು, ಸಂಕ್ರಮಣದಂದು ಭಾಗಮಂಡಲ (ಕಾವೇರಿ ಉಗಮ ಸ್ಥಾನ)ದಲ್ಲಿ ಸ್ನಾನ.

ಬೊಂತೆಲ್ (ಅಕ್ಟೋಬರ್-ನವೆಂಬರ್)

ದೀಪಾವಳಿ ಹಬ್ಬ, ಜಾನುವಾರು ಜಾತ್ರೆ, ಗೋ ಪೂಜೆ

ಜಾರ್ದೆ (ನವಂಬರ್-ಡಿಸೆಂಬರ್) ದೀಪಾವಳಿ, ಕಾರ್ತೀಕ ಹುಣ್ಣಿಮೆ

ಸುಗ್ಗಿ ಬೆಳೆ ಆರಂಭ ಎತ್ತುಗಳ ಮಾರಾಟ, ಗದ್ದೆ ಕೋರಿ

ಪೆರಾರ್ದೆ (ಡಿಸೆಂಬರ್-ಜನವರಿ)

ಸುಗ್ಗಿ ಬೆಳೆ, ಮದುವೆ, ಮನೆಯ ಛಾವಣಿಗೆ ಮುಳಿ, ಅಡಿಕೆ ಸೋಗೆ ಹೊದೆಸುವುದು

ಪೊನ್ನಿ (ಜನವರಿ-ಫೆಬ್ರವರಿ)

ಕೆಡ್ಡಾಸ

ಮಾಯಿ (ಫೆಬ್ರವರಿ-ಮಾರ್ಚ್)

ಸುಗ್ಗಿ (ಮಾರ್ಚ್-ಏಪ್ರಿಲ್) ಯುಗಾದಿ

**ಚಂದ್ರಮಾನ ಯುಗಾದಿ**

ಮರಾಟಿಗರಲ್ಲಿ ಹೊಸ ವರ್ಷದ ಆಚರಣೆ ನಡೆಯುವುದು ಯುಗಾದಿಯ ಮೂಲಕ, ಸಾಂಪ್ರದಾಯಿಕ ಕೃಷಿ-ಬೇಸಾಯ ಮಾಡುವ ಇವರಿಗೆ ಯುಗಾದಿ ವಿಶೇಷವಾದ ಹಬ್ಬವೆಂದು ಪರಿಗಣಿಸಲ್ಪಟ್ಟಿದೆ. ಯುಗಾದಿ ಪೂಜೆಯನ್ನು ಜಿಲ್ಲೆಯ ಅನೇಕ ಮರಾಟಿಗರು ಮನೆಯಲ್ಲಿ ಆಚರಿಸುತ್ತಾರೆ. ಯುಗಾದಿಯಂದು ಗಣಪತಿಗೆ ದೀಪವಿರಿಸಿ (ಸುತ್ತೆ) ಮನೆಯ, ಕುಟುಂಬದ ಸದಸ್ಯರೆಲ್ಲರೂ ಕೈಮುಗಿಯುತ್ತಾರೆ. ಕಿರಿಯರು ಹಿರಿಯರ ಪಾದ ಮುಟ್ಟಿ ಆಶೀರ್ವಾದ ಪಡೆಯುವುದೂ ಸಂಪ್ರದಾಯ. ಅಂದು ಬೇವು ಬೆಲ್ಲ ತಿನ್ನುವ ಪದ್ಧತಿ ಇದೆ. ಯುಗಾದಿಗೆ ಬಿತ್ತನೆ ಮಾಡಿದ ಬೀಜ ಹಾಳಾಗುವುದಿಲ್ಲವೆಂಬ ನಂಬಿಕೆಯಿದೆ. ಯುಗಾದಿಯಂದು ಮನೆಯಿಂದ ಯಾವುದೇ ಧನ/ಧಾನ್ಯಗಳನ್ನು ಹೊರಗೆ ಕೊಡಬಾರದೆಂಬ ನಂಬಿಕೆಯಿರುವುದಾಗಿ ವಕ್ತೃಗಳು ಹೇಳುತ್ತಾರೆ.

**ಮಹಾಶಿವರಾತ್ರಿ**

ಶಿವರಾತ್ರಿಯನ್ನು ಮರಾಟಿಗರೆಲ್ಲರೂ ಶ್ರದ್ಧೆ ಭಕ್ತಿಯಿಂದ ಆಚರಿಸುತ್ತಾರೆ. ಮರಾಟಿ ಬುಡಕಟ್ಟು ಜನರು ಶಿವನ ಆರಾಧಕರಾದುದರಿಂದ ಸಹಜವಾಗಿಯೇ ರಾತ್ರಿಯನ್ನು ಶಿವನ ಭಜನೆ ಮೂಲಕ ಕಳೆಯಬೇಕೆಂಬುದು ಹಿರಿಯರಿಂದ ಬಂದ ಪದ್ಧತಿಯಾಗಿದೆ. ಆದರೆ ಇಂದು ಆ ರೀತಿಯ ಭಕ್ತಿ ಭಾವನೆಗಳಿಗೆ ಅವಕಾಶ ಕಡಿಮೆ ಎಂದು ಹೇಳಬಹುದು. ತುಳುನಾಡಿನಲ್ಲಿ ಶಿವರಾತ್ರಿಯಂದು ಯಾರೂ ಯಾರ ತೋಟ, ಗದ್ದೆ, ಮನೆಯಿಂದ ಏನೂ ಬೇಕಾದರೂ ಕದ್ದು ತಿನ್ನಬಹುದು. ರಾತ್ರಿಯಿಡೀ ಹೊಟ್ಟೆ ತುಂಬಿಸಿಕೊಳ್ಳಬಹುದು. ಮನೆಯವರು ಶಾಪ ಹಾಕಿದರೆ ಯಾವುದೇ ರೀತಿಯ ತಟ್ಟುವುದಿಲ್ಲ ಎಂಬ ನಂಬಿಕೆಯಿದೆ. ಒಟ್ಟು ಮೂರು ದಿನಗಳ ಶಿವರಾತ್ರಿಯನ್ನು ಉಲ್ಲಾಸ ಮೋಜಿನಿಂದ ಕಳೆಯುತ್ತಿದ್ದ ಕಾಲವೊಂದಿತ್ತು. ಇಂದು ಸಾಂಕೇತಿಕವಾಗಿ ಆಚರಿಸುತ್ತಾರೆ.

**ವಿಷು ಸಂಕ್ರಮಣ**

ಸೂರ್ಯನು ಭೂಮಧ್ಯರೇಖೆಯ ಮೇಲೆ ಬರುವ ಪರ್ವಕಾಲದ ಹಬ್ಬವನ್ನು 'ವಿಷು' ಎಂದು ಕರೆಯುತ್ತಾರೆ. ವಿಷುವಿನ ತದ್ಭವ ರೂಪವೇ ಬಿಸು. ತುಳುನಾಡಿನಲ್ಲಿ 'ಬಿಸು ಕಣಿ' ಇಡುವ ಪದ್ಧತಿ ಹಳ್ಳಿಗಳಲ್ಲಿ ಇವೆ. ಅಂದು ಬೆಳಿಗ್ಗೆ ಮನೆಯವರೆಲ್ಲರೂ ಸ್ನಾನಮಾಡಿ ಶುಚೀಭೂತರಾಗುತ್ತಾರೆ. ದೇವರ ಕೋಣೆಯಲ್ಲಿ ದೀಪ ಉರಿಸಿ ತಾವು ಬೆಳೆದಂತಹ ಎಲ್ಲಾ ದವಸ-ಧಾನ್ಯಗಳನ್ನು ಪೂಜಿಸುತ್ತಾರೆ. ಇದರಿಂದ ನಮ್ಮ ದವಸ-ಧಾನ್ಯಗಳು ವೃದ್ಧಿಯಾಗಲಿ ಎಂಬ ಪೂಜ್ಯ ಭಾವನೆ ಇಲ್ಲಿ ವ್ಯಕ್ತವಾಗುತ್ತದೆ. ಕೂಲಿ ಕೆಲಸಗಾರರು 'ದಣಿ'ಯ ಮನೆಗೆ ಹೋಗಿ ತಾವು ಬೆಳೆದ ತರಕಾರಿಗಳನ್ನು ಕೊಟ್ಟು ಆಶೀರ್ವಾದ ಪಡೆಯುತ್ತಾರೆ. ಯಜಮಾನ ಕೆಲಸಗಾರರಿಗೆ ವಸ್ತ್ರಗಳನ್ನು ಕೊಡುವ ಸಂಪ್ರದಾಯವಿದೆ. ಮರಾಟಿಗರೆಲ್ಲರ ಮನೆಯಲ್ಲಿ ಬಿಸು ಕಣಿ ಇಡುವ ಸಂಪ್ರದಾಯವಿದೆ. ಕಿರಿಯವರೆಲ್ಲರೂ ಹಿರಿಯವರ ಪಾದ ಮುಟ್ಟಿ ಆಶೀರ್ವಾದ ಪಡೆಯುವುದು ಅಂದಿನ ವಿಶೇಷತೆಗಳಲ್ಲಿ ಒಂದು.

**ಕೆಡ್ಡಸ**

ತುಳುವರು ಮಾಯಿ ತಿಂಗಳಲ್ಲಿ ಭೂಮಿತಾಯಿಯ ಪೂಜೆಯನ್ನು 'ಕೆಡ್ಡಸ'ದ ಮೂಲಕ ಗಂಡು ಹೆಣ್ಣಿನ ಕಲ್ಪನೆಯನ್ನು ಜನಪದ ಸಂಪ್ರದಾಯಗಳು ಬಲಿಷ್ಠವಾದ ರೂಪಕಗಳಲ್ಲಿ ದಾಖಲಿಸಿರುವುದಕ್ಕೆ 'ಕೆಡ್ಡಸ' ಒಂದು ಉದಾಹರಣೆ. 'ಭೂಮಿ' ಎಂಬ ಹೆಣ್ಣು ಮುಟ್ಟಾದವಳೆಂದು ಭಾವಿಸಿ ಎಣ್ಣೆ ಕೊಟ್ಟು ಸ್ನಾನಮಾಡಿಸಿ ಮೂರು ದಿನ ಮೈಲಿಗೆಯನ್ನು ಆಚರಿಸುವ ಸಂಪ್ರದಾಯವೇ ಈ ಕೆಡ್ಡಸ.

ಕೆಡ್ಡಸದ ಮೊದಲನೇ ದಿನ ರಾಶಿ ಹಾಕಿದ ಭತ್ತಕ್ಕೆ ಕಾಡಿನಿಂದ ತಂದಂಥ ಚೂರಿಮುಳ್ಳನ್ನು ಇಡುತ್ತಾರೆ. ಕೆಡ್ಡಸದ ಮೂರು ದಿನಗಳಲ್ಲಿ ರಾಶಿಯಿಂದ ಭತ್ತವನ್ನು ತೆಗೆದುಕೊಳ್ಳುವಂತಿಲ್ಲ. ಈ ಮೂರು ದಿನಗಳಲ್ಲಿ ಭೂಮಿಯನ್ನು ಉಳುವಂತಿಲ್ಲ ಮತ್ತು ಯಾವುದೇ ಗಿಡಮರಗಳನ್ನು ಕಡಿಯುವಂತಿಲ್ಲ. ಎರಡನೇ ದಿನ ಅಂಗಳವನ್ನು ಗುಡಿಸಿ ಸಾರಿಸಿ ಶುದ್ಧಮಾಡುತ್ತಾರೆ. ನಾಲ್ಕನೇ ದಿನ ಊರಿನವರೆಲ್ಲ ಸಾಮೂಹಿಕವಾಗಿ ಬೇಟೆಗೆ ಹೋಗಬೇಕೆಂಬ ಸಂಪ್ರದಾಯವಿದೆ. ಕೆಡ್ಡಸದಂದು ಹುರುಳಿ ಅಥವಾ ಅಕ್ಕಿಯನ್ನು ಹುರಿದು ತಿನ್ನಬೇಕಂತೆ. ತಿನ್ನದೇ ಹೋದರೆ ಎಲುಬು ಸುರಿ ಬೀಳುತ್ತದೆ ಎಂಬ ನಂಬಿಕೆ ಜನರಲ್ಲಿದೆ. ಕೆಡ್ಡಸದ ದಿನ (ನಾಲ್ಕನೇ ದಿನ) ಮೃಗ ಪಕ್ಷಿಗಳಿಗೆ ಜ್ವರ ಬರುತ್ತದೆ. ಎಂಬ ನಂಬಿಕೆಯೊಂದಿಗೆ, ಅಂದು ಸುಲಭವಾಗಿ ಬೇಟೆಯಾಡಬಹುದು ಎಂಬ ಆಶಯವೂ ಜನರಲ್ಲಿ ಮನೆಮಾಡಿದೆ. ಪ್ರತಿ ಮನೆಯಲ್ಲಿ ಮಾಂಸದಡುಗೆ ಮಾಡಬೇಕು. ಮಾಂಸ ಇಲ್ಲದಿದ್ದರೆ ಬದನೆಕಾಯಿ ಮತ್ತು ನುಗ್ಗೆಕಾಯಿಯನ್ನಾದರೂ ಅಡುಗೆ ಮಾಡಿ ಊಟಮಾಡಬೇಕೆಂಬ ನಂಬಿಕೆಯಿದೆ. ಕೊನೆಯ ದಿನ ಮನೆಯ ತುಳಸಿ ಕಟ್ಟೆಯ ಹತ್ತಿರ ಮಡಿ ಬಟ್ಟೆ, ಮಸಿ, ಅರಸಿನ, ಸೀಗೆ, ಬಾಗೆ ಇಟ್ಟು ಭೂಮಿಗೆ ಎಣ್ಣೆ ಹೊಯ್ಯುತ್ತಾರೆ. ಭೂಮಿದೇವಿ ಮುಟ್ಟಾದ ನಾಲ್ಕನೇ ದಿನ ಸ್ನಾನಮಾಡಿ ಬರುತ್ತಾಳೆ. ಅವಳಿಗೋಸ್ಕರ ಇದನ್ನೆಲ್ಲಾ ಕೊಡಬೇಕೆಂಬ ಪದ್ಧತಿ ತುಳುನಾಡಿನಲ್ಲಿದೆ.

ಇಪ್ಪತ್ತು ವರ್ಷಗಳ ಹಿಂದೆ ಜಿಲ್ಲೆಯ ಸುಳ್ಯ ಪುತ್ತೂರು ಪರಿಸರದಲ್ಲಿ 'ಕೆಡ್ಡಸ'ಕ್ಕೆ ಒಂದು ವಾರವಿರುವಾಗಲೇ 'ನಲಿಕೆ'ಯವನೊಬ್ಬ ಡೋಲು ಬಾರಿಸುತ್ತಾ 'ಡೆನ್ನಾನ' ಪಾಡ್ದನ ಹಾಡುತ್ತಾ ಮನೆಮನೆಗೆ ಬಂದು ಕೆಡ್ಡಸ ಹತ್ತಿರ

ಬಂದಿದೆ ಎಂದು ಊರಿಗೆ ಕೆಡ್ಡಸದ ಆಗಮನವನ್ನು ಸಾರಿ ಹೇಳುತ್ತಿದ್ದುದನ್ನು ಕಂಡಿದ್ದೇನೆ. ಪ್ರತಿಯೊಂದು ಮನೆಯವರು ಆತನಿಗೆ ಅಕ್ಕಿ ತೆಂಗಿನಕಾಯಿ ಕೊಟ್ಟು ಪ್ರೀತಿಯಿಂದ ಸ್ವಾಗತಿಸಿ ಬೀಳ್ಕೊಡುತ್ತಿದ್ದರು. ಆ ಪದ್ಧತಿ ಕೊನೆಗೊಂಡಿದೆ. ಒಟ್ಟಾರೆಯಾಗಿ ಕೆಡ್ಡಸ ಒಂದು ಕೃಷಿ ಸಂಬಂಧಿ ಆಚರಣೆಯಾಗಿದೆ. ಭೂಮಿಯನ್ನು ಸ್ತ್ರೀಗೆ ಸಮೀಕರಿಸಿ ಗೌರವದಿಂದ ಕಂಡು ಪೂಜಿಸುವುದೇ ಆಗಿದೆ. ಶ್ರಮಿಕ ಜನವರ್ಗ ಈ ಮೂರು ದಿನಗಳಲ್ಲಿ ಯಾವುದೇ ರೀತಿಯ ಭೂಮಿಯ, ಉಳುಮೆಯ ಕೆಲಸವನ್ನು ಮಾಡದೇ ವಿಶ್ರಾಂತಿ ಪಡೆಯುತ್ತಾರೆ.

**'ಮನೆತುಂಬಿಸುವುದು' ಮತ್ತು 'ಪುದ್ವಾರ್'**

ತುಳುನಾಡಿನಲ್ಲಿ ಪ್ರತಿಯೊಬ್ಬ ರೈತನೂ ಕೂಡ ಮನೆ ತುಂಬಿಸುವ ಮತ್ತು ಪುದ್ವಾರ್ (ಹೊಸ ಅಕ್ಕಿ ಊಟ)ವನ್ನು ಶ್ರದ್ಧೆ ಗೌರವಗಳೊಂದಿಗೆ ಆಚರಿಸುತ್ತಾರೆ. ಮರಾಟಿಗರು ಇದನ್ನು 'ಘರ್ ಬರೋಂಚೆ' (ಮನೆತುಂಬಿಸುವುದು) ಎಂದು ಕರೆದರೆ ತುಳು ಭಾಷೆಯಲ್ಲಿ 'ಕುರಲ್ ಪರ್ಬೊ'ಎಂದು ಕರೆಯುತ್ತಾರೆ.

ಗದ್ದೆಯಲ್ಲಿ ಹೊಸ ಬೆಳೆ ಕಟಾವಿಗೆ ಸಿದ್ಧವಾಗಿರುತ್ತದೆ. ರೈತರಲ್ಲಿ ಹೊಸ ಹುರುಪು ಹುಮ್ಮಸ್ಸು ಉಂಟಾಗುವುದು ಸಹಜ. ಅಂತೆಯೇ ಹೊಸ ಬೆಳೆಯನ್ನು ಪ್ರಥಮವಾಗಿ ಪೂಜಿಸಿ ನಂತರ ಬಳಸುವುದು ಈ ಕದಿರು ಹಬ್ಬದ ಆಶಯ. ಕದಿರು ಹಬ್ಬದ ಮುಖೇನ ನಮ್ಮ ಮನೆ ತುಂಬಿ ತುಳುಕುತ್ತಿರಲಿ ಎಂದು ಹಾರೈಸುತ್ತಾರೆ. ಮನೆ ತುಂಬಿಸುವ ಮುನ್ನಾ ದಿನ ಸಂಜೆ ಗದ್ದೆಯಿಂದ ಭತ್ತದ ತೆನೆಗಳನ್ನು ತಂದು ಮನೆಯ ಹೊರಗಡೆ ಇಟ್ಟಿರುತ್ತಾರೆ. ಗದ್ದೆ ಇಲ್ಲದವರು ಇತರ ಮನೆಯವರ ಹೊಲ ಗದ್ದೆಯಿಂದ ಭತ್ತದ ತೆನೆಗಳನ್ನು ತರುತ್ತಾರೆ. ಭತ್ತದ ತೆನೆಗಳನ್ನು ಕದ್ದು ಮುಚ್ಚಿ ತರಬೇಕೆಂಬ ನಂಬಿಕೆ ಸುಳ್ಯ ಪರಿಸರದ ರೈತರಲ್ಲಿದೆ. ಜೊತೆಗೆ ಇಟ್ಟೋವು, ಮಾವು, ಹಲಸು, ಅತ್ತಿ, ಬಿದಿರು. ಪೊಲಿ ಬಳ್ಳಿ, ದಡ್ಡಲ ಮರದ ನಾರು, ಬಾಳೆ ಎಲೆಗಳನ್ನೆಲ್ಲಾ ಸಂಗ್ರಹಿಸಿಡುತ್ತಾರೆ. ಮನೆ ತುಂಬಿಸುವ ದಿನ ಮನೆಯ ಯಜಮಾನ ಬೆಳಿಗ್ಗೆ ಸ್ನಾನಮಾಡಿ ಮಡಿ ಬಟ್ಟೆಯುಟ್ಟು ಸಂಗ್ರಹಿಸಿದ ಭತ್ತದ ತೆನೆಗಳ ಕಟ್ಟನ್ನು ತುಳಸಿ ಕಟ್ಟೆಯಲ್ಲಿರಿಸುತ್ತಾನೆ. ಅಲ್ಲಿಂದ ಮೂರು ಸುತ್ತು ಪ್ರದಕ್ಷಿಣೆ ಒಂದು ತಲೆಯ ಮೇಲೆ ಭತ್ತದ ತೆನೆಯನ್ನು ಇಟ್ಟುಕೊಂಡು ಮನೆಯ ಹೊಸ್ತಿಲು ದಾಟಿ ಬರುತ್ತಾನೆ. ಹೊಸ್ತಿಲು ದಾಟುವ ಸಮಯದಲ್ಲಿ ಮನೆಯೊಡತಿ ಯಜಮಾನನ ಕಾಲಿಗೆ ನೀರು ಸುರಿಯುತ್ತಾಳೆ. ಅದೇ ವೇಳೆಗೆ ದೇವರ ಕೋಣೆಯಲ್ಲಿ ಮಣೆ ಮೇಲೆ ದೀಪ ಉರಿಸಲಾಗುತ್ತದೆ. ಹಾಗೆಯೇ ತೆಂಗಿನಕಾಯಿ ಎಳನೀರು, ಮುಳ್ಳುಸೌತೆಯನ್ನು ಇಟ್ಟಿರುತ್ತಾರೆ. ಕುಟುಂಬಸ್ಥರೆಲ್ಲರೂ ಸೇರಿರುತ್ತಾರೆ. ಪ್ರತಿಯೊಬ್ಬರು ದೇವರ ಕೋಣೆಯಲ್ಲಿ ಸೇರಿ ಪ್ರಾರ್ಥಿಸಿ ಬೆಳೆ ಹಲುಸಾಗಿ ಬರಲಿ, ಮನೆ ತುಂಬಿ ಬರಲಿ ಎಂದು ದೇವರಲ್ಲಿ ಅರಿಕೆ ಮಾಡಿಕೊಳ್ಳುತ್ತಾರೆ. ಇಟ್ಟೋವು ಎಲೆಯೊಳಗೆ ಮಾವು, ಹಲಸು, ಬಿದಿರು ಎಲೆಗಳನ್ನಿಟ್ಟು ಮಧ್ಯದಲ್ಲಿ ಒಂದೆರಡು ಭತ್ತದ ತೆನೆಗಳನ್ನಿಟ್ಟು ದಡ್ಡಲ ಮರದ ನಾರಿನಿಂದ ಗಂಟು ಹಾಕಿ ಬಿಗಿದು ಮನೆಯ ಎಲ್ಲಾ ಪೀಠೋಪಕರಣಗಳಿಗೆ, ವಾಹನ, ಯಂತ್ರಗಳಿಗೆ, ತೆಂಗು, ಹಲಸು, ಮಾವು, ಅಡಿಕೆ, ಮರಗಳಿಗೆ, ನೊಗ, ನೇಗಿಲು, ಒನಕೆ ಮುಂತಾದ ಸಲಕರಣೆಗಳಿಗೆ ಕಟ್ಟುತ್ತಾರೆ. ಮನೆಯ ದೇವರಕೋಣೆಗೆ ಮತ್ತು ತುಳಸಿ ಗಿಡಕ್ಕೂ ಕಟ್ಟುತ್ತಾರೆ. ಕುಟುಂಬದ ಇತರೆ ಮನೆಯವರೆಲ್ಲರೂ ತಮ್ಮ ತಮ್ಮ ಮನೆಗೆ ಈ ತರಹದ ಭತ್ತದ ತೆನೆಯ ಕಟ್ಟನ್ನು ತೆಗೆದುಕೊಂಡು ಹೋಗಿ ಕಟ್ಟುತ್ತಾರೆ.

ಭತ್ತದ ತೆನೆಗಳಿರುವ ಕಟ್ಟು ಸಮೃದ್ಧಿಯನ್ನು ಸಂಕೇತಿಸುತ್ತದೆ. ಕೃಷಿ-ಬೇಸಾಯಕ್ಕೆ ಸಂಬಂಧಿಸಿದ ಪರಿಕರಗಳೇ ಇಲ್ಲಿ ಪ್ರಧಾನವಾಗಿರುವುದನ್ನು ನಾವು ಗಮನಿಸಬಹುದು.

'ಪುದ್ವಾರ್' (ಹೊಸ ಅಕ್ಕಿ ಊಟ) ದಿನ ಮನೆಯಲ್ಲಿ ಸಂಭ್ರಮ ಸಡಗರ. ತಾವು ಬೆಳೆಸಿದ ಭತ್ತದಿಂದ ಪ್ರಥಮವಾಗಿ ತಾವೇ ಊಟಮಾಡುವ ಸಂದರ್ಭವಿದು. ಅಂದು ಬೆಳಿಗ್ಗೆ ಮನೆಯೆಲ್ಲಾ ಸೆಗಣಿ ಸಾರಿಸಿ ಶುದ್ಧೀಕರಿಸುತ್ತಾರೆ. ಸಾಮಾನ್ಯವಾಗಿ ಜಿಲ್ಲೆಯ ಬಹುತೇಕ ಮನೆಗಳಲ್ಲಿ ಮುಖ್ಯವಾಗಿ ಹೊಲ ಗದ್ದೆ ಇರುವವರೂ ಈ ಹೊಸ ಅಕ್ಕಿ ಊಟವನ್ನು ಕಡ್ಡಾಯವಾಗಿ ಸಾಂಪ್ರದಾಯಿಕವಾಗಿ ಮಾಡುತ್ತಾರೆ. ಅಂದು ಬಹು ಸಂಖ್ಯೆಯ ತರಕಾರಿ ಪಲ್ಯಗಳಿರಬೇಕೆಂದು ಹೇಳುತ್ತಾರೆ.

ಮಧ್ಯಾಹ್ನದ ಸಮಯ ಸುಮಾರು ೧೧-೧೨ ಗಂಟೆಯ ಒಳಗಡೆ ದೇವರಿಗೆ 'ಸುತ್ಯೆ' ಇಟ್ಟು ಎಲ್ಲಾ ತರಕಾರಿಗಳನ್ನು ಭತ್ತವನ್ನು ದೇವರ ಕೋಣೆಯಲ್ಲಿ ದೀಪ ಉರಿಸಿ ಇಡುತ್ತಾರೆ. ಅದೇ ಸಮಯಕ್ಕೆ ಅಡುಗೆ ಮನೆಯಲ್ಲಿ ಏಳು ಅಥವಾ ಒಂಭತ್ತು ಬಗೆಯ ಪಲ್ಯ-ಸಾಂಬಾರುಗಳು ತಯಾರಾಗಿರುತ್ತದೆ. ಕುಟುಂಬದ 'ಪೂಜಾರಿ'ಯು ದೇವರ ನೈವೇದ್ಯ ತಯಾರಿಸುತ್ತಾನೆ. ಹೊಸ ಅಕ್ಕಿಯಿಂದ ಉಪ್ಪು ಬೆರೆಸದೆ ಇರುವ ನೈವೇದ್ಯವನ್ನು ಮೊದಲು ದೇವರಿಗೆ ಅರ್ಪಿಸಲಾಗುತ್ತದೆ. ಕುಟುಂಬದ ಸದಸ್ಯರೆಲ್ಲರೂ ದೇವರಿಗೆ ಅಕ್ಕಿ ಕಾಳು ಹಾಕಿ ಪ್ರಾರ್ಥನೆ ಮಾಡುತ್ತಾರೆ. ಪ್ರತಿಯೊಬ್ಬರೂ ಊಟಕ್ಕೆ ಕುಳಿತುಕೊಳ್ಳುತ್ತಾರೆ. ವಿಶೇಷವಾಗಿ ಹೊಸ ಅಕ್ಕಿ ಅನ್ನದ ಜೊತೆಗೆ ಪಾಯಸ, ಐದು, ಏಳು, ಅಥವಾ ಒಂಭತ್ತು ಹೀಗೆ ಬೆಸ ಸಂಖ್ಯೆಯ ಪಲ್ಯಗಳನ್ನು ಮಾಡುವುದು ಪದ್ಧತಿಯಾಗಿದೆ. ಕೆಸು ಗಿಡದ ದಂಡಿನ ಪಲ್ಯ ಕಡ್ಡಾಯವಾಗಿರಬೇಕು. ಭೋಜನದಲ್ಲಿ ಮೊದಲು ದೇವರ ನೈವೇದ್ಯವನ್ನು ಕುಟುಂಬದ ಯಜಮಾನನ ಮಾತಿನಂತೆ ಎಲ್ಲರೂ ಸ್ವೀಕರಿಸಿ ನಂತರ ಊಟ ಮಾಡುತ್ತಾರೆ. ಅಂದು ಯಾವುದೇ ರೀತಿಯಲ್ಲಿ ಮಾಂಸದ ಸೇವನೆಗೆ ಆಸ್ಪದವಿಲ್ಲ. ತಮ್ಮ ಮನೆಯಲ್ಲಿ ಹೊಸ ಅಕ್ಕಿ ಊಟ ನೈವೇದ್ಯ ಆಗದೇ ಇತರೆ ಬೇರೆ ಮನೆಯಲ್ಲಿ ನೈವೇದ್ಯವನ್ನು ಸ್ವೀಕರಿಸುವುದಿಲ್ಲ. ಊಟ ಮಾತ್ರ ಮಾಡುವ ಕ್ರಮವಿರುವುದು ಕಂಡು ಬರುತ್ತಿದೆ. 'ಪುದ್ವಾರ್' ದಿನದಂದು ಮನೆಯಿಂದ ಹೊರಗೆ ದವಸ ಧಾನ್ಯ, ಒಡವೆಗಳನ್ನು ಯಾವುದನ್ನು ಕೊಡುವುದಿಲ್ಲ. ಕೊಟ್ಟರೆ ತುಂಬಿದ ಮನೆಯಿಂದ ಸಂಪತ್ತು ಹೊರಹೋಗುತ್ತದೆ ಎಂದು ಅನೇಕ ಮರಾಟಿಗರು ನಂಬಿಕೆಯನ್ನಿರಿಸಿಕೊಂಡಿದ್ದಾರೆ.

**ದೀಪಾವಳಿ**

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಾರ್ವತ್ರಿಕವಾಗಿ ಹಬ್ಬವೆಂದರೆ 'ದೀಪಾವಳಿ'ಯೇ ಆಗಿದೆ. ತುಳು ಭಾಷೆಯಲ್ಲಿ 'ಪರ್ಬೊ' ಎಂದು ಕರೆದು ದೀಪಾವಳಿಯೇ ಅಲ್ಲಿ ಮುಖ್ಯವಾಗುತ್ತದೆ. ಮರಾಟಿಗರೆಲ್ಲರೂ ಇತರೆ ಹಬ್ಬಗಳಂತೆ ಈ ಹಬ್ಬಕ್ಕೂ ವಿಶೇಷವಾದ ಮನ್ನಣೆ ನೀಡುತ್ತಾರೆ. ಮೂರು ದಿನಗಳ ಕಾಲ ಭಕ್ತಿ ಶ್ರದ್ಧೆಯಿಂದ ಆಚರಿಸುತ್ತಾರೆ. ಮಕ್ಕಳೆಲ್ಲರೂ ತಿಂಗಳ ಮೊದಲೇ ಪಟಾಕಿ ಸಿಡಿಸಲು ಪೂರ್ವತಯಾರಿ ನಡೆಸುತ್ತಿರುತ್ತಾರೆ.

'ಪರ್ಬೊ' ಎಂದು ಕರೆಯಲ್ಪಡುವ ಈ ದೀಪಾರಾಧನೆ ಹೆಸರಿಗೆ ಅನ್ವರ್ಥಕ ನಾಮದಂತೆ ದೀಪಗಳನ್ನು ಬೆಳಗಿಸಿ ತಮ್ಮ ದೈವ-ದೇವರುಗಳನ್ನು ತೃಪ್ತಿಪಡಿಸಿ ತಾವೂ ಧನ್ಯರಾಗುವ ಪರಿ ವಿಶಿಷ್ಟವಾದುದು. ಇತರೆ ಎಲ್ಲಾ ಹಬ್ಬ-

ಹರಿದಿನಗಳಲ್ಲಿ ದೀಪವಿಟ್ಟು ಆಚರಿಸಿದರೂ, ದೀಪಾವಳಿಯ ದೀಪಕ್ಕೆ ವಿಶೇಷ ಮಹತ್ವ, ಮೆರಗು ಇರುವುದು ಆಚರಣೆಯ ಮೂಲಕ ವ್ಯಕ್ತವಾಗುವುದು. ದೀಪಾವಳಿ ಅಮವಾಸ್ಯೆ ಮರಾಟಿಗರ ಪಾಲಿನ ವಿಶೇಷ ಅಮವಾಸ್ಯೆಗಳಲ್ಲಿ ಒಂದು. ಹಬ್ಬಕ್ಕೆ ವಾರವಿದೆ ಎನ್ನುವಾಗಲೇ ಹಬ್ಬದ ತಯಾರಿ ಆರಂಭವಾಗುತ್ತದೆ. ಮನೆ, ಪರಿಸರ ಸ್ವಚ್ಛಗೊಳಿಸುವಿಕೆಯಿಂದ ಹಿಡಿದು ಎತ್ತು, ದನ ಕರುಗಳನ್ನು ಚೆನ್ನಾಗಿ ತೊಳೆದು ಸ್ವಚ್ಛವಾದ ಹುಲ್ಲು-ಆಹಾರ ಹಾಕುವುದೇ ಹಬ್ಬದ ಒಂದು ಭಾಗ. ಮನೆಯಿಂದ ದೂರದೂರಿಗೆ ಹೋದವರು, ನೆಂಟರು, ಕುಟುಂಬಸ್ಥರು ಯಾವ ಹಬ್ಬಕ್ಕೆ ಬರದಿದ್ದರೂ ದೀಪಾವಳಿಗೆ ಬಂದೇ ಬರುವರು.

ಮನೆಯ ಯಜಮಾನ ದೀಪಾವಳಿಯ ಅಮವಾಸ್ಯೆ ಊಟ ಮಾಡುವುದರಿಂದ ಹಬ್ಬ ಆರಂಭವನ್ನು ಪಡೆಯುತ್ತದೆ. ಅಂದು ಸಂಜೆ ಹಾಲೆ ಮರದ ತುದಿಯಲ್ಲಿ ಮೂರು ಕವಲುಗಳಿರುವ ಎರಡು ಮರಗಳನ್ನು (ಕೊಂಬೆ) ಮನೆಯ ಅಂಗಳದಲ್ಲಿ ತುಳಸಿಕಟ್ಟೆಯ ಬಲಭಾಗದಲ್ಲಿ ನೆಡುತ್ತಾರೆ. ಇದನ್ನು 'ಬಲೀಂದ್ರ ಮರ' ಎಂದೂ ಕರೆಯುತ್ತಾರೆ. ಅನೇಕ ತರಹದ ಹೂವುಗಳಿಂದ ಅಲಂಕರಿಸುತ್ತಾರೆ. ಮೇಲ್ಗಡೆ ಕೊಡೆಯನ್ನು ಬಿಡಿಸಿ ಕಟ್ಟುತ್ತಾರೆ. ಚೆಂಡು ಹೂವು, ಪಾದೆಹೂವು ಮತ್ತು ಅಂಬಳ ಕಾಯಿಯ ಸರ ಮುಖ್ಯವಾಗಿರುತ್ತದೆ. ಹೀಗೆ ಎಲ್ಲಾ ರೀತಿಯಲ್ಲಿ ಬಲೀಂದ್ರ ಮರವನ್ನು ಶೃಂಗರಿಸಿ ರಾತ್ರಿ ಸಮಯದಲ್ಲಿ ಮರದ ಮೇಲಿಂದ ಕೆಳಗೆ ಎಲ್ಲಾ ಕಡೆ ದೀಪ ಉರಿಸುತ್ತಾರೆ. ಮರದ ಬುಡದಲ್ಲಿ ಒಂದಿಷ್ಟು ಬೆಳ್ತಿಗೆ ಅಕ್ಕಿ ತೆಂಗಿನಕಾಯಿಯನ್ನು ಇಟ್ಟಿರುತ್ತಾರೆ. ಮಾರನೇ ದಿನ ಅನೇಕ ಮರಾಟಿಗರು (ನಡು ದೀಪಾವಳಿ) ತಮ್ಮ ದೈವ-ದೇವರುಗಳಿಗೆ (ಪಂಜುರ್ಲಿ, ಅಣ್ಣಪ್ಪ ಪಂಜುರ್ಲಿ) ತಂಬಿಲ ಮಾಡುವ ಸಂಪ್ರದಾಯವೂ ಇದೆ.ದೈವಗಳಿಗೆ ಎಡೆಹಾಕಿ ಪ್ರಾರ್ಥಿಸಿ ಕೋಳಿಗಳನ್ನು ಬಲಿಕೊಡುತ್ತಾರೆ. ಮಧ್ಯಾಹ್ನದ ಭೋಜನ ನಂತರ ಎತ್ತು-ದನ-ಕರುಗಳಿಗೆ ಗದ್ದೆಯಲ್ಲಿ ಕಟಾವು ಮಾಡಿದ ನಂತರ ಉಳಿದಿರುವ ಭಾಗ (ಒಡ್ಡು)ವನ್ನು ಕಟ್ಟುಮಾಡಿ ಹಸಿರು ಜೊತೆ ಹಾಕುತ್ತಾರೆ. ಈ ಒಡ್ಡನ್ನು ದೀಪಾವಳಿಯ ಸಂದರ್ಭದಲ್ಲಿ ಮಾತ್ರ ತಿನ್ನಲು ಹಾಕುವುದನ್ನು ಕಂಡಿದ್ದೇನೆ. ಇತರೆ ಯಾವುದೇ ಸಂದರ್ಭದಲ್ಲಿ ತಂದು ಹಾಕುವುದಿಲ್ಲ.

ರಾತ್ರಿ ಎಂಟರ ಸಮಯಕ್ಕೆ ಕುಟುಂಬದ ಸದಸ್ಯರೆಲ್ಲರೂ ಮತ್ತೆ ಹಾಜರಾಗುತ್ತಾರೆ. ಎಲ್ಲರೂ ಸ್ನಾನ ಮುಗಿಸಿಕೊಂಡು 'ಬಲೀಂದ್ರ ಕೂಗುಲು' ತಯಾರಾಗುತ್ತಾರೆ. ತುಳುವಿನಲ್ಲಿ 'ಮರ ಆಳುನೆ' ಎಂದು ಕರೆಯುತ್ತಾರೆ. ಮನೆಯ ಯಜಮಾನ ಬಲೀಂದ್ರನನ್ನು ಹಾಡಿನ ಮೂಲಕ ಕರೆಯುತ್ತಾನೆ.

''ಆಟಿದ ಪುಣ್ಣೆಮೆ ಏಳರೆ ಸಂಕ್ರಾಂತಿ ದೀಪಾವಳಿ ಕೊಡಿಪರ್ಬ

ಆ ಊರ್ದ ಪೊಲಿ ಕೊಣಲ. ಈ ಊರ್ದ ಬಲಿ ಕೊಂಡೊಲ

ನಿನ ರಾಜ್ಯ ವೈಭವೊನು ಸೂವರ ಬಲ ಬಲಿಯೇಂದ್ರ ಹರಿಯೋ ಹರಿ''

ಎಂದು ಹೇಳಿದಾಗ ಇತರೆಲ್ಲರೂ ಅಕ್ಕಿ ಕಾಳನ್ನು ಬಲೀಂದ್ರ ಮರಕ್ಕೆ ಎಸೆದು ಕೂ.............ಎನ್ನುತ್ತಾರೆ. ಹೀಗೆ ಮೂರು ಸಾರಿ ಹೇಳಿ ಕೂ.....ಹೇಳುತ್ತಾರೆ. ಅಕ್ಕಿ ಕಾಳನ್ನು ಶೃಂಗರಿಸಿದ ಬಲೀಂದ್ರ ಮರಕ್ಕೆ ಎಸೆಯುತ್ತಾರೆ. ಎಲ್ಲರೂ ಸಂಭ್ರಮದಿಂದ ವಿವಿಧ ರೀತಿಯ ಪಟಾಕಿಗಳನ್ನು ಸಿಡಿಸುವ ಕಾರ್ಯಕ್ಕೆ ಮುಂದಾಗುತ್ತಾರೆ. ಮಹಿಳೆಯರು ಮಕ್ಕಳು ನೋಡಿ ಆನಂದಿಸಿದರೆ ಗಂಡು ಮಕ್ಕಳು, ಗಂಡಸರು ಪಟಾಕಿಗಳನ್ನು ಸಿಡಿಸುವ ಸಂಭ್ರಮದಲ್ಲಿರುತ್ತಾರೆ.

**ಗೋಪೂಜೆ**

ಮೊರದಲ್ಲಿ ಭತ್ತ, ಕುಂಕುಮ, ಆರತಿ, ಬಾಳೆಹಣ್ಣು, ತೆಂಗಿನೆಣ್ಣೆ ಅವಲಕ್ಕಿ ಜೊತೆಗೆ ತಾವು ತಯಾರಿಸಿದ ಇಡ್ಲಿ/ದೋಸೆಗಳನ್ನು ತೆಗೆದು ಹಟ್ಟಿಗೆ ಹೋಗುತ್ತಾರೆ. ಹಟ್ಟಿಯ ಬಾಗಿಲಿಗೆ ಹಾಲೆಮರದ ಮೂರು ಕವಲುಗಳಿರುವ ಚಿಕ್ಕ ಕೊಂಬೆಯನ್ನು ನೆಟ್ಟಿರುತ್ತಾರೆ. ಅದರಲ್ಲಿ ದೀಪವಿಟ್ಟಿರುತ್ತಾರೆ. ಹೀಗೆ ಗದ್ದೆಗೂ, ಅಡಿಕೆ ತೋಟಕ್ಕೂ ನೆಡುವ ಸಂಪ್ರದಾಯವಿದೆ. ಹಟ್ಟಿಯೊಳಗಡೆ ಹೋಗಿ ಪ್ರತಿಯೊಂದು ದನ-ಕರು-ಎತ್ತುಗಳಿಗೆ ಮನೆಯ ಹೆಂಗಸರು ಆರತಿ ಎತ್ತುತ್ತಾರೆ. ಹಿರಿಯ ಹೆಂಗಸರು,

"ಕಲ್ಲಾಡಿತ ಪಂತಿ ಮಗ, ಮಲ್ಲಾಡಿತ ಪೇರ್ ಮಗ,

ತುಡಾರ್ ಮಗ ತುಡಾರ್

ಬಾಳ್ ಮಗ ಬಾಳ್"

(ಕಲ್ಲಾಡಿಯ ಹಲ್ಲು ಮಗ, ಮಲ್ಲಾಡಿಯ ಹಾಲು ಮಗ, ದೀಪ ಮಗ ದೀಪ, ಬಾಳಿರಿ ಮಗ ಬಾಳಿರಿ) ಎಂದು ತುಳು ಸಂಧಿಯನ್ನು ಹೇಳುವ ಸಂಪ್ರದಾಯ ಇಂದಿಗೂ ಕಂಡುಬರುತ್ತಿದೆ.

ಎಲ್ಲಾ ಜಾನುವಾರುಗಳ ಹಣೆಗೆ ಕುಂಕುಮವಿಟ್ಟು, ಆರತಿ ಬೆಳಗಿಸಿ, ಬಾಳೆಹಣ್ಣು, ಅವಲಕ್ಕಿ, ಭತ್ತ ತಿಂಡಿಗಳನ್ನು ತಿನ್ನಿಸುತ್ತಾರೆ. ತೆಂಗಿನೆಣ್ಣೆಯನ್ನು ಅವುಗಳ ತಲೆಗೆ ಸವರಿ, ಚೆನ್ನಾಗಿ ತಿಂದು ಚೆನ್ನಾಗಿ ಬಾಳಿರಿ ಎಂದು ಹಾರೈಸುತ್ತಾರೆ. ಹಟ್ಟಿ ಸುತ್ತಮುತ್ತ ದೀಪಗಳನ್ನಿರಿಸಿ ಮಕ್ಕಳು ಸಂಭ್ರಮಿಸುತ್ತಾರೆ. ಭೋಜನದೊಂದಿಗೆ ಎರಡನೇ ದಿನದ ಕಾರ್ಯಕ್ರಮ ಮುಗಿಯುತ್ತದೆ.

ಮೂರನೇ ದಿನ ಬೆಳಿಗ್ಗೆ ಚೆಂಡು ಹೂ, ತುಳಸಿ ದಳಗಳ ಜೊತೆಗೆ ಇನ್ನಿತರ ಹೂಗಳ ಹಾರಗಳನ್ನು ಕಟ್ಟಿ ಪ್ರತಿ ದನ-ಕರು-ಎತ್ತುಗಳ ಕೊರಳಿಗೆ ಕಟ್ಟುತ್ತಾರೆ. ಅಂದು ರಾತ್ರಿಯೂ ಕೂಡ ದೀಪ ಬೆಳಗಿಸಲಾಗುತ್ತದೆ. ಬಲೀಂದ್ರ ಮರದ ಬುಡದಲ್ಲಿ ಒಂದು ಮಣೆಯಲ್ಲಿ ಅವಲಕ್ಕಿ, ಎಳನೀರನ್ನು ಸಂಪ್ರದಾಯದಂತೆ ಇಡುತ್ತಾರೆ. ನಾಲ್ಕನೇ ದಿನ ಬೆಳಗು ಮುಂಜಾನೆ ಮನೆಯ ಯಜಮಾನ ಬಲೀಂದ್ರ ಮರವನ್ನು ಕಿತ್ತು ಎಲ್ಲಾದರೂ ಹರಿಯುವ ನೀರಿನಲ್ಲಿ ಇಟ್ಟು ಬರುತ್ತಾರೆ. ಅಲ್ಲಿಗೆ ದೀಪಾವಳಿಯ ಸಂಭ್ರಮ ಕೊನೆಗೊಳ್ಳುತ್ತವೆ.

ಸೂತಕವಿದ್ದವರು ತಮ್ಮ ಮನೆಯಲ್ಲಿ, ಕುಟುಂಬದಲ್ಲಿ ಬಲೀಂದ್ರ ಮರ ಹಾಕಲು ನಿಷೇಧವಿದೆ. ಕುಟುಂಬದ ಮುಖ್ಯ ಮನೆಯಲ್ಲಿ ಮಾತ್ರ ಬಲೀಂದ್ರ ಮರ ಹಾಕಬಹುದಾಗಿದೆ. ಮರ ಹಾಕಲು ಬಲೀಂದ್ರ (ಹಾಲೆ ಮರ) ಮರದ ಕೊಂಬೆಯೇ ಬೇಕಾಗುವುದು ಇತರೆ ಯಾವುದೇ ಮರವನ್ನು ಉಪಯೋಗಿಸುವಂತಿಲ್ಲ. ಹಾಲು ಒಸರುವ ಹಾಲೆ ಮರ ಸಮೃದ್ಧಿಯನ್ನು ಸಂಕೇತಿಸುತ್ತದೆ. ಆ ಮೂಲಕ ಸಮೃದ್ಧಿ ಸುಖ ಶಾಂತಿ ಲಭಿಸಲಿ ಎಂದು ಜನಪದರ ಆಶಯವಾಗಿದೆ. ತುಳುನಾಡಿನಲ್ಲಿ "ಪರ್ಬ ಗದ್ದಲ ಬಜಿಲ್ ಮುಕ್ಕೊಂಡೆ" (ದೀಪಾವಳಿ ಗದ್ದಲದಲ್ಲಿ ಅವಲಕ್ಕಿಯನ್ನು ಮುಕ್ಕಿ ತಿಂದೆ) ಎಂಬ ಗಾದೆಯೇ ಈ ಹಬ್ಬದ ಜನಪ್ರಿಯತೆಯನ್ನು ಸಾರುತ್ತದೆ.



ಗೋಪೂಜೆ



ಪಂಜುರ್ಲಿ ಭೂತಕ್ಕೆ ಬಲಿ

**ಮಹಾನವಮಿ**

ಮಾರ್ಣೆಮಿ (ಮಹಾನವಮಿ) ನವರಾತ್ರಿ ಪೂಜೆಯನ್ನು ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ಮರಾಟಿಗರು ಆಚರಿಸುತ್ತಾರೆ. ಮರಾಟಿಗರು 'ಅಂಗಾರೆ ಪೂಜೆ'ಯ ರೀತಿಯಲ್ಲಿಯೇ ನವರಾತ್ರಿ ಪೂಜೆಯನ್ನು ಆಚರಿಸುತ್ತಾರೆ. ನವರಾತ್ರಿಯ ಏಳನೇ ಅಥವಾ ಒಂಬತ್ತನೇ ಪೂಜೆಯನ್ನು ನಡೆಸುತ್ತಾರೆ. ದೇವಕ್ರಿಯೆಯಲ್ಲಿಯೇ ಶಾರದಾಂಬೆಯನ್ನು ಪೂಜಿಸುವ ಈ ಆಚರಣೆಯು ಮರಾಟಿಗರಿಗೂ ಶೃಂಗೇರಿ ದೇವಾಲಯಕ್ಕೂ ಇರುವ ಸಂಬಂಧವನ್ನು ಸಾರುತ್ತದೆ.

ಇನ್ನಿತರ ಹಬ್ಬ ಹರಿದಿನಗಳಾದ ಚೌತಿ, ಅಷ್ಟಮಿ, ನಾಗರ ಪಂಚಮಿ, ಸೋಣ ಸಂಕ್ರಾಂತಿ (ಶ್ರಾವಣ ಸಂಕ್ರಮಣ) ಆಟಿದ ಅಮವಾಸ್ಯೆ (ಆಷಾಡ ಅಮವಾಸ್ಯೆ)ಗಳನ್ನೆಲ್ಲಾ ಮರಾಟಿಗರು ತಪ್ಪದೇ ಆಚರಿಸಿಕೊಂಡು ಬರುತ್ತಿದ್ದಾರೆ. ಸಂಪ್ರದಾಯಿಕ ಹಬ್ಬಗಳನ್ನು ಇತರೆ ಸಮುದಾಯಗಳೊಂದಿಗೆ ಒಂದಾಗಿ ಆಚರಿಸುತ್ತಿರುವುದು ಶ್ಲಾಘನೀಯ. ಜಿಲ್ಲೆಯ ಪ್ರತಿಯೊಂದು ಗ್ರಾಮ ಗ್ರಾಮಗಳಲ್ಲಿಯ ದೇವಾಲಯಗಳ ಉತ್ಸವಾದಿಗಳಲ್ಲಿ ಮರಾಟಿಗರೆಲ್ಲರೂ ಅತೀ ಭಕ್ತಿ ಶ್ರದ್ಧೆಯಿಂದ ಪಾಲ್ಗೊಳ್ಳುತ್ತಾರೆ. ಜಿಲ್ಲೆಯಲ್ಲಿ ಮರಾಟಿಗರು ಯಾವುದೇ ರೀತಿಯ ಪಾರಂಪರಿಕ ವೃತ್ತಿಯಲ್ಲಿ ಗುರುತಿಸಿಕೊಂಡವರಲ್ಲ. ಹಾಗಾಗಿ ಯಾವುದೇ ದೇವಾಲಯಗಳಲ್ಲಿ ಇವರನ್ನು ನಿರ್ದಿಷ್ಟ ಕೆಲಸಗಾರರು ಎಂದು ಸಂಪ್ರದಾಯಿಕವಾಗಿ ನೇಮಕವಾಗಿಲ್ಲ. ಬೆಳವಣಿಗೆಯ ಹಂತಗಳಲ್ಲಿ ಕೆಲವೊಂದು ದೈವ-ದೇವಾಲಯಗಳ ಆಡಳಿತ ಮಂಡಳಿಗಳಲ್ಲಿ ಮರಾಟಿಗರು ಸೇವೆ ಸಲ್ಲಿಸುತ್ತಿದ್ದಾರೆ. ಡಾ.ಚಂದ್ರಶೇಖರ ದಾಮ್ಲೆ ಅವರು ''ಜಾತ್ರೆಗಳ ಒಂದು ಜಾನಪದೀಯ ಅಧ್ಯಯನ'' ದಲ್ಲಿ ಸುಳ್ಯ ಶ್ರೀ ಚೆನ್ನಕೇಶವ ದೇವಾಲಯದ ಜಾತ್ರೆಯ ಒಟ್ಟು ಕೆಲಸಗಳ ಹಂಚಿಕೆಯನ್ನು ವಿವರಿಸುತ್ತಾ ' ನ್ಯಾಕರು (ಬುಡಕಟ್ಟು ಜನಾಂಗ) ರಥಕ್ಕೆ ಬೇಕಾದ ಬಿದಿರು ಬೆತ್ತ ಇತ್ಯಾದಿಗಳನ್ನು ಒದಗಿಸುತ್ತಿದ್ದಾರೆ.' ಎಂದು ತಿಳಿಸಿದ್ದಾರೆ. ಆದರೆ ಮರಾಟಿ ನಾಯ್ಕರಿಗೆ ಇದು ಪರಂಪರಾಗತ ಕೆಲಸವಲ್ಲ. ಇಡೀ ಜಿಲ್ಲೆಯಲ್ಲಿ ಎಲ್ಲೂ ನಿರ್ದಿಷ್ಟಪಡಿಸಿದ ಈ ಕೆಲಸ ಸುಳ್ಯದಲ್ಲಿ ಮಾತ್ರ ಮಾಡಲು ಅಸಾಧ್ಯ- ಸುಳ್ಯದ ಅನೇಕ ವಕ್ತೃಗಳು ಕೂಡ 'ಪರಂಪರಾಗತ ಕೆಲಸವಿಲ್ಲ' ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಕೇರಳ ರಾಜ್ಯದ ಕಾಸರಗೋಡಿನ ಅಡೂರು ಶ್ರೀ ಪಂಚಲಿಂಗೇಶ್ವರ ದೇವಾಲಯದ ಧ್ವಜಾರೋಹಣ ಸಂದರ್ಭದಲ್ಲಿ ಮರಾಟಿಗರು ಉಪಸ್ಥಿತರಿರಬೇಕು ಎಂಬುದನ್ನು ವಕ್ತೃಮಾಹಿತಿಯಿಂದ ತಿಳಿದುಕೊಳ್ಳಲಾಗಿದೆ.

**ಮುಡಿಪು ಸೇವೆ**

ದಕ್ಷಿಣ ಕನ್ನಡ ಜಿಲ್ಲೆಯ ಮರಾಟಿಗರೆಲ್ಲರ ಮನೆಯಲ್ಲಿಯೂ 'ಮುಡಿಪು ಕಟ್ಟು' ಇದ್ದೇ ಇದೆ. ಕುಟುಂಬದ ಮೂಲ ಮನೆಯಲ್ಲಿ ಮುಡಿಪು ಇರುತ್ತದೆ. ಮರಾಟಿಗರೆಲ್ಲರೂ ತಿರುಪತಿ ಶ್ರೀವೆಂಕಟರಮಣ ದೇವರನ್ನು ಮನೆ ದೇವರೆಂದು ಪೂಜಿಸುತ್ತಾರೆ. ಪ್ರತಿ ವರ್ಷ ನಿಗದಿತ ದಿನ ಈ 'ಮುಡಿಪು ಸೇವೆ'ಯನ್ನು ನೆರವೇರಿಸುತ್ತಾರೆ. ಅನೇಕ ಮನೆಯವರು ಮನೆ ತುಂಬಿಸುವ ದಿನದಂದು ಈ ಕಾರ್ಯಕ್ರಮ ಇಟ್ಟುಕೊಂಡಿರುವುದೂ ಕಂಡುಬರುತ್ತದೆ.

ಒಂದು ವಾರಕ್ಕಿಂತ ಮೊದಲು ಗೊನೆ ಕಡಿಯಲಾಗುತ್ತದೆ. ನಿಗದಿತ ದಿನ ಎಲ್ಲರೂ ನಿತ್ಯ ಕರ್ಮ, ಸ್ನಾನಾದಿಗಳನ್ನು ಮುಗಿಸಿದ ನಂತರ ತಿರುಪತಿ ದೇವರ ಹೆಸರಿನಲ್ಲಿ ಕಟ್ಟಿಟ್ಟಿರುವ ಹುಂಡಿಗೆ ಹಣ ಹಾಕುತ್ತಾರೆ. ಸಾಮಾನ್ಯವಾಗಿ ನಾಣ್ಯಗಳನ್ನು ಕೂಡಿಡುವುದನ್ನು ಇಲ್ಲಿ ಗಮನಿಸಬೇಕು. ಮನೆಯ, ಕುಟುಂಬದ ಪ್ರತಿಯೊಬ್ಬರೂ ಕೂಡ ಹುಂಡಿಗೆ

ಒಂದು ಎರಡು ಅಥವಾ ಐದು ರೂಗಳ ನಾಣ್ಯಗಳನ್ನು ಹಾಕುತ್ತಾರೆ. ಕಾಳು ಮೆಣಸಿನ ಪಾನಕ ಕುಡಿಯಬೇಕೆಂಬ ನಂಬಿಕೆ ಇದೆ. ಜೊತೆಗೆ ಕದಳಿ ಬಾಳೆಹಣ್ಣಿಗೆ ಬೆಲ್ಲ ಬೆರೆಸಿ ಪ್ರಸಾದದ ರೂಪದಲ್ಲಿ ಸ್ವೀಕರಿಸುತ್ತಾರೆ. ಮನೆಯ ಯಜಮಾನ ಹುಂಡಿಯನ್ನು ಭದ್ರಪಡಿಸಿ ದೇವರ ಕೋಣೆಯಲ್ಲಿ ಅಥವಾ ಅಟ್ಟದಲ್ಲಿ ಭದ್ರವಾಗಿ ಕಟ್ಟಿಡುತ್ತಾನೆ. ಹುಂಡಿಗೆ ಕಾಳು ಮೆಣಸು ಕೂಡ ಹಾಕುವುದು ಸಂಪ್ರದಾಯವಾಗಿದೆ. ತಿರುಪತಿಗೆ ತೀರ್ಥ ಯಾತ್ರೆಗೆ ಹೋಗುವ ಸಮಯದಲ್ಲಿ ಹಣವಿಲ್ಲದಿದ್ದರೆ ಹುಂಡಿಯ ಹಣವನ್ನು ಬಳಸಬಹುದು. ಆದರೆ ಇತರೆ ಯಾವುದೇ ರೀತಿಯ ಕೆಲಸ ಕಾರ್ಯಗಳಿಗೆ ಹುಂಡಿಯ ಹಣ ಬಳಸಲು ನಿಷೇಧವಿದೆ. ಒಂದು ವೇಳೆ ಬಳಸಿಕೊಂಡರೆ ಕುಟುಂಬಕ್ಕೆ ಕೆಟ್ಟದಾಗುತ್ತದೆ. ಎಂದು ನಂಬುತ್ತಾರೆ. ಇಂತಹ ನಂಬಿಕೆ ಸಂಪ್ರದಾಯಗಳು ಜನ ಸಾಮಾನ್ಯರನ್ನು ಮಾನಸಿಕವಾಗಿ ಸದೃಢರನ್ನಾಗಿ ಮಾಡುತ್ತದೆ. ಸಂಪ್ರದಾಯ ಆಚರಣೆಗಳ ಮೂಲಕ ಮನಸ್ಸಿಗೆ ಸಂತೋಷ ನೆಮ್ಮದಿ ಉಂಟಾಗುತ್ತದೆ. ಆ ಮೂಲಕ ಎಂತಹ ದುಗುಡ ದುಮ್ಮಾನಗಳಿದ್ದರೂ ದೇವರನ್ನು ನೆನೆಸಿಕೊಂಡು ಮೌನವಾಗುತ್ತಾರೆ. ಮರೆತುಬಿಡುತ್ತಾರೆ. ಹಾಗಾಗಿಯೇ ಜನಪದರ ನಂಬಿಕೆ ಸಂಪ್ರದಾಯಗಳು ಮನೋಚಿಕಿತ್ಸಕ ಔಷಧಿಗಳಿದ್ದಂತೆಯೇ.

**೪.೬ ದೈವಾರಾಧನೆ ಮತ್ತು ಮರಾಟಿಗರು**

ತುಳುನಾಡು ಇಡೀ ರಾಜ್ಯ, ದೇಶದಲ್ಲಿಯೇ ನಾಗಾರಾಧನೆ ಮತ್ತು ದೈವಾರಾಧನೆ ಹೆಸರುವಾಸಿಯಾದದ್ದು. ನಾಗಾರಾಧನೆ ಮತ್ತು ದೈವಾರಾಧನೆ, ತುಳುವರ ಜೀವನದಲ್ಲಿ ಅಂತರ್ಗತವಾಗಿರುವಂಥದ್ದು. ದೈವಾರಾಧನೆಯನ್ನು ಭೂತಾರಾಧನೆ ಎಂದೂ ಕರೆಯುತ್ತಾರೆ. ದೇಶ-ವಿದೇಶಗಳ ಸಂಶೋಧಕರು ದಕ್ಷಿಣ ಕನ್ನಡ ಜಿಲ್ಲೆಯ ಈ ಆರಾಧನಾ ಸಂಪ್ರದಾಯಕ್ಕೆ ಮಾರುಹೋಗಿದ್ದಾರೆ. ಮತ್ತು ಸಂಶೋಧನೆಗೆ ಒಳಪಡಿಸಿದ್ದಾರೆ. ನಾಗಾರಾಧನೆ ಮತ್ತು ದೈವಾರಾಧನೆಯನ್ನು ಮಾಡದೇ ಇರುವ ಮನೆಯೇ ಇಲ್ಲವೆಂದು ಹೇಳಬಹುದು. ಪುರಾತನ ಕಾಲದಿಂದಲೂ ಬಂದಂಥ ಈ ನಂಬಿಕೆಗಳು ಇಂದೂ ಮುಂದುವರಿಯುತ್ತಲೇ ಹೋಗುತ್ತಿವೆ. ಪ್ರತಿ ವರ್ಷ ಬಹುತೇಕ ಎಲ್ಲಾ ಸಮಯದಲ್ಲೂ ಒಂದಲ್ಲ ಒಂದು ರೀತಿಯ ನಾಗಾರಾಧನೆ ಮತ್ತು ದೈವಾರಾಧನೆ ಆಚರಣೆಗಳು ನಡೆಯುತ್ತಲೇ ಇರುವುದು ಜಿಲ್ಲೆಯ ವೈಶಿಷ್ಟ್ಯಗಳಲ್ಲಿ ಒಂದು. ಯಾವುದೇ ರೀತಿಯ ಆವಿಷ್ಕಾರ ತಂತ್ರಜ್ಞಾನಗಳು ಈ ಜನರ ನಂಬಿಕೆಯ ಹತ್ತಿರ ಸುಳಿದಿಲ್ಲ. ಇದಕ್ಕೆ ಮರಾಟಿಗರೂ ಹೊರತಾಗಿಲ್ಲ. ನೂರಾರು ವರ್ಷಗಳ ಹಿಂದೆ ವಲಸಿಗರಾಗಿ ಬಂದ ಮರಾಟಿಗರು ಸಹಜವಾಗಿಯೇ ಈ ಮಣ್ಣಿನ ಸೊಗಡನ್ನು ಅರಿತವರು. ಶ್ರಮಜೀವಿಗಳು ಬಹುಬೇಗನೆ ಆ ಪರಿಸರಕ್ಕೆ ಹೊಂದಿಕೊಳ್ಳುತ್ತಾರೆ. ಅಂತೆಯೇ ಕಷ್ಟಸಹಿಷ್ಣುಗಳಾದ ಮರಾಟಿಗರು ತುಳುವರಂತೆಯೇ ತುಳುವರಾಗಿ ದೈವಾರಾಧನೆಯಲ್ಲಿ ತೊಡಗಿಸಿಕೊಂಡರು.

ದೈವಗಳನ್ನು ಪೂಜಿಸುವ ಸಂಪ್ರದಾಯ ಕರ್ನಾಟಕ ಹಾಗೂ ಇನ್ನಿತರ ದ್ರಾವಿಡ ಭಾಷಾಕ್ಷೇತ್ರಗಳಲ್ಲಿ ಕಂಡು ಬಂದರೂ ದಕ್ಷಿಣ ಕನ್ನಡ ಜಿಲ್ಲೆಯ ಪದ್ಧತಿ ಅವುಗಳಿಗಿಂತ ಭಿನ್ನವಾಗಿದೆ ''ತುಳುನಾಡಿನ ಈ ಆರಾಧನಾ ಸಂಪ್ರದಾಯದ ವೈಶಿಷ್ಟ್ಯವೆಂದರೆ ಅದರಲ್ಲಿ ಕಂಡುಬರುವ ದೈವ ಸಂಕಲ್ಪನೆ, ಆಚರಣೆಗಳು, ಅಲಂಕಾರಗಳು, ಬಣ್ಣಗಾರಿಕೆ, ಆವೇಶಭರಿತ ನರ್ತನ, ಸಂಗೀತ, ಪಾತ್ರಿಯಲ್ಲಿ ಹಾಗೂ ಭೂತನರ್ತಕನಲ್ಲಿ ಆವೇಶಗೊಂಡ ದೈವ ಹಾಗೂ ಭಕ್ತರ ಮಧ್ಯೆ ನಡೆಯುವ ಸಂಭಾಷಣೆಗಳು, ಭೂತ ನರ್ತಕ ನೀಡುವ ನ್ಯಾಯ ತೀರ್ಮಾನಗಳು ಇತ್ಯಾದಿ''[೫೦] ಈ ಎಲ್ಲಾ

ಕುಣಿತಗಳು ಹಾಡುಗಳು ದೈವ ಸಂಬಂಧವನ್ನು ಹೊಂದಿದ್ದು ಒಂದು ಬಗೆಯ ಅಲೌಕಿಕ ಪಾರಮಾರ್ಥಿಕ ಚಿಂತನೆಯಿಂದ ಕೂಡಿರುತ್ತದೆ. ಇಲ್ಲಿ ವೀರಾರಾಧನೆಯೂ ಕೂಡ ಮಹತ್ವವನ್ನು ಪಡೆದುಕೊಂಡಿರುವುದನ್ನು ಕಾಣಬಹುದು.

''ಒಂದು ಮೌಲ್ಯಕ್ಕಾಗಿ ಸಮೂಹದ ಪ್ರತಿನಿಧಿಗಳಾಗಿ ಹೋರಾಡಿ ದುರಂತ ಕಂಡ ವೀರರು ಮಧ್ಯಂತರ ಜಗತ್ತಿನಲ್ಲಿ ಅಲೌಕಿಕ ವ್ಯಕ್ತಿಗಳಾಗಿ ಆರಾಧನೆ ಪಡೆಯುತ್ತಿದ್ದಾರೆ. ಪರಿಶಿಷ್ಟ ನಾಯಕ ಅನುಭವಿಸಿದ ಅವಮಾನ ಸಂಸ್ಕೃತಿಯನ್ನು ಸೂಕ್ಷ್ಮವಾಗಿ ಗ್ರಹಿಸಿ ಬದುಕಿನ ಸಾಧ್ಯತೆಗಳನ್ನು ಕಂಡುಕೊಳ್ಳಲು ಕಾರಣವಾಯಿತು.''[೪೯] ಎಂಬ ವಾಮನ ನಂದಾವರ ಅವರ ಮಾತು ತುಳುನಾಡಿನ ದೈವಾರಾಧನೆಯ ಒಳಮರ್ಮವನ್ನು ಹೊರಗೆಡಹುತ್ತದೆ. ತುಳುನಾಡಿಗೆ ವಲಸಿಗರಾಗಿ ಬಂದು ಇಲ್ಲೇ ನೆಲಸಿರುವ ಎಲ್ಲಾ ಜನಸಮುದಾಯಗಳೂ ಈ ನಾಗಾರಾಧನೆ, ದೈವಾರಾಧನೆಯ ಪ್ರಭಾವದಿಂದ ಹೊರಗುಳಿಯಲಾಗಿಲ್ಲ. ಮಣ್ಣಿನ ಸೊಗಡು, ಪ್ರಾದೇಶಿಕ ವೈವಿಧ್ಯತೆ, ತುಳುವರ ಮನೋಧರ್ಮ, ಮನೋವೈಶಾಲ್ಯಗಳೆಲ್ಲವೂ ಹೊರಗಿನಿಂದ ಬಂದಂಥ ಜನಸಮುದಾಯಗಳಿಗೆ ತಮ್ಮನ್ನು ಬಹಳ ಬೇಗನೆ ಒಳಗು ಮಾಡಿಕೊಳ್ಳಲು ಅನುಕೂಲವಾಯಿತೆಂದು ಹೇಳಬಹುದು.

ದೈವಾರಾಧನೆಯ ಬಗ್ಗೆ ಆಳವಾಗಿ ಅಧ್ಯಯನ ಮಾಡಿದ ವಿದ್ವಾಂಸರಲ್ಲಿ ಒಬ್ಬರಾದ ಡಾ.ಚಿನ್ನಪ್ಪ ಗೌಡರ ''ಭೂತಾರಾಧನೆ ಬಹುಮುಖೀ ಉದ್ದೇಶಗಳನ್ನು ಒಳಗೊಂಡಿರುವುದರಿಂದಲೇ ಅದು ಸಮಾಜದ ಎಲ್ಲಾ ವರ್ಗದ, ಎಲ್ಲಾ ಪ್ರಾಯದ ಜನರನ್ನು ತನ್ನತ್ತ ಆಕರ್ಷಿಸಲು ಸಮರ್ಥವಾಗಿದೆ. ಜನಪದರ ಮಾನಸಿಕ ಸಂತೃಪ್ತಿಯ ಕಡೆಗೆ ಈ ರಂಗಭೂಮಿಗೆ ಒಲವಿದೆ. ಜೊತೆಗೆ ಪ್ರಮುಖ ಚಿಕಿತ್ಸಾ ಪದ್ಧತಿಯಾಗಿ ಕಾರ್ಯನಿರ್ವಹಿಸುತ್ತಾ ಬಂದಿದೆ. ಕಂಬಳ, ಕೋಳಿ ಅಂಕ, ಚೆಂಡು ಕುಟ್ಟುವುದು, ಬೇಟೆ ಇಂತಹ ಕ್ರೀಡೆಗಳನ್ನು ಕಲ್ಪಿಸುತ್ತದೆ. ಬಹಳ ಸ್ಥಿತಿ-ಸ್ಥಾಪಕ ಗುಣವುಳ್ಳ ಒಂದು ಬಂಧ ಭೂತಾರಾಧನೆಗೆ ಇರುವುದರಿಂದ ಮತ್ತು ಅದರ ವ್ಯಾಪ್ತಿ ಇಡಿಯ ತುಳು ಸಮಾಜವನ್ನು ಒಳಗೊಳ್ಳುವುದರಿಂದ ಸಮಾಜದ ಜೊತೆಗಿನ ಅದರ ಸಂಬಂಧ ಗಾಢವಾದುದಾಗಿದೆ.''[೫೦] ಎಂಬ ವ್ಯಾಖ್ಯಾನ ತುಳುನಾಡಿನ ಒಟ್ಟು ದೈವಾರಾಧನೆಯ ಮೂಲ ಅಂಶವನ್ನು ತಿಳಿಯಪಡಿಸುತ್ತದೆ.

ತುಳುನಾಡಿನಲ್ಲಿ ಒಂದು ಅಂದಾಜಿನ ಪ್ರಕಾರ ಸುಮಾರು ೩೦೦ಕ್ಕಿಂತ ಹೆಚ್ಚು ದೈವ-ಭೂತಗಳಿವೆ. ಅವುಗಳಲ್ಲಿ ಮರಾಟಿ ಸಮುದಾಯದವರು ಹೆಚ್ಚಾಗಿ ಆರಾಧಿಸುವ ದೈವಗಳೆಂದರೆ ಕಲ್ಲುರ್ಟಿ, ಪಂಜುರ್ಲಿ, ಗುಳಿಗ, ರಕ್ತೇಶ್ವರಿ, ವಿಷ್ಣುಮೂರ್ತಿ ಇತ್ಯಾದಿ. ಮರಾಟಿಗರ ಭೈರವಪೂಜೆ ದೈವಾರಾಧನೆಯೂ ಹೌದು ನಾಗಾರಾಧನೆಯೂ ಹೌದು. ಮಾರಾಟಿಗರು ಮುಖ್ಯವಾಗಿ ಕಲ್ಲುರ್ಟಿ, ಭೂತ, ಪಂಜುರ್ಲಿ ಭೂತವನ್ನು 'ಅಗೆಲು' ಮತ್ತು 'ಕೋಲ'ಗಳ ಮೂಲಕ ಆರಾಧಿಸುತ್ತಾರೆ. ವಿದ್ವಾಂಸರ ಪ್ರಕಾರ ತುಳುನಾಡಿನಲ್ಲಿ ಅತೀ ಹೆಚ್ಚು ಅಗೆಲು,[೫೧] ಕೋಲಗಳನ್ನು ಪಡೆಯುವ ದೈವವೆಂದರೆ ಕಲ್ಲುರ್ಟಿ. ಪ್ರತಿಯೊಂದು ವೈದಿಕೇತರ (ಬಂಟ, ಗೌಡ, ಕುಲಾಲ, ಮರಾಟಿ, ಇತ್ಯಾದಿ) ಎಲ್ಲಾ ಸಮುದಾಯದವರ ಮನೆಯಲ್ಲಿಯೂ ಪ್ರತಿ ವರ್ಷ ಕಾಲಾವಧಿ ಮತ್ತು ಹರಕೆಗಳ ರೂಪದಲ್ಲಿ ಕಲ್ಲುರ್ಟಿಗೆ 'ಅಗೆಲು' (ಎಡೆ) ಹಾಕಲಾಗುತ್ತದೆ. ಆ ಮೂಲಕ ತಮ್ಮ ಜಾನುವಾರು, ಕೃಷಿ ಸಮೃದ್ಧಿ, ಆರೋಗ್ಯವನ್ನು ದೈವದ ಮೂಲಕ ಪರೋಕ್ಷವಾಗಿ ಸಹಾಯವನ್ನು ಪಡೆಯಲಾಗುತ್ತದೆ. ಮಾನಸಿಕವಾಗಿ ನೆಮ್ಮದಿಯನ್ನು ಕಂಡುಕೊಳ್ಳಲಾಗುತ್ತದೆ.

**ಕಲ್ಲುರ್ಟಿ ಅಗೆಲು**

ನಿಗದಿತ ದಿನ ಬೆಳಿಗ್ಗೆ ಮೊಟ್ಟೆ ಇಡದ ಹೆಣ್ಣುಕೋಳಿಯನ್ನು ಕಟ್ಟಿಹಾಕುತ್ತಾರೆ. ಮಧ್ಯಾಹ್ನದ ನಂತರ ಸುಮಾರು ೪ ಗಂಟೆಯ ನಂತರ ಒಬ್ಬ ಮನೆಯ ಸದಸ್ಯ ಸ್ನಾನ ಮಾಡಿ ಬರುತ್ತಾನೆ. ಆ ವೇಳೆಗೆ ಮನೆಯೊಡತಿ ಮನೆಯೊಳಗೆ, ದೇವರ ಕೋಣೆ ಇತ್ಯಾದಿ ಸೆಗಣಿ ಸಾರಿಸಿ ಶುದ್ಧಗೊಳಿಸುತ್ತಾಳೆ. ಸ್ನಾನಾನಂತರ ದೇವರ ಕೋಣೆಯಲ್ಲಿ ದೀಪ ಉರಿಸಲಾಗುತ್ತದೆ. ಒಂದು ಕದಳಿ ಬಾಳೆಲೆಯಲ್ಲಿ ಸ್ವಲ್ಪ ಬೆಳ್ತಿಗೆ ಅಕ್ಕಿ ಮತ್ತು ಐದು ವೀಳ್ಯದೆಲೆ, ಒಂದು ಅಡಿಕೆಯನ್ನಿಟ್ಟು ಪ್ರಾರ್ಥನೆ ಮಾಡುತ್ತಾನೆ. ಕೋಳಿಗೆ ಸ್ವಲ್ಪ ಅಕ್ಕಿಯನ್ನು ತಿನ್ನಿಸಿ, ಹರಿಕೆಯದಾದರೆ ಹರಕೆ, ಕಾಲಾವದಿಯದ್ದಾದರೆ ಕಾಲಾವದಿಯ 'ಅಗೆಲು' ಹಾಕುತ್ತಿದ್ದೇನೆ. "ಅದನ್ನು ಸಾಂಗವಾಗಿ ನೆರವೇರಿಸಿಕೊಡಬೇಕೆಂದು" ಮೊದಲ ಅರಿಕೆ ಮಾಡುತ್ತಾನೆ. ಕೋಳಿಯನ್ನು ಅಲ್ಲಿಯೇ ಹಿಸುಕಿ ನಂತರ ಕೋಳಿಯನ್ನು ಪದಾರ್ಥ ಮಾಡಲಾಗುತ್ತದೆ. ರಾತ್ರಿ ೮ ಗಂಟೆಯ ಹೊತ್ತಿಗೆ ಅದೇ ಸ್ಥಳದಲ್ಲಿ ದೀಪವಿರಿಸಿ ನಾಲ್ಕು ಎಲೆಗಳಲ್ಲಿ ಎಡೆ ಬಡಿಸಲಾಗುತ್ತದೆ. ಅನ್ನ ಮತ್ತು ಕೋಳಿಯ ಸಾಂಬಾರನ್ನು ಎಡೆಯಿಟ್ಟು ಪತ್ರಿಯೊಂದು ಎಲೆಗಳಿಗೆ ಪ್ರತ್ಯೇಕ ದೀಪವಿರಿಸಲಾಗುತ್ತದೆ. ಹಾಗೆಯೇ ಬಾಳೆ ಎಲೆಯನ್ನು ಬೆಂಕಿಯಲ್ಲಿ ಸ್ವಲ್ಪ ಒಣಗಿಸಿ ತಟ್ಟೆಯಾಕಾರದ ಚಿಕ್ಕ ಚಿಕ್ಕ 'ದೊನ್ನೆ'ಗಳನ್ನು ಮಾಡಿ ಅಲ್ಲಿಡಲಾಗುತ್ತದೆ. ಒಂದೊಂದರಲ್ಲಿ ಶೇಂದಿ, ಸಾರಾಯಿ, ಹಾಲು, ನೀರು, ಹಾಕುತ್ತಾರೆ. ನಾಲ್ಕರಲ್ಲಿ ಒಂದು ಎಡೆ 'ಕುಲೆ' ಗಾಗಿರುತ್ತದೆ. ಎಲ್ಲ ತಟ್ಟೆಗೂ ಒಂದೊಂದು ವೀಳ್ಯದೆಲೆ, ಅಡಿಕೆ ಹೋಳು, ಕಿಸ್ಕಾರ ಹಾಗೂ ಮತ್ತು ಚಿಕ್ಕ ಕಲ್ಲುಗಳನ್ನು ಇಟ್ಟಿರುತ್ತಾರೆ. 'ಕುಲೆ'ಗಾಗಿನ ತಟ್ಟೆಯಲ್ಲಿ ಅರ್ಧ ವೀಳ್ಯದೆಲೆ ಮತ್ತು ಅರ್ಧ ಅಡಿಕೆ ಹೋಳನ್ನು ಇರಿಸುತ್ತಾರೆ. ನಂತರ ಮನೆಯವರೆಲ್ಲರೂ ನೆರೆದವರೂ ಸೇರಿ ಪ್ರಾರ್ಥನೆ ಮಾಡುತ್ತಾರೆ. ''ಇಂದು ಮಾಡಿದ ಅಡುಗೆಯಲ್ಲಿ, ಉರಿಸಿದ ನಂದಾದೀಪದಲ್ಲಿ ಯಾವುದೇ ತಪ್ಪಿದ್ದರೂ, ಅವುಗಳನ್ನು ಒಪ್ಪಿಕೊಂಡು ನಮ್ಮನ್ನು ಉದ್ಧರಿಸಬೇಕು" ಎಂದು ಮನೆಯ ಯಜಮಾನ ಅಥವಾ ಹಿರಿಯವರು ಪ್ರಾರ್ಥನೆ ನುಡಿ ನುಡಿಯುತ್ತಾರೆ. ಮನೆಯ ಹೆಣ್ಣು-ಹೆಂಗಸರೂ ಪ್ರಾರ್ಥಿಸಿದ ನಂತರ ದೊನ್ನೆಗಳನ್ನೆಲ್ಲಾ ಮನೆಯಿಂದ ಸ್ವಲ್ಪ ದೂರದಲ್ಲಿರಿಸಿ ಕುರ್ದಿ ನೀರು ಹಾಕಿ ತೆಂಗಿನ ಗರಿಯ 'ಸೂಟೆ'ಯನ್ನು ಅಲ್ಲಿಟ್ಟು ಬರುತ್ತಾರೆ. ಭೋಜನದೊಂದಿಗೆ 'ಕಲ್ಲುರ್ಟಿ ಅಗೆಲು' ಮುಗಿಯುತ್ತದೆ.

ಮರಾಟಿಗರು ಜಿಲ್ಲೆಯಾದ್ಯಂತ 'ಕಲ್ಲುರ್ಟಿ ಅಗೆಲು' ಹಾಕುವುದನ್ನು ಕಾಣಬಹುದು. ಪ್ರತಿ ವರ್ಷ ಕಾಲಾವದಿ ಸೇವೆಯಾಗಿ ಒಂದು ಸಲ ಎಡೆ ಹಾಕಿದರೆ ಉಳಿದಂತೆ ತಮ್ಮ ತಮ್ಮ ಹರಕೆಗಳನ್ನು ಎಡೆ ಹಾಕುವ ಮುಖೇನ ತೀರಿಸುತ್ತಾರೆ. ಕ್ಷೇತ್ರಕಾರ್ಯದ ಮಾಹಿತಿಯಂತೆ ಸುಳ್ಯ, ಪುತ್ತೂರು ತಾಲೂಕುಗಳಲ್ಲಿ ಬಹುತೇಕ ಮರಾಟಿಗರು ತಮ್ಮ ಜಾನುವಾರುಗಳ ಆರೋಗ್ಯದ ಸಲುವಾಗಿ, ಮನೆಯ ಸದಸ್ಯರ ಸಲುವಾಗಿ ಹರಕೆಗಳನ್ನು ಕಲ್ಲುರ್ಟಿಗೆ ಒಪ್ಪಿಸುವುದು ಕಾಣಬರುತ್ತದೆ. ಗೋಂದೋಳು, ಭೈರವ ಪೂಜೆಗಳನ್ನು ಕುಟುಂಬದ ತರವಾಡು ಮನೆಗಳಲ್ಲಿಯೇ ಮಾಡುವುದು ಸಂಪ್ರದಾಯ. ಆದರೆ ಕಲ್ಲುರ್ಟಿ ಅಗೆಲನ್ನು ಕುಟುಂಬದ ಯಾವುದೇ ಮನೆಯಲ್ಲಿಯೂ ಮಾಡಬಹುದಾಗಿದೆ. ಯಾವುದೇ ರೀತಿಯ ನಿಷೇಧ ಕಾಣದು. ಕಲ್ಲುರ್ಟಿ ಸೇವೆಗಾಗಿನ ಹೆಣ್ಣು ಕೋಳಿ ಮೊಟ್ಟೆಯಿಟ್ಟಿರಬಾರದು, ಪ್ರಾರ್ಥನೆ ಮಾಡಿದ ನಂತರ ದೇವರ ಕೋಣೆಯಿಂದ ಸ್ವಲ್ಪ ಹೊತ್ತು ಎಲ್ಲರೂ

ಹೊರಹೋಗಿರಬೇಕು. ಅಲ್ಲಿ ಯಾರೂ ಇರಬಾರದೆಂಬ ನಂಬಿಕೆಯಿದೆ. 'ಕುಲೆ'ಗಾಗಿನ ಎಡೆ ಮತ್ತು ಕಲ್ಲುರ್ಟಿಗಿರುವ ಎಡೆಯನ್ನು ಸ್ವೀಕರಿಸುವ ಸಲುವಾಗಿ ಯಾರೂ ನೋಡಬಾರದೆಂಬ ಊಹೆಗೆ ಇಲ್ಲಿ ಅವಕಾಶವಿದೆ. ಜಿಲ್ಲೆಯಲ್ಲಿ ಅನೇಕ ಮರಾಟಿ ಕುಟುಂಬ ಕಲ್ಲುರ್ಟಿ ಕೋಲ, ನೇಮ ಮಾಡಿಸುವುದೂ ಇದೆ.

**ಪಂಜುರ್ಲಿ ಆಗೇಲು:-** ಬಹುತೇಕ ಮರಾಟಿಗರು ಕಲ್ಲುರ್ಟಿ ದೈವವನ್ನು ನಂಬಿ ಆರಾಧಿಸಿದಂತೆ ಪಂಜುರ್ಲಿ ದೈವವನ್ನು ನಂಬುತ್ತಾರೆ. ಪಂಜುರ್ಲಿಯು ಪ್ರಾಣಿ ಮೂಲಕ ತುಳುನಾಡಿನ ಪ್ರಾಚೀನ ದೈವಗಳಲ್ಲಿ ಒಂದಾಗಿದೆ. ''ನಿಸರ್ಗದ ಶಕ್ತಿಗಳನ್ನು ಆರಾಧಿಸಿ ಓಲೈಸುವ ಅಂಗವಾಗಿ ಕಾಡು ಹಂದಿಯ ರೂಪದ ಪಂಜುರ್ಲಿಯ ಆರಾಧನೆ ರೂಢಿಗೆ ಬಂದುದೆನ್ನಬಹುದು ಎಂಬುದಾಗಿ ಅಮೃತ ಸೋಮೇಶ್ವರ ಅವರು ಅಭಿಪ್ರಾಯಪಡುತ್ತಾರೆ. ಮುಂದುವರೆದು ''ವಿಷ್ಣುವಿನ ವರಾಹ ಅವತಾರದ ಸ್ತ್ರೀ ಶಕ್ತಿಯೆನಿಸಿದ 'ವಾರಾಹಿ' ಸಪ್ತ ಮಾತೃಕೆಯರಲ್ಲಿ ಒಬ್ಬಳು. ಆ ವಾರಾಹಿಯನ್ನೇ ತುಳುನಾಡಿನ ಪಂಜುರ್ಲಿಯಲ್ಲಿ ಸಮೀಕರಣಗೊಳಿಸಿದ್ದನ್ನು ಕಾಣಬಹುದು'' ಎಂದು ವಿವರಿಸುತ್ತಾರೆ.

ಜಿಲ್ಲೆಯ ಬಹುತೇಕ ಮನೆದೈವವಾಗಿ ಒಂಟಿಯಾಗಿಯೋ ಅಥವಾ ಅತರ ದೈವಗಳ ಜೊತೆಯಲ್ಲಿಯೋ ಈ ಪಂಜುರ್ಲಿ ದೈವ ಕಂಡುಬರುತ್ತದೆ. ಪಂಜುರ್ಲಿ ದೈವಕ್ಕೆ ಅನೇಕ ರೂಪಗಳೂ ಹೆಸರುಗಳೂ ಪ್ರಚಲಿತದಲ್ಲಿವೆ. ಮರಾಟಿಗರಲ್ಲಿ ಅನೇಕರು ಅಣ್ಣಪ್ಪ ಪಂಜುರ್ಲಿಯನ್ನು ಆರಾಧಿಸುತ್ತಾರೆ. ದೀಪಾವಳಿಯ ಸಂದರ್ಭದಲ್ಲಿ ಅಥವಾ ಇತರೆ ನಿಗದಿತ ದಿನದಲ್ಲಿ ಅಣ್ಣಪ್ಪ ಪಂಜುರ್ಲಿಗೆ 'ತಂಬಿಲ' ಕೊಡುತ್ತಾರೆ. ಕೋಳಿಗಳನ್ನು ಬಲಿಕೊಟ್ಟು ಸಂತೃಪ್ತಿ ಪಡಿಸುತ್ತಾರೆ. ಮರಾಟಿಗರಲ್ಲಿ ಪಂಜುರ್ಲಿ ದೈವವಾದ ಬಗ್ಗೆ ಒಂದು ಜನಪದ ಕಥೆಯೇ ಇದೆ. ಮರಾಟಿಗನೋರ್ವ ಘಟ್ಟದ ಮೇಲಿಂದ ನಡೆದುಕೊಂಡು ಬರಬೇಕಾದರೆ ರಾತ್ರಿ ಸಮಯದಲ್ಲಿ ಒಂದು ಹಂದಿ ಮರಿ ಹಿಂದೆಯೇ ಬರತೊಡಗಿತು. ಘಟ್ಟ ಪ್ರದೇಶದಿಂದ ಇಳಿದು ತುಳುನಾಡನ್ನು ಸಮೀಪಿಸಿದರೂ ಹಂದಿ ಜೊತೆಯಲ್ಲಿ ಇದ್ದು ಅದನ್ನು ಸಾಕಿ ಸಲಹಿದಾಗ ಅನೇಕ ರೀತಿಯಲ್ಲಿ ಪ್ರಯೋಜನಗಳು ಉಂಟಾದುವು. ಕಾಲಕ್ರಮೇಣ ಹಂದಿಯನ್ನು ದೈವವಾಗಿ (ಪಂಜುರ್ಲಿ-ಹಂದಿ ಮರಿ) ಆರಾಧಿಸತೊಡಗಿದರು.

### ೪.೭ ಧಾರ್ಮಿಕ ಕೇಂದ್ರಗಳು

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಎರಡು ರೀತಿಯ ಧಾರ್ಮಿಕ ಕೇಂದ್ರಗಳಿವೆ. ದೇವಸ್ಥಾನ ಒಂದು ಕೇಂದ್ರವಾದರೆ ಉಳಿದಂತೆ ಮನೆಯೇ ಧಾರ್ಮಿಕ ಕೇಂದ್ರಗಳಾಗಿಯೂ ಕಾರ್ಯನಿರ್ವಹಿಸುವುದನ್ನು ಕಾಣುತ್ತೇವೆ. ಈ ತರಹದ ಕೇಂದ್ರಗಳಲ್ಲಿ ದೇವಕ್ರಿಯೆಯಲ್ಲಿ ಮತ್ತು ಅಸುರ ಕ್ರಿಯೆಯಲ್ಲಿಯೂ ದೇವ-ದೈವಗಳನ್ನು ಸಂತೃಪ್ತಿ ಪಡಿಸಲಾಗುತ್ತದೆ.

ಸಾಮಾನ್ಯವಾಗಿ ಎಲ್ಲಾ ಬುಡಕಟ್ಟುಗಳು ಸರ್ವಚೇತನಾವಾದಿಗಳು. ವಲಸೆ ಬಂದ ಮೊದಮೊದಲು ತಮ್ಮದೇ ಆದಂತಹ ದೈವ-ದೇವರುಗಳನ್ನು ಪೂಜಿಸುತ್ತಿದ್ದ ಮರಾಟಿಗರು ಇಂದು ಜಿಲ್ಲೆಯ ಪ್ರತಿಯೊಂದು ದೈವ-ದೇವರುಗಳನ್ನು ಭಕ್ತಿ ಗೌರವಗಳಿಂದ ಕಾಣುತ್ತಿರುವುದು ಕಂಡು ಬರುತ್ತದೆ. ಬದಲಾದ ಸಮಾಜದಲ್ಲಿ ಧಾರ್ಮಿಕ ಆಚರಣೆಗಳು, ದೈವಸ್ಥಾನಗಳು, ದೇವಾಲಯಗಳು ಇವರ ಮೇಲೆ ಪ್ರಭಾವ ಬೀರಿದೆ. ತುಳು ಸಂಸ್ಕೃತಿಯನ್ನು ತಮ್ಮ ಸಂಸ್ಕೃತಿಯೆಂದೇ ಪರಿಗಣಿಸುತ್ತ ಸಾಗಿದ್ದಾರೆ. ಇಂದು ಇವರನ್ನು ತುಳುವರಲ್ಲ ಎಂದು ತೀರ್ಮಾನಿಸುವುದು ಕಷ್ಟಸಾಧ್ಯ.

ಜಿಲ್ಲೆಯ ಬಹುತೇಕ ದೇವಾಲಯಗಳು ವೈದಿಕರಿಂದಲೇ ಪೂಜೆಗೊಳ್ಳುತ್ತಿದೆ. ಆ ಮೂಲಕ ಜಿಲ್ಲೆಯ ಬಹುಸಂಖ್ಯಾತ ಹಿಂದುಗಳು (ಬ್ರಾಹ್ಮಣರನ್ನು ಹೊರತು ಪಡಿಸಿ ನೋಡಿದಾಗ) ವೈದಿಕ ಪ್ರಭಾವಕ್ಕೆ ಬಹಳ ವೇಗವಾಗಿ ಒಳಗೊಳ್ಳುತ್ತಿದ್ದಾರೆ ಎಂದು ತಿಳಿಯಬಹುದು. ಇದರಲ್ಲಿ ಮರಾಟಿಗರೂ ಕೂಡ ಸೇರಿದ್ದಾರೆ. ಎಲ್ಲಾ ದೇವಸ್ಥಾನಗಳನ್ನು ಧಾರ್ಮಿಕ ಕೇಂದ್ರಗಳೆಂದು ಒಪ್ಪಿಕೊಂಡು ಆ ಮುಖೇನ ಅದರ ಬೆಳವಣಿಗೆಯಲ್ಲಿ ತಮ್ಮನ್ನು ಒಳಗು ಮಾಡಿಕೊಳ್ಳುತ್ತಿದ್ದಾರೆ. ಜಿಲ್ಲೆಯಲ್ಲಿ ಮರಾಟಿಗರದೇ ಆದಂತಹ ಯಾವುದೇ ದೇವಾಲಯಗಳಿಲ್ಲ. ಭೈರವನ ಆರಾಧನೆ, ಬಾಲೆಸಾಂತು (ಈಗಿಲ್ಲ) ಗಳು ಪ್ರಕೃತಿಯ ಮಡಿಲಲ್ಲಿ ನಡೆದರೆ ಗೋಂದೋಳು ಪೂಜೆ, ಮಂಗಳವಾರ ಪೂಜೆಗಳಿಗೆ ಮನೆಯೇ ಕೇಂದ್ರಗಳಾಗಿವೆ.

ಕೇರಳದ ಕಾಸರಗೋಡು ತಾಲೂಕಿನಲ್ಲಿ ಕಯ್ಯಾರು ಪರಂಬಳ ಆದಿಶಕ್ತಿ ಮಹಮ್ಮಾಯಿಯ ದೇವಸ್ಥಾನವಿದೆ. ಇದನ್ನು ೧೯೨೮ ರಲ್ಲಿಯೇ ಮರಾಟಿಗರೆಲ್ಲ ಸೇರಿ ಸ್ಥಾಪಿಸಿದ್ದಾರೆ. ಅದು ಜಿಲ್ಲೆಯಾದ್ಯಂತ ಭಕ್ತ ಜನರನ್ನು ಆಕರ್ಷಿಸುತ್ತಿದೆ.

ಜಿಲ್ಲೆಯಿಂದ ವಲಸೆ ಹೋದ ಮರಾಟಿಗರು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯಲ್ಲಿ ಇಂದಾವರ ಕೋರೋಡಿಯಲ್ಲಿ ತಮ್ಮ ಆರಾಧ್ಯ ದೇವಿ ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನವನ್ನು ಕಟ್ಟಿಕೊಂಡು ಒಂದು ಧಾರ್ಮಿಕ ಕೇಂದ್ರವಾಗಿಸಿದ್ದಾರೆ. ದೇವಾಲಯದಲ್ಲಿ ಪ್ರತಿ ವರ್ಷ ಹೋಳಿ, ನವರಾತ್ರಿ ಉತ್ಸವಗಳನ್ನು ಸಂಪ್ರದಾಯ ಬದ್ಧವಾಗಿ ಆಚರಿಸಿಕೊಂಡು ಬರುತ್ತಿದ್ದಾರೆ. ಮರಾಟಿಗರೇ ಅರ್ಚಕರಾಗಿ ಕಾರ್ಯನಿರ್ವಹಿಸುತ್ತಿರುವ ಈ ದೇವಸ್ಥಾನಕ್ಕೆ ಕೊಪ್ಪ, ನರಸಿಂಹರಾಜಪುರ, ಶೃಂಗೇರಿ, ಹೊಸನಗರ ತಾಲೂಕುಗಳಿಂದ ಭಕ್ತರು ಆಗಮಿಸುತ್ತಿದ್ದಾರೆ.

ಉಡುಪಿ ಜಿಲ್ಲೆಯಾದ್ಯಂತ ಗ್ರಾಮಕ್ಕೊಂದರಂತೆ ಶ್ರೀ ದೇವಿಯ ಗುಡಿಗಳಿವೆ. ಗೋಂದೋಳು ಪೂಜೆಯಲ್ಲಿ ಪೂಜಿಸಲ್ಪಡುವ ಮಹಮ್ಮಾಯಿಯ ವಿಗ್ರಹ, ಪೂಜಾ ಪರಿಕರಗಳನ್ನೆಲ್ಲಾ ಈ ಗುಡಿಗಳಲ್ಲಿ ಇರಿಸಲಾಗುತ್ತದೆ. ಪ್ರತಿನಿತ್ಯ ಮರಾಟಿಗ ಅರ್ಚಕನಿಂದಲೇ ಪೂಜಾ ಕಾರ್ಯ ನೆರವೇರುತ್ತದೆ. ಈ ಗುಡಿಗಳಿಂದಲೇ ಗ್ರಾಮದ ಒಳಗೆ ನಡೆಯುವ ಗೋಂದೋಳು ಪೂಜೆಗಾಗಿನ ವಿಗ್ರಹ, ಪರಿಕರಗಳನ್ನು ಅರ್ಚಕರು ಹೊತ್ತುಕೊಂಡು ಹೋಗಿ ಪೂಜೆ ಮಾಡಿ ತರುತ್ತಾರೆ. ಯಾವುದೇ ರೀತಿಯ ವಾಹನದಲ್ಲಿ ತೆಗೆದುಕೊಂಡು ಹೋಗಬಾರದೆನ್ನುವ ನಂಬಿಕೆಯಿರುವುದು ಕಂಡು ಬರುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯ ಪ್ರತಿ ತಾಲೂಕು, ಹೋಬಳಿಗಳಲ್ಲಿ ಮರಾಟಿಗರ ಸೇವಾ ಸಂಘಗಳು ಕಾರ್ಯನಿರ್ವಹಿಸುತ್ತಿವೆ. ತಮ್ಮದೇ ಆದ ಸ್ವಂತ ಕಟ್ಟಡಗಳನ್ನು ಹೊಂದಿದ್ದು ಕೆಲವು ಕೇಂದ್ರಗಳಲ್ಲಿ ಪ್ರತಿ ವರ್ಷ ಗೋಂದೋಳು ಪೂಜೆ, ಸತ್ಯನಾರಾಯಣ ಪೂಜೆಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ಇವುಗಳು ಕೂಡ ಒಂದು ಧಾರ್ಮಿಕ ಕೇಂದ್ರಗಳಾಗಿವೆ ಎಂದು ಹೇಳಬೇಕು.

ಶೃಂಗೇರಿ ತಮಗೂ ಸೇರಿದ ಮಠವೆಂದು ಹೇಳಿಕೊಳ್ಳುವ ಮರಾಟಿಗರು ತಪ್ಪದೇ ಶ್ರೀ ಶಾರದಾಂಬೆಯ ದರ್ಶನ ಪಡೆಯುತ್ತಿರುವುದು ಇಂದಿಗೂ ಕಂಡು ಬರುತ್ತದೆ. ಶೃಂಗೇರಿ ಮೂಲ ಮಠ ಎನ್ನುವುದರ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಮರಾಟಿಗರಲ್ಲಿ ಮದುವೆಯ ಸಂದರ್ಭದಲ್ಲಿ ಮದುಮಗ-ಮದುಮಗಳ ಹೆಸರಿನಲ್ಲಿ ಶೃಂಗೇರಿ ಮಠಕ್ಕೆ ಇಂತಿಷ್ಟು

ಹಣ ಸಂದಾಯ (ಒಂದು ಕಾಲು ರೂಪಾಯಿ) ಮಾಡಿರುವುದಕ್ಕೆ ಲಿಖಿತ ದಾಖಲೆಗಳು ದೊರೆಯುತ್ತವೆ. ಆದರೆ ಇತ್ತೀಚೆಗೆ ಆ ಪದ್ಧತಿ ಕೂಡ ನಿಂತುಹೋಗಿರುವುದು ಇಲ್ಲಿ ಗಮನಿಸಬೇಕಾದ ಅಂಶ.

ಸಾಮಾನ್ಯವಾಗಿ ಬುಡಕಟ್ಟುಗಳ ಆರಾಧ್ಯದೈವ ಶಿವನೇ ಆಗಿರುತ್ತಾನೆ. ಮರಾಟಿಗರು ಕೂಡ ಶಿವನ ಅವತಾರವಾದ ಭೈರವನನ್ನು ಅತೀ ಭಯ ಭಕ್ತಿಗಳಿಂದ ಪೂಜಿಸುವುದು ಮತ್ತು ಭೈರವನಿಗಾಗಿ ಬನವನ್ನೇ ಒಂದು ಪೂಜಾ ಕೇಂದ್ರವಾಗಿರಿಸಿರುವುದು ಕಾಣಬರುತ್ತದೆ. ತಿರುಪತಿ ವೆಂಕಟೇಶ್ವರನನ್ನು ಮನೆದೇವರನ್ನಾಗಿ ಪೂಜಿಸುವ ಇವರು ಪ್ರತಿವರ್ಷ ಕುಟುಂಬದ ಕೇಂದ್ರ (ತರವಾಡು) ಮನೆಯಲ್ಲಿ ಪ್ರತಿಯೊಬ್ಬ ಸದಸ್ಯರ ಹೆಸರಿನಲ್ಲಿ 'ಮುಡಿಪು' ತುಂಬಿಸುವುದನ್ನು ಕಾಣುತ್ತೇವೆ. ಈ ರೀತಿ ಕೂಡಿಟ್ಟ ಹಣವನ್ನು ಅನೇಕ ವರ್ಷಗಳನಂತರ ತಿರುಪತಿಗೆ ಒಯ್ದು ತಿಮ್ಮಪ್ಪನ ಸಾನಿಧ್ಯಕ್ಕೆ ಒಪ್ಪಿಸುತ್ತಾರೆ. ಹಾಗೆಯೇ ನಾಡಿನ ಪ್ರಸಿದ್ಧ ಕ್ಷೇತ್ರಗಳಾದ ಧರ್ಮಸ್ಥಳ, ಕುಕ್ಕೆ ಸುಬ್ರಮಣ್ಯ, ಕಟೀಲು ಶ್ರೀ ದುರ್ಗಾಪರಮೇಶ್ವರಿ, ಕೊಲ್ಲೂರು ಶ್ರೀ ಮೂಕಾಂಬಿಕೆ, ಹೊರನಾಡು, ಉಡುಪಿ, ಮಲ್ಲ ಹೀಗೆ ಎಲ್ಲಾ ಕ್ಷೇತ್ರಗಳಿಗೂ ಭಕ್ತಿಯಿಂದ ಹೋಗಿ ದರ್ಶನಮಾಡಿ ಹರಕೆಗಳನ್ನು ತಿರಿಸುತ್ತಿದ್ದಾರೆ.

ಇತರರಂತೆ ಮರಾಟಿಗರು ಶಬರಿಮಲೆ ಅಯ್ಯಪ್ಪನನ್ನು ಆರಾಧಿಸುವುದೂ ಇತ್ತೀಚೆಗೆ ಹೆಚ್ಚಾಗಿದೆ. ಕೇರಳದ ಶಬರಿಮಲೆ ಅಯ್ಯಪ್ಪ ಇಡೀ ಭಾರತೀಯರೆಲ್ಲರ ಆರಾಧ್ಯ ದೈವನಾಗಿದ್ದಾನೆ. ಪ್ರತಿವರ್ಷ ನವೆಂಬರ್ ಎರಡನೇ ವಾರದಿಂದ ಸುಮಾರು ಎರಡು ತಿಂಗಳು ಕಾಲ ಶಬರಿಮಲೆಗೆ ಮಾಲೆಧರಿಸಿ ಪೂಜೆ ಸಲ್ಲಿಸುತ್ತಾರೆ. ಸುಮಾರು ನಲವತ್ತೊಂದು ದಿನಗಳ ಮಂಡಲವ್ರತವನ್ನು ಆಚರಿಸಿದ ನಂತರವೇ ಶಬರಿಮಲೆಗೆ ಭಕ್ತಿ ಪಯಣ ಆರಂಭಿಸುತ್ತಾರೆ. ಜಿಲ್ಲೆಯ ಬಹುತೇಕ ಮರಾಟಿ ಮನೆಯಿಂದ ಒಂದಲ್ಲ ಒಂದು ವರ್ಷ ಶಬರಿಮಲೆ ಅಯ್ಯಪ್ಪನ ವ್ರತ ಹಿಡಿದು ಕೇರಳದಲ್ಲಿರುವ ಶಬರಿಮಲೆ ಸನ್ನಿಧಿಗೆ ಹೋಗಿ ಬರುತ್ತಿದ್ದಾರೆ. ಎಲ್ಲರೂ ಹರಕೆಯ ರೂಪದಲ್ಲಿಯೇ ಅಯ್ಯಪ್ಪ ವ್ರತವನ್ನಾಚರಿಸುವುದನ್ನು ಕಾಣಬಹುದಾಗಿದೆ.

**ಕೊನೆ ಟಿಪ್ಪಣಿಗಳು:**

೦೧. ದೇ.ಜವರೇಗೌಡ, ಜಾನಪದ ಅಧ್ಯಯನ, ಪು ೩೪೬.

೦೨. ಡಾ.ದೇವೇಂದ್ರಕುಮಾರ ಹಕಾರಿ, ಜಾನಪದ ಗಂಗೋತ್ರಿ ಸಂ.೪, ಪು.೬೫

೦೩. ಮಾರಿ ಗೋಂದೋಳು ಉಡುಪಿ ಜಿಲ್ಲೆಯಲ್ಲಿ ಪ್ರಚಲಿತದಲ್ಲಿದೆ. ಗೋಂದೋಳು ಪೂಜೆಯಲ್ಲಿ ಶ್ರೀದೇವಿಯನ್ನು ಆರಾಧಿಸಿ ಊರಿನ ಅಥವಾ ಗ್ರಾಮದ ಮಾರಿಯನ್ನು ಗಡಿದಾಟಿಸುವ ಆಚರಣೆಯೇ ಮಾರಿಗೋಂದೋಳು. ಮರಾಟಿಗರ ಜತೆ ಎಲ್ಲಾ ವರ್ಗದ ಜನರೂ ಸೇರಿ ಆರಾಧನೆ, ಕುಣಿತದಲ್ಲಿ ಭಾಗವಹಿಸುತ್ತಾರೆ.ಅಂತಿಮವಾಗಿ ಊರಿನ ಗಡಿಯಲ್ಲಿ ಪ್ರಾಣಿ ಬಲಿಯನ್ನು ಕೊಡುವುದರ ಮೂಲಕ ಊರಿನ ಮಾರಿಯನ್ನು ದಾಟಿಸುತ್ತಾರೆ.ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇದು ಕಂಡುಬರುವುದಿಲ್ಲ.

೦೪. ಕರ್ನಾಟಕದಲ್ಲಿ 'ಗೊಂದಲಿಗರು' 'ಗೊಂದಲ' ಹುಟ್ಟಿತು ಮತ್ತು ಯಾದವರ ಕಾಲದ ಶಾಂಙ್ಞದೇವನ ಅಭಿಮತ. ನಾಗಚಂದ್ರ ಕವಿಯ ಮಲ್ಲಿನಾಥ ಪುರಾಣ, ಪಾಲ್ಕುರಿಕೆ ಸೋಮನಾಥ ಮುಂತಾದ ಗ್ರಂಥಗಳಲ್ಲಿ ಉದಾಹರಣೆಗಳಿವೆ. (ಮುದೇನೂರು ಸಂಗಣ್ಣ, ೧೯೯೩, ಪು ೨೩.)

೦೫. ಪ್ರಾಚೀನ ಮರಾಠಿ ಕಾವ್ಯ ಮುಖ್ಯ ಮೂರು ಸ್ವರೂಪಗಳನ್ನು ಹೊಂದಿದೆ. ಸಂತ ಕಾವ್ಯ, ಪಂಡಿತೀ ಕಾವ್ಯ ಮತ್ತು ಶಾಹಿರೀ ಕಾವ್ಯ. ಪೋವಾಡೆ ಮತ್ತು ಲಾವಣಿ ಶಾಹಿರೀಯ ಎರಡು ಪ್ರಕಾರಗಳು. ಪೋವಾಡೆ ಕವನಗಳ ಹುಟ್ಟು ಧರ್ಮದ ಮೂಲಕ ಮಹಾರಾಷ್ಟ್ರದಲ್ಲಿ ಧಾರ್ಮಿಕ ದಿನಾಚರಣೆ ಮತ್ತು ಕುಲಧರ್ಮಗಳ ಪರಿಪಾಲನೆಗಳ ಸಾಂಪ್ರದಾಯಿಕ ರೂಢಿಯಲ್ಲಿ 'ಗೋಂಧಳ ಹಾಕಿಸುವುದು' ಎಂಬ ಪ್ರಕಾರವಿತ್ತು. ಗೋಂಧಳದ ಆರಂಭ ಈಶ್ವರನ ಸ್ತುತಿಯಿಂದ. ಸಂತ ನಾಮದೇವನಿಗಿಂತ ಮೊದಲೇ ಗೋಂಧಳ ಪ್ರಚಾರದಲ್ಲಿತ್ತು (ಡಾ. ಎಸ್.ಎಸ್. ಬ್ಯಾತನಾಳ, ೧೯೮೧, ಪು ೧-೪)

೦೬. ಡಾ. ಯು.ಪಿ. ಉಪಾಧ್ಯಾಯ (ಪ್ರ.ಸಂ.) ತುಳು ನಿಘಂಟು, ಪು ೧೧೫೧.

೦೭. ಡಾ.ಯು.ಪಿ.ಉಪಾಧ್ಯಾಯ (ಪ್ರ.ಸಂ) ತುಳು ನಿಘಂಟು ಪು.

೦೮. ಕಾಸರಗೋಡಿನಲ್ಲಿ ವಲಸಿಗರಾಗಿ ಬಂದು ನೆಲೆಸಿದ ಕರ್ಹಾಡ ಬ್ರಾಹ್ಮಣರು ವೈದಿಕ ರೀತಿಯಲ್ಲಿ (ದೇವಕ್ರಿಯೆ)'ಗೋಂದಾಲ್' ಎಂಬ ಕುಣಿತವಿರುವ ಪೂಜೆ ಮಾಡುತ್ತಿದ್ದರು (ಕೃ.ಭ. ಪೆರ್ಲ, ೧೯೯೦, ಪು.೩೬೦)

೦೯ ಪೂವಪ್ಪ ಕಣಿಯೂರು, ಸಿರಿ ಅಭಿನಂದನ ಗ್ರಂಥ ಪು ೨೭೭.

೧೦. ಮೋಹನ್.ಎಸ್, ೨೦೦೨, 'ತುಳುನಾಡಿನ ಗೋಂದೋಳು ಪೂಜೆ' (ಅಪ್ರಕಟಿತ ಎಂ.ಫಿಲ್ ಪ್ರಬಂಧ ಪು)

೧೧. ವೆಂಕಪ್ಪ ನಾಯ್ಕ.ಎ., ೨೦೦೧, ಮರಾಟಿ ಸಂಪದ ಪು.೨೮

೧೨. ಡಾ. ಅಂಬಳಿಕೆ ಹಿರಿಯಣ್ಣ, ೧೯೯೫ ಪು ೪೮೫.

೧೩. ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಪು ೨೭೬.

೧೪. ಚೆನ್ನಣ್ಣ ವಾಲಿಕಾರ, ಹೈದರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಜಾನಪದ ಅಧ್ಯಯನ, ಪು ೯೯

೧೫. ಉದ್ಧೃತ ಚೆನ್ನಣ್ಣ ವಾಲಿಕಾರ, ಹೈದರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಜಾನಪದ ಅಧ್ಯಯನ, ಪು ೩೩೯.

೧೬. ಶಿವರುದ್ರಪ್ಪ, ಹತ್ತು ಶತಮಾನಗಳ ಕನ್ನಡ ಸಾಹಿತ್ಯ, ಪು ೬೯೨.

೧೭. 'ಕೈಲ್ ಕಡ್ಪುನೆ' (ಗೊನೆ ಕಡಿಯುವುದು) ಇದು ಜಿಲ್ಲೆಯ ಎಲ್ಲಾ ಆರಾಧನೆಯ ಪ್ರಾರಂಭದ ವಿಧಿಯಾಗಿದೆ. ಈ ವಿಧಿಯನ್ನು ಐದು, ಏಳು ದಿನಗಳ ಮುಂಚಿತವಾಗಿ ನೆರವೇರಿಸುತ್ತಾರೆ. ಕುಟುಂಬದ ಹಿರಿಯರೆಲ್ಲರ ಉಪಸ್ಥಿತಿಯಲ್ಲಿ ಗೊನೆ ಕಡಿಯಲಾಗುತ್ತದೆ. ಮರಾಟಿಗರ ಬಹುತೇಕ ಆಚರಣೆಗಳಲ್ಲಿ 'ಕದಳಿ' ತಳಿಯ ಬಾಳೆಗೊನೆ ಪ್ರಮುಖವಾದುದು. ಗೊನೆ ಕಡಿದ ಮೇಲೆ ಮನೆಯಲ್ಲಿ ಅಥವಾ ಕುಟುಂಬದಲ್ಲಿ ಇತರೆ ಯಾವುದೇ ಸಮಾರಂಭವಿರುವುದಿಲ್ಲ.

೧೮. ಗುರುಪದೇಶ ಇಲ್ಲದೆ ಗೋಂದೋಳು ಪೂಜೆ ಮತ್ತು ಮಂಗಳವಾರ ಪೂಜೆಗಳಲ್ಲಿ ಯಾವ ಮರಾಟಿಗನೂ ಪೂಜೆಯಲ್ಲಿ ಕುಳಿತುಕೊಳ್ಳಲು ಅನರ್ಹನಾಗಿರುತ್ತಾನೆ. ಗುರುಪದೇಶ ಪಡೆದವರನ್ನು ದೇವರಮಾನಿ ಎಂದೂ ಕರೆಯುತ್ತಾರೆ. ಓರ್ವ ಹಿರಿಯ ಅನುಭವಸ್ಥರಿಂದ ಗುರುಪದೇಶವನ್ನು ಪಡೆಯಲಾಗುತ್ತದೆ. ಪೂಜೆ ನಡೆಯುವ ಸಂದರ್ಭದಲ್ಲಿ ಅಪರೂಪವಾಗಿ ರಾತ್ರಿ ೧೨ ಅಥವಾ ೧ ಗಂಟೆಯ ಸಮಯದಲ್ಲಿ ಈ ಗುರುಪದೇಶ ನೀಡುವ ಕಾರ್ಯ ನಡೆಯುತ್ತದೆ.

ಗುರುಪದೇಶ ಪಡೆಯುವ ಪುರುಷ ಅಥವಾ ಸ್ತ್ರೀ ಸ್ನಾನ ಮಾಡಿ ಬರುತ್ತಾರೆ. ಅಲ್ಲಿ ಉಪಸ್ಥಿತರಿರುವ ಅತೀ ಹತ್ತಿರದ ಬಂಧು ಬಾಂದವರಲ್ಲಿ 'ನಾನು ಗುರುಪದೇಶ ಪಡೆಯುತ್ತಿದ್ದೇನೆ.' ಎಂದು ಹೇಳಿ ಅವರ ಪಾದಮುಟ್ಟಿ ನಮಸ್ಕರಿಸಿ ಆಶೀರ್ವಾದ ಪಡೆಯುತ್ತಾರೆ. ಪೂಜಾ ಗದ್ದಿಗೆಯ ಸನಿಹದಲ್ಲಿ ಮುಖ್ಯ ಪೂಜಾರಿಯು ಗುರುಪದೇಶದ ನಂತರದ ನೀತಿ ನಿಯಮಗಳ ಬಗ್ಗೆ ತಿಳಿಸುತ್ತಾನೆ. ಆನಂತರ ಗುರುವಿನ ಮಡಿಲಲ್ಲಿ ಕುಳ್ಳಿರಿಸಿ ಅವರಿಬ್ಬರ ಮೇಲೆ ಬಿಳಿ ವಸ್ತ್ರ ಹೊದಿಸಲಾಗುತ್ತದೆ. ಗುರುಗಳು ಮೂರು ಮುಖ್ಯ ಮಂತ್ರಗಳನ್ನು ಕಿವಿಯ ಬಳಿ ಉಸುರುತ್ತಾರೆ. ನಂತರ ವಸ್ತ್ರ ತೆಗೆದು ಗುರುವಿಗೆ ವಂದಿಸಿ ಆಶಿರ್ವಾದ ಪಡೆಯುತ್ತಾರೆ. ಗುರುವಿಗೆ ಗೌರವಪೂರ್ವಕವಾಗಿ ಒಂದು ಬಿಳಿ ವಸ್ತ್ರ ಮತ್ತು ೧೦.೨೫ ರೂಪಾಯಿಯನ್ನು ನೀಡಲಾಗುತ್ತದೆ.

೧೯. 'ಭಂಡಾರ ಮಡಕೆ' ಮಣ್ಣಿನ ಗಡಿಗೆಯಾಗಿದ್ದು ಸಂಪ್ರದಾಯದಂತೆ ಶೇಂದಿ (ಕಳ್ಳು) ಪೂಜೆಯ ಆದಿಯಿಂದ ಅಂತ್ಯದವರೆಗೂ ಗಡಿಗೆಯಲ್ಲಿ ಇರಬೇಕು. ಪೂಜೆಯ ಅನೇಕ ಹಂತಗಳಲ್ಲಿ ಹಿರಿಯರನ್ನು ನೆನಪಿಸುವ ಕಾರ್ಯ ನಡೆಯುತ್ತದೆ. ಆ ಸಮಯದಲ್ಲಿ ಶೇಂದಿ ಮತ್ತು ಸಾರಾಯಿಯನ್ನು ತೀರ್ಥದ ರೂಪದಲ್ಲಿ ಸ್ವಲ್ಪ ಸ್ವಲ್ಪ ಸ್ವೀಕರಿಸುತ್ತಾರೆ.

೨೦. ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಪು ೧೯೪.

೨೧. 'ಗೇಟ್' ಗೋಂದೋಳು ಪೂಜೆಯ ಪ್ರಮುಖ ಕಲಶ ಪಾತ್ರ. ಮರಾಟಿಗರ ಭಾಷೆಯಲ್ಲಿ ಇದನ್ನು 'ಗೇಟ್' ಎಂದು ಕರೆಯಲಾಗುತ್ತದೆ. ಇದು ಮಣ್ಣಿನಿಂದಲೇ ಮಾಡಿದ್ದಾಗಿರಬೇಕು. ಇತರೆ ಅಲ್ಯುಮಿನಿಯಂ, ಸ್ಟೀಲ್ ಪಾತ್ರೆಗೆ ಅವಕಾಶವಿಲ್ಲ.

೨೨. ಹಿಂದಿನ ಕಾಲದಲ್ಲಿ ಅನೇಕ ಪೂಜೆ, ಧಾರ್ಮಿಕ ವಿಧಿಗಳಲ್ಲಿ ಸ್ಮಶಾನ ಭಸ್ಮವೂ ಒಂದು ಪವಿತ್ರತೆಯನ್ನು ಪಡೆದುಕೊಂಡಿತ್ತು. ತಾಂತ್ರಿಕರಲ್ಲಿ ವಿಶೇಷವಾಗಿ ಕಂಡು ಬರುತ್ತಿತ್ತು. ಕಾಲಕ್ರಮೇಣ ಸ್ಮಶಾನ ಭಸ್ಮ ಸಿಗದಿರಲು ಮನೆಯ ಒಲೆಯ ಭಸ್ಮದಿಂದಲೇ ಪೂಜೆ ಮಾಡುವುದು ರೂಢಿಗೆ ಬಂದಿರಬೇಕು.

೨೩. ಜನಪದರ ಬದುಕಿನಲ್ಲಿ ಹಿಂಗಾರಕ್ಕೆ ಧಾರ್ಮಿಕವಾಗಿ ಸಾಂಸ್ಕೃತಿಕವಾಗಿ ಅತ್ಯಂತ ಮಹತ್ವದ ಸ್ಥಾನವಿದೆ. ಹಿಂಗಾರ (ತುಳು:ಪಿಂಗಾರ) ಸುಂದರವಾದ ಅಡಿಕೆ ಮರದ ಹೂವು. ಹಿಂಗಾರ ಎಂದರೆ ಹೂವಿನ ಗೊಂಚಲು. ಮದುವೆಯಲ್ಲಿ ಮದುವಣಗಿತ್ತಿಗೆ ಸೀಮಂತದಲ್ಲಿ ಗರ್ಭಿಣಿಗೆ ಕಡ್ಡಾಯವಾಗಿ ಹಿಂಗಾರ ಮುಡಿಸುವ ಸಂಪ್ರದಾಯ ಅನೇಕ ಬುಡಕಟ್ಟು, ಸಮುದಾಯಗಳಲ್ಲಿ ರೂಢಿಯಲ್ಲಿದೆ. ಗೋಂದೋಳು ಪೂಜೆಯಲ್ಲಿ ಪ್ರಧಾನ ದರ್ಶನಪಾತ್ರಿ ಹಿಂಗಾರವನ್ನು ದಿವಟಿಗೆಗಳ ಜತೆ ಹಿಡಿದುಕೊಂಡು ಅಭಯ ನೀಡುವುದೇ ಹಿಂಗಾರ ಸೇವೆ. ಇಲ್ಲಿ ಹಿಂಗಾರ ಸಮೃದ್ಧಿಯ ಫಲವಂತಿಕೆಯ ಪ್ರತೀಕವಾಗಿರುವುದು ಕಂಡು ಬರುತ್ತದೆ. ಹಾಗೆಯೇ, ಬತ್ತಿಸೇವೆ. ಬೆಂಕಿ ನಮ್ಮ ಬದುಕಿನಲ್ಲಿ ಮಹತ್ವದ ಸ್ಥಾನವನ್ನು ಪಡೆದಿದೆ ಎಂಬುದರಲ್ಲಿ ಎರಡು ಮಾತಿಲ್ಲ. ಬೆಂಕಿಯನ್ನು ದಾಟುವ ಮೂಲಕ ಪರಿಶುದ್ಧರಾಗುತ್ತೇವೆ ಎಂಬ ನಂಬಿಕೆ ಇದೆ. ದೀಪ ಬೆಳಗಿಸುವ ಮೂಲಕ ಕತ್ತಲನ್ನು ಹೊಡೆದೋಡಿಸುತ್ತೇವೆ ಎನ್ನುವ ನಂಬಿಕೆ ಮಾನವನಷ್ಟೇ ಇತಿಹಾಸವುಳ್ಳದ್ದು. ಬಿಳಿವಸ್ತ್ರದಿಂದ ಮಾಡಿದ ಬತ್ತಿಯನ್ನು ದರ್ಶನಪಾತ್ರಿ ತಲೆಯ ಮೇಲಿಟ್ಟುಕೊಳ್ಳುತ್ತಾನೆ. ಬಾಯಿಯೊಳಗಡೆ ನಂದಿಸುತ್ತಾನೆ. ಕ್ಷಣ ಮಾತ್ರ ಬಾಯಿಯೊಳಗಿಟ್ಟು ಬೆಂಕಿ ಸಮೇತ ಹೊರಗಡೆ ತೆಗೆಯುತ್ತಾನೆ. ಆ ಮುಖೇನ ಭಕ್ತರಲ್ಲಿ ಭಯ ಭಕ್ತಿಯನ್ನುಂಟುಮಾಡುವುದೇ ಇದರ ಉದ್ದೇಶ.

೨೪. ಚಂದ್ರಶೇಖರ ಕಂಬಾರ (ಸಂ) ಜಾನಪದ ವಿಶ್ವಕೋಶ, ಪು ೧೫೧೬.

೨೫. ಡಾ.ಯು.ಪಿ. ಉಪಾಧ್ಯಾಯ (ಪ್ರ.ಸಂ) ತುಳು ನಿಘಂಟು ಪು ೨೪೪೯.

೨೬. ಡಾ.ಎಂ.ಚಿದಾನಂದ ಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪು ೨೨.

೨೭. ಉದ್ಧೃತ ಡಾ. ಶ್ರೀಧರ ಎಚ್.ಜಿ. ೨೦೦೫. ಪು ೫೨.

೨೮. ಡಾ.ಶ್ರೀಧರ ಎಚ್.ಜಿ. ಪು ೪೦.

೨೯. ಭಕ್ತಾದಿಗಳಲ್ಲಿ ಮಕ್ಕಳು ದೊಡ್ಡವರು ಎಲ್ಲರೂ ಇರುತ್ತಾರೆ. ರಕ್ತ ತರ್ಪಣ ನೀಡಿದ ತಕ್ಷಣ ಬೇರೆ ಕಡೆ ಲಕ್ಷ್ಯವಹಿಸಲು, ಸ್ವಾರಸ್ಯಕವಾಗಿ ಹಿರಿಯರು ''ನೋಡಿ ನೋಡಿ, ಇರುವೆಯೊಂದು ಆನೆಯನ್ನು

ಎತ್ತಿಕೊಂಡು ಹೋಗುತ್ತಿದೆ. ಎಂದು ಇತರ ಮರಗಳ ಕಡೆ ಬೆರಳು ತೋರಿಸುತ್ತಾರೆ. ಚಿಕ್ಕ ಮಕ್ಕಳು ಕುತೂಹಲದಿಂದ ಆ ಕಡೆಗೆ ಕಾಣುತ್ತಿಲ್ಲ, ಕಾಣುತ್ತಿಲ್ಲ ಎಂದು ಇಣುಕಿ ಇಣುಕಿ ನೋಡುತ್ತಾರೆ. ಇದು ಒಂದು ರೀತಿಯಲ್ಲಿ ಮಕ್ಕಳನ್ನು ರಕ್ತವನ್ನು ನೋಡಿ ಹೆದರದಂತೆ ಮಾಡುವ ತಂತ್ರ ಎಂದು ಹೇಳಬಹುದು." ಹಾಗೆಯೇ ಅಸಂಭವನೀಯ ಚಿತ್ರಣವನ್ನು ಇಲ್ಲಿ ಗಮನಿಸಬೇಕು.

೩೦. ಮಾಧವ ಕೊಡೆಂಜಿಕಾರ್, ಸ್ಮರಣ ಸಂಚಿಕೆ ೨೦೦೨, ಪು ೧೦.

೩೧. ಪಿ.ಐತಪ್ಪ ನಾಯ್ಕ ಅಡೂರು, ಸ್ಮರಣ ಸಂಚಿಕೆ ೧೯೯೯, ಪು ೩೬.

೩೨. ಇದು ಒಂದು ಜಾತಿಯ ಮೀನು (ಒಣಗಿಸಿದ) ಹೆಚ್ಚಾಗಿ ಎಲ್ಲಾ ಆಚರಣೆಗಳಲ್ಲಿ ಸಂಪ್ರದಾಯದಂತೆ ಒಣಗಿಸಿದ ಮೀನನ್ನೇ ಬಳಸುವುದು ಕಂಡು ಬರುತ್ತದೆ.

೩೩. ಪುರುಷೋತ್ತಮ ಬಿಳಿಮಲೆ, ಸುವರ್ಣ ಜಾನಪದ ಪು ೫೭೮.

೩೪. ಎನ್.ಆರ್. ನಾಯಕ, ಕರಾವಳಿ ಸೋಗುಗಳ ಬಹುರೂಪ, ಪು ೩೨.

೩೫. ಡಾ.ಬಿ.ಎ.ವಿವೇಕ ರೈ, ತೌಳವ ಸಂಸ್ಕೃತಿ, ಪು ೧೧.

೩೬. ಒಂದು ನಿರ್ದಿಷ್ಟ ಸಂಖ್ಯೆಯ ಮನೆತನಗಳು.

೩೭. ಹೋಳಿ ಹಬ್ಬದ ವಿಶಿಷ್ಟ ಉಡುಗೆ-ತೊಡುಗೆಗಳನ್ನು ಧರಿಸಿ ವ್ರತದಿಂದ ನಿಯಮ ಬದ್ಧರಾಗಿ ಗುಂಮ್ಟೆ-ಕೋಲಾಟದಲ್ಲಿ ಕುಣಿಯುವ ತಂಡ ಅಥವಾ ಮೇಳ.

೩೮. ದೇಜಗೌ, ೨೦೦೧, ಜಾನಪದ ಅಧ್ಯಯನ, ೩೭೦

೩೯. ಜನಪದರಲ್ಲಿ ಬುಡಕಟ್ಟು ಸಮುದಾಯಗಳಲ್ಲಿ ಗಣಪತಿಯ ಬಗ್ಗೆ ಮೂರ್ತ ಕಲ್ಪನೆ ಇಲ್ಲ. ಒಂದು ಸೇರು ಅಕ್ಕಿಯ ಮೇಲೆ ಒಂದು ತೆಂಗಿನ ಕಾಯಿ ಇಟ್ಟು ದೀಪ ಬೆಳಗಿದರೆ ಅದುವೇ ಗಣಪತಿ. ಇದನ್ನು 'ಸುತ್ಯೆ ಇಡುವುದು' ಎಂದು ಕರೆಯುತ್ತಾರೆ. ನಂತರದಲ್ಲಿ ವೈದಿಕ ಸಂಸ್ಕೃತಿಯ ಪ್ರಭಾವದಿಂದ ಜನಪದರಲ್ಲಿ ಮೂರ್ತಿಯ ಕಲ್ಪನೆ ಬಂದಿದೆ. ಇಂದಿಗೂ ತುಳುನಾಡಿನಲ್ಲಿ ಸಾಂಪ್ರದಾಯಿಕವಾಗಿ ಎಲ್ಲಾ ಮನೆಗಳಲ್ಲೂ 'ಸುತ್ಯೆ' ಇಟ್ಟು ಪ್ರಾರ್ಥನೆ ಸಲ್ಲಿಸುವುದನ್ನು ಕಾಣುತ್ತೇವೆ. ಜೀವನಾವರ್ತನ ಮತ್ತು ವಾರ್ಷಿಕಾವರ್ತನ ಆಚರಣೆಗಳ ಆರಂಭದಲ್ಲಿ ಹಾಗೂ ಮಹತ್ವದ ಕೆಲಸ ಕಾರ್ಯಗಳ ಆರಂಭದಲ್ಲಿ 'ಸುತ್ಯೆ'ಯ ಮೂಲಕ ಗಣಪತಿಗೆ ಪ್ರಾರ್ಥನೆ ಮಾಡಿದ ನಂತರವೇ ಕೆಲಸ ಕಾರ್ಯವನ್ನು ಮುಂದುವರೆಸುವುದು ಸಂಪ್ರದಾಯ.

೪೦. ಸುಶೀಲಾ ಪಿ., ಉಪಾಧ್ಯಾಯ, ೧೯೯೮, 'ದಕ್ಷಿಣ ಭಾರತದ ಜಾನಪದ' ಪು.೩

೪೧. ಡಾ.ವಾಮನ ನಂದಾವರ, ೨೦೦೧, ಕೋಟಿ ಚೆನ್ನಯ್ಯ ಪು. ೩೨೮

೪೨. ಚೆನ್ನಪ್ಪಗೌಡ ೧೯೯೫, ಭೂತಾರಾಧನೆಯ ಚಲನಶೀಲತೆ ಪು. ೧೮೮

೪೩. ಅಗೆಲು ಎಂದರೆ ಭೂತಕ್ಕೆ ಮಾಂಸದಡುಗೆಯ ಎಡೆಯಿಟ್ಟು ಮಾಡುವ ಅರಾಧನೆ. ಕಷ್ಟ ಕಾಲದಲ್ಲಿ ಭೂತಕ್ಕೆ ಹರಕೆ ಹೇಳಿಕೊಂಡು ಹೇಳಿದ ಕಾರ್ಯ ಈಡೇರಿದಲ್ಲಿ ಅಗೆಲು ಕೊಡುತ್ತಾರೆ. ಹೆಚ್ಚಾಗಿ ಮಂಗಳವಾರ . ಶುಕ್ರವಾರ ಆದಿತ್ಯವಾರಗಳನ್ನು ಈ ಸೇವೆಗೆ ಆಯ್ಕೆ ಮಾಡಿಕೊಳ್ಳುತ್ತಾರೆ.

೪೪. ಅಮೃತ ಸೋಮೇಶ್ವರ, ೧೯೯೨, 'ತುಳು ಪಾಡ್ದನ ಸಂಪುಟ' ಪು.೩೫

* * * * *

## ಅಧ್ಯಾಯ - ೫

# ಭೌತಿಕ ಮತ್ತು ಮೌಖಿಕ ಜಾನಪದ

**ಮನೆ, ರಚನೆ ಮತ್ತು ಪರಿಸರ**

ಯಾವುದೇ ಸಂಸ್ಕೃತಿಯ ಮೇಲೆ ಅದರ ಸುತ್ತ ಮುತ್ತಲ ಪರಿಸರದ ಪ್ರಭಾವ ದಟ್ಟವಾಗಿ ಒಂದಲ್ಲ ಒಂದು ರೀತಿಯಲ್ಲಿ ಆಗಿರುತ್ತದೆ. ಮರಾಟಿಗರು ದಕ್ಷಿಣ ಕನ್ನಡ ಜಿಲ್ಲೆ ಎಲ್ಲಾ ತಾಲೂಕುಗಳಲ್ಲಿ ವಾಸವಾಗಿದ್ದಾರೆ. ಸುಳ್ಯ ಪುತ್ತೂರು ಬಂಟ್ವಾಳ ಬೆಳ್ತಂಗಡಿ ತಾಲೂಕುಗಳಲ್ಲಿ ದಟ್ಟವಾಗಿಯೂ ಮಂಗಳೂರು ತಾಲೂಕಿನಲ್ಲಿ ವಿರಳವಾಗಿಯೂ ಕಂಡುಬರುತ್ತಾರೆ. ಸುಳ್ಯ ತಾಲೂಕು ೪೧ (೪೦+೧) ಗ್ರಾಮಗಳನ್ನು ಹೊಂದಿದ್ದು ಬಹುತೇಕ ಎಲ್ಲಾ ಗ್ರಾಮಗಳಲ್ಲಿ ಮರಾಟಿಗರಿದ್ದಾರೆ. ಪುತ್ತೂರು ತಾಲೂಕು ೭೮ (೭೭+೧) ಗ್ರಾಮಗಳನ್ನು, ಬೆಳ್ತಂಗಡಿ ೮೧ (೮೦+೧) ಮತ್ತು ಬಂಟ್ವಾಳ ತಾಲೂಕು ೮೨ (೭೯+೩) ಗ್ರಾಮಗಳನ್ನು ಒಳಗೊಂಡಿದ್ದು ಮಾರಾಟಿಗರು ಈ ಗ್ರಾಮಗಳಲ್ಲಿ ವಾಸವಾಗಿದ್ದಾರೆ. ಮಂಗಳೂರು ತಾಲೂಕಿನ ೧೦೨ (೮೪ + ೧೪) ಗ್ರಾಮಗಳಲ್ಲಿ ಮರಾಟಿಗರು ವಿರಳವಾಗಿದ್ದಾರೆ.

ಇವರು ವಾಸಿಸುತ್ತಿರುವ ಕರ್ನಾಟಕದ ಕರಾವಳಿ ಮತ್ತು ಅರೆಮಲೆನಾಡು ಭೂಪ್ರದೇಶ ಹಲವಾರು ದೃಷ್ಟಿಗಳಿಂದ ತುಂಬಾ ಮಹತ್ವವಾದುದು. ಕೃಷಿಯ ಹಿನ್ನೆಲೆಯಲ್ಲಿ ಇಲ್ಲಿನ ಫಲವತ್ತಾದ ಮಣ್ಣಿನಲ್ಲಿ ಅನೇಕ ವಾಣಿಜ್ಯ ಬೆಳೆಗಳನ್ನು ಸಾಂಬಾರ ಬೆಳೆಗಳನ್ನು ಬೆಳೆಸಲು ಅನುಕೂಲಕರವಾಗಿದೆ. ಹೆಚ್ಚಾಗಿ ಗುಡ್ಡ ಬೆಟ್ಟಗಳಿಂದ ಕೂಡಿದ ಈ ಪ್ರದೇಶದಲ್ಲಿ ನದಿ, ಹಳ್ಳ, ತೋಪುಗಳು ನೀರಿನ ಆಶ್ರಯವನ್ನು ನೀಡುತ್ತಿವೆ. ಜೊತೆಗೆ ಮಳೆ ಪ್ರಮಾಣ ರಾಜ್ಯದ ಇತರ ಪ್ರದೇಶಗಳಿಗೆ ಹೋಲಿಸಿದರೆ ಹೆಚ್ಚಾಗಿವೆ.

ಮರಾಟಿಗರು ಸಾಮಾನ್ಯವಾಗಿ ಎರಡು ಅಥವಾ ನಾಲ್ಕು ಛಾವಣಿಯ (ಮಾಡು) ಮನೆಗಳಲ್ಲಿ ವಾಸಿಸುತ್ತಾ ಬಂದಿದ್ದಾರೆ. ಹಿಂದಿನ ಕಾಲದಲ್ಲಿ ಕಾಡಿನ ಅಂಚಿನಲ್ಲಿ ಗುಡ್ಡಗಳ ಮೇರೆಗಳಲ್ಲಿ ಚಿಕ್ಕ ಚಿಕ್ಕ ಗುಡಿಸಲುಗಳನ್ನು ರಚಿಸಿ ವಾಸಿಸುತ್ತಿದ್ದರು. ಅಂದಿನ ವಸತಿಗೆ ಮುಖ್ಯವಾಗಿ ಮುಳಿ ಹುಲ್ಲನ್ನು ಬಳಸುತ್ತಿದ್ದರು. ಹಿಂದಿನ ಮನೆಗಳನ್ನು ನೋಡಿದರೆ ಕೆಲವು ಮನೆಗಳಲ್ಲಿ ಒಂದೇ ದೊಡ್ಡ ಕೋಣೆಯಿದ್ದು ಅದರ ಮಧ್ಯೆ ಅರ್ಧದವರೆಗೆ ಮಣ್ಣಿನ ಗೋಡೆ ಅಥವಾ ತೆಂಗಿನ ಗರಿಯ ತಡಿಕೆಯಿಂದ ಬೇರ್ಪಡಿಸುತ್ತಾರೆ. ಪ್ರತಿಯೊಂದು ಮನೆಗೂ ಜಗುಲಿಯಿರುತ್ತಿತ್ತು. ಜಗುಲಿಯ

ಒಂದು ಭಾಗ ಬಂದ ಅತಿಥಿಗಳಿಗೆ ಕುಳಿತುಕೊಳ್ಳಲು ಸ್ಥಳಾವಕಾಶವಿದ್ದರೆ ಮತ್ತೊಂದು ಭಾಗದಲ್ಲಿ ಭತ್ತ ಕುಟ್ಟುವ ಒರಳು (ತುಳು: ನೆಲಕ್ಕುರಿ) ಇರುತ್ತಿತ್ತು.

ಅಡುಗೆ ಕೋಣೆಯಲ್ಲಿ ಅಡುಗೆ ಮಾಡಲು ಮತ್ತು ಮಲಗಲೂ ಕೂಡ ಸ್ಥಳಾವಕಾಶವಿರುತ್ತಿತ್ತು. ಬಹುತೇಕ ಮನೆಗಳಲ್ಲಿ ಪೂರ್ವ ದಿಕ್ಕಿಗೆ ಒಲೆಯಿದ್ದು ಅದರ ಮೇಲ್ಗಡೆ 'ದೆಂಗ' (ಮರಾಠಿ-ಉತ್ತು)ದ ರಚನೆಯಿರುತ್ತದೆ. ತುಳುನಾಡಿಗೆ ಸಂಬಂಧಿಸಿದಂತೆ ಈ 'ದೆಂಗ' ವಿಶಿಷ್ಟವಾದುದು. ದೆಂಗದ ಕೆಳಗಡೆ ಯಾವಾಗಲೂ ಒಲೆ ಉರಿಯುತ್ತಿದ್ದರೆ ಮೇಲ್ಗಡೆ ಇರಿಸಿದ ಆಹಾರ ಪದಾರ್ಥಗಳು, ಅಡಿಕೆ, ಬಿತ್ತುವದಕ್ಕಾಗಿ ಇರಿಸಿದ ವಿವಿಧ ಕಾಯಿ ಪಲ್ಯೆಗಳ ಬೀಜಗಳು ಯಾವುದೇ ರೀತಿಯಲ್ಲಿ ಕೊಳೆತುಹೋಗದೆ ಇರಲು ಸಹಕಾರಿಯಾಗಿದೆ. ಪ್ರತಿಯೊಂದು ಮನೆಯಲ್ಲಿಯೂ ಈ 'ದೆಂಗ'ದ ರಚನೆಯನ್ನು ಕಾಣಬಹುದು. ಒಲೆ ಮತ್ತು ಅಟ್ಟದ ಮಧ್ಯೆ ದೆಂಗವಿದ್ದು ವಿಶೇಷ ಭೋಜನವಿದ್ದಾಗ ಗತಿಸಿದ ಹಿರಿಯರಿಗೆ ಮೊತ್ತಮೊದಲು ತಯಾರಿಸಿದ ಅಡುಗೆಯನ್ನು ಸ್ವಲ್ಪ ದೆಂಗದಲ್ಲಿರಿಸುತ್ತಾರೆ. ಛಾವಣೆಗೆ ತೂಗು ಹಾಕಿದ ವಿವಿಧ ಹಗ್ಗಗಳಿಂದ ತಯಾರಿಸಿದ ಸಿಕ್ಕ (ತುಳು: ಬಲ) ಗಳಿರುತ್ತವೆ. ಇದರಲ್ಲಿ ಹಾಲು ಮೊಸರುಗಳನ್ನು ಬೆಕ್ಕುಗಳ ಕೈಗೆ ಸಿಗದಂತೆ ಇಡುತ್ತಿದ್ದರು. ಸಿಕ್ಕಗಳು ಇಂದಿಗೂ ಜಿಲ್ಲೆಯ ಗ್ರಾಮೀಣ ಪ್ರದೇಶದ ಮನೆಗಳಲ್ಲಿ ಇವೆ. ಬಹುತೇಕ ಮರಾಟಿಗರ ಮನೆಯಲ್ಲಿ ಮಣ್ಣಿನ ಮಡಕೆಗಳಿಂದಲೇ ಅಡುಗೆ ತಯಾರಿಸುತ್ತಾರೆ. ಮಣ್ಣಿನ ಮಡಕೆಗೆ ಮರಾಟಿಗರು ಅತ್ಯಂತ ಉನ್ನತ ಸ್ಥಾನವನ್ನು ನೀಡುತ್ತಾರೆ. ಮಾನವನ ಇತಿಹಾಸದಲ್ಲಿ ಮಡಕೆ ವಿಶೇಷ ಮಹತ್ವವನ್ನು ಹೊಂದಿಕೊಂಡೇ ಬಂದಿದೆ. ಈಗಲೂ ಉತ್ಖನನ ಮಾಡುವಾಗ ದೊರಕುವ ಮಡಕೆಗಳ ಚೂರು-ಪಾರುಗಳು ಅವುಗಳ ಇತಿಹಾಸ ಗಟ್ಟಿತನಗಳನ್ನು ನಿರೂಪಿಸಿ ನಮ್ಮನ್ನು ಬೆರಗುಗೊಳಿಸುತ್ತವೆ. ಸಂಪೂರ್ಣ ಪ್ರಕೃತಿಜನ್ಯವಾದ ಮಡಕೆ-ಗಡಿಗೆಗಳು ಭಾರತದ ಗ್ರಾಮ್ಯ ಬದುಕಿನ ಅವಿಭಾಜ್ಯ ಅಂಗಗಳಾಗಿವೆ. ಮರಾಟಿಗರಲ್ಲಿ ಹುಟ್ಟಿನಿಂದ ಸಾಯುವ ತನಕ ಮಣ್ಣಿನ ಮಡಕೆಗಳಿಗೆ ವಿಶೇಷ ಮಹತ್ವವಿದೆ. ಮಣ್ಣಿನ ಮಡಕೆಗಳಲ್ಲಿ ತಯಾರಿಸಿದ ಆಹಾರದ ರುಚಿಗೆ ಇಂದಿನ ಆಧುನಿಕ ಪಾತ್ರೆಗಳಲ್ಲಿ ಬೇಯಿಸಿದ ಆಹಾರದ ರುಚಿ ಯಾವುದೇ ರೀತಿಯಲ್ಲಿ ಸರಿಸಾಟಿಯಾಗಲಾರದು ಎಂದು ಜನಪದರ ಅನುಭವದ ಮಾತು.

ಮನೆಗಳಲ್ಲಿ ಮಣ್ಣಿನ ಮಡಕೆಗಳನ್ನು ಉಪಯೋಗಿಸುವ ಸಂದರ್ಭದಲ್ಲಿ ಒಡೆದು ಹೋಗದಂತೆ ಮಡಕೆಯ ಕೆಳಗಡೆ ಬೈಹುಲ್ಲಿನಿಂದ ತಯಾರಿಸಿದ ಸಿಂಬಿ (ತುಳು : ಚೆರಿಯ) ಯನ್ನು ಉಪಯೋಗಿಸುತ್ತಾರೆ. ಪಾತ್ರೆಗಳನ್ನಿಡಲು ಗೋಡೆಗೆ ಎರಡು ಮರದ ಚಿಕ್ಕ ಕೋಲುಗಳನ್ನಿಟ್ಟು ಅದರ ಮೇಲೆ ಮರದ ಹಲಗೆಯಿಡುತ್ತಾರೆ. ಕೋಲುಗಳು ಉದ್ದವಿದ್ದು ಅದರಲ್ಲಿ ಏನನ್ನಾದರೂ ನೇತಾಡಬಹುದು ಅದನ್ನು 'ಮದನಕ್ಕೆ' ಎಂದು ಕರೆಯುತ್ತಾರೆ. ಹಿಂದೆ ರಾಗಿಯನ್ನು ಉಪಯೋಗಿಸುತ್ತಿದ್ದ ಇವರು ಮನೆಯಲ್ಲಿ ರಾಗಿ ಕಲ್ಲುಗಳನ್ನು ಇಟ್ಟಿರುತ್ತಿದ್ದರು. ಆದರೆ ಇಂದು ಯಾರೂ ರಾಗಿಯನ್ನು ಬಳಸುತ್ತಿಲ್ಲ. ಅಕ್ಕಿ ರುಬ್ಬಲು, ಪಲ್ಯ ಪದಾರ್ಥಕ್ಕೆ, ಸಾಂಬಾರ ಪದಾರ್ಥಗಳನ್ನು ಪುಡಿಮಾಡಲು ಕಡೆಯುವ ಕಲ್ಲನ್ನು ಉಪಯೋಗಿಸುತ್ತಾರೆ. ಇಂತಹ ಕಡೆಯುವ ಕಲ್ಲು ಪುತ್ತೂರು ತಾಲೂಕಿನ 'ಸಂಪ್ಯ' ಎಂಬಲ್ಲಿ ಇಂದಿಗೂ ತಯಾರಿಸುತ್ತಿದ್ದಾರೆ.

ಅನೇಕ ಮನೆಗಳಲ್ಲಿ ಒಂದೆರಡು 'ಕೋಲು' (ಎರಡು ಮೊಳ) ಎತ್ತರಕ್ಕೆ ಮಣ್ಣಿನ ಗೋಡೆ ನಿರ್ಮಿಸಿ ನಂತರ ತೆಂಗಿನ ಗರಿಯಿಂದ ತಟ್ಟಿಗಳನ್ನು ಹೆಣೆದು ಅಥವಾ ಬಿದಿರಿನ ದಬ್ಬೆಗಳನ್ನು ಒಡೆದು ಬಿಡಿಸಿ ಕಟ್ಟುತ್ತಿದ್ದರು. ಆ ಮೂಲಕ ಗಾಳಿ ಮಳೆಯನ್ನು ತಡೆಯುತ್ತಿದ್ದರು. ಇಂದು ಬಹುತೇಕ ಮನೆಗಳು ಸಂಪೂರ್ಣ ಮಣ್ಣಿನ ಗೋಡೆಯಿಂದ ನಿರ್ಮಿಸಲ್ಪಡುತ್ತಿವೆ. ಹಂತಾನು ಹಂತವಾಗಿ ಮನೆಯ ರಚನೆಯಲ್ಲಿ ಪರಿಕರಗಳು ಬದಲಾವಣೆಯಾಗುತ್ತಲೇ ಬಂದಿದೆ. ಒಂದು ಕಾಲದಲ್ಲಿ ಅಡಿಕೆ ಸೋಗೆ (ಗರಿ) ಗಳನ್ನು ಮನೆಯ ಛಾವಣಿಗೆ ಉಪಯೋಗಿಸುತ್ತಿದ್ದರೆ ಅದರ ನಂತರ ಅಭಿವೃದ್ಧಿಯಾಗಿ ಮುಳಿಹುಲ್ಲು ಬಳಕೆಗೆ ಬಂತು. ಇಂದು ಆರ್‌ಸಿಸಿ ಮನೆಗಳೂ ಮರಾಟಿಗರ ಪಾಲಿನದ್ದಾಗಿವೆ.

ಸ್ನಾನದ ಮನೆ, ಕೊಟ್ಟಿಗೆ, ಹಟ್ಟಿ ಮನೆಯಿಂದ ಪ್ರತ್ಯೇಕವಾಗಿರುತ್ತವೆ. ಹಿಂದಿನಿಂದಲೂ ಇವರು ಪಶು ಸಂಗೋಪನೆಯಲ್ಲಿ ನಿಷ್ಣಾತರು. ಕಾರಣ ಬೇಸಾಯ, ಗೊಬ್ಬರಗಳಿಗಾಗಿ ದನ ಕರು ಎತ್ತುಗಳನ್ನೇ ಆಶ್ರಯಿಸುತ್ತಿದ್ದರು. ಮನೆಯ ಸನಿಹದಲ್ಲಿಯೇ ಹಟ್ಟಿಯನ್ನು ಕಟ್ಟಿರುತ್ತಾರೆ. ಸ್ನಾನದ ಮನೆ ಇಲ್ಲದಿದ್ದರೂ ತೆಂಗಿನ ಗರಿ ಮತ್ತು ಅಡಿಕೆ ಗರಿಗಳನ್ನು ಉಪಯೋಗಿಸಿ ಸ್ವಲ್ಪ ಮರೆ ಮಾಚಿದಂತೆ ರಚಿಸಿರುತ್ತಾರೆ. ಅದು ಬೇಸಿಗೆ ಕಾಲದಲ್ಲಿ ಮಾತ್ರ ಉಪಯೋಗಕ್ಕೆ ಬರುತ್ತದೆ. ಮಳೆಗಾಲದಲ್ಲಿ ಜಿಲ್ಲೆಯಲ್ಲಿ ವಿಪರೀತ ಮಳೆ ಬರುತ್ತಿರುವುದರಿಂದ ಮನೆಯಿಂದ ಹೊರಗೆ ಸ್ನಾನ ಮಾಡಲು ಕಷ್ಟಸಾಧ್ಯ.

**ಮನೆಯ ರಚನೆ ಮತ್ತು ಗೃಹಪ್ರವೇಶ**

ಮರಾಟಿಗರು ಮನೆಕಟ್ಟಲು ಆರಂಭಿಸುವುದಕ್ಕೆ ಮೊದಲು ಸೂಕ್ತವಾದ ಸ್ಥಳವನ್ನು ಆಯ್ಕೆಮಾಡುತ್ತಾರೆ. ಊರಿನಲ್ಲಿ ಸರಿಯಾದ ಸೂಕ್ತವಾದ ಸ್ಥಳವನ್ನು ನೋಡುವವರಿರುತ್ತಾರೆ. ಅಥವಾ ಜೋಯಿಸರಿರುತ್ತಾರೆ. ಅವರನ್ನು ಕರೆಸಿ ಒಂದು ಒಳ್ಳೆಯ ಜಾಗವನ್ನು ಆಯ್ದುಕೊಂಡು ಮನೆರಚನೆಗೆ ಮುಂದಾಗುತ್ತಾರೆ. ಮನೆಕಟ್ಟುವ ಸ್ಥಳದಲ್ಲಿ ನಾಗಬನ, ಸ್ಮಶಾನ, ಇನ್ನಿತರ ದೈವಗಳ ಆವಾಸ ಸ್ಥಳಗಳನ್ನು ಹೊರತು ಪಡಿಸಿ ಆಯ್ಕೆಮಾಡುವಲ್ಲಿ ಮುತುವರ್ಜಿ ವಹಿಸುತ್ತಾರೆ. ಜಿಲ್ಲೆಯ ಇತರ ಸಮುದಾಯದವರೂ ಕೂಡ ಪರಿಣಿತರ ಮಾತಿನಂತೆ ಇಂತಿಷ್ಟು ಅಳತೆಯ ಮನೆಯನ್ನು ರಚಿಸುತ್ತಾರೆ. ಅಳತೆಯು ಸಾಮಾನ್ಯವಾಗಿ ಕೈಕೋಲ (ಕೈ ಎರಡು ಮೊಳ= ಒಂದು ಕೋಲು)ನ್ನು ಅವಲಂಬಿತವಾಗಿರುತ್ತದೆ. ಶಾಸ್ತ್ರೋಕ್ತವಾಗಿ 'ಆಯ'ದ ಲೆಕ್ಕಚಾರದಲ್ಲಿ ಮನೆಯೊಳಗಿನ ಕೋಣೆ ರಚನೆಯಾಗಿರುತ್ತವೆ.

ನಿಗದಿತ ಶುಭ ಸಂದರ್ಭದಲ್ಲಿ ಮನೆ ಕೆಲಸಗಾರರು, ಮನೆಯ ಹಿರಿಯರು ಸದಸ್ಯರೆಲ್ಲರ ಸಮ್ಮುಖದಲ್ಲಿ ಮೊದಲು ಸುತ್ತೆ ಇಡುತ್ತಾರೆ. ಗಣಪತಿಯ ಹೆಸರಿನಲ್ಲಿ ದೀಪ ಉರಿಸಿ ಒಂದು ಬಾಳೆಲೆಯಲ್ಲಿ ಪುಂಡಿ ಅರಿ (ಎರಡು ಕೈಯಲ್ಲಿ ಹಿಡಿದ ಅಕ್ಕಿ) ಮತ್ತು ತೆಂಗಿನ ಕಾಯಿ ವೀಳ್ಯದೆಲೆ ಅಡಿಕೆ ಇಟ್ಟು ಪ್ರಾರ್ಥಿಸಲಾಗುತ್ತದೆ. ತೆಂಗಿನಕಾಯಿ ಒಡೆಯಲಾಗುತ್ತದೆ. ಒಡೆದ ತೆಂಗಿನ ಕಾಯಿಯನ್ನು ನೆರೆದವರು ತಿನ್ನುತ್ತಾರೆ. ಮನೆಗೆ ತರಲು ನಿಷೇಧವಿದೆ. ಜಾಗ ನೋಡಿ 'ಕುತ್ತಿ'(ತುಳು: ಕುಟ್ಟಿ) ಹಾಕುವವರು ಮನೆ ನಿರ್ಧರಿಸಿದ ಸ್ಥಳದಲ್ಲಿ ಹಲಸಿನ ಕುತ್ತಿ (ಕೋಲು)ಯನ್ನು ನೆಡುತ್ತಾನೆ. ಅದಕ್ಕೆ ಬಂಗಾರ ಹಾಕಿ ಹಾಲು ಮತ್ತು ಎಳನೀರು (ಸೀಯಾಳ)ನ್ನು ಸುರಿಯಲಾಗುತ್ತದೆ. ಇಲ್ಲಿ ಬಂಗಾರ ಪವಿತ್ರತೆಯ ಸಂಕೇತ ಹಾಗೆಯೇ ಹಾಲು, ಎಳನೀರು ಸಮೃದ್ಧಿಯ ಸಂಕೇತ. ಪವಿತ್ರತೆ ಮತ್ತು ಸಮೃದ್ಧಿಯ

ಮಿಲನದೊಂದಿಗೆ ಮನೆಯಲ್ಲಿ ವಾಸಿಸುವವರು ಉತ್ತರೋತ್ತರ ಸುಖಶಾಂತಿಯೊಂದಿಗೆ ಅಭಿವೃದ್ಧಿಯನ್ನು ಪಡೆಯಲಿ ಎಂಬ ಆಶಯ ಇವರದ್ದು. ಇದನ್ನು ಕುತ್ತಿ ಪೂಜೆ (ಕುಟ್ಟಿಪೂಜೆ) ಎಂದು ಕರೆಯಲಾಗುತ್ತದೆ.

ಜಿಲ್ಲೆಯ ಬಹುತೇಕ ಮರಾಟಿಗರು ಮಣ್ಣಿನ ಗೋಡೆಯ ಮೂಲಕವೇ ಮನೆ ರಚಿಸಿರುವದನ್ನು ಕಾಣಬಹುದು. ಇತ್ತೀಚೆಗೆ ಮಣ್ಣಿನ ಇಟ್ಟಿಗೆ, ಮುರಕಲ್ಲು (ಲ್ಯಾಟರೈಟ್) ಉಪಯೋಗಿಸುವ ಹಂತಕ್ಕೆ ತಲುಪಿದ್ದಾರೆ. ಮಣ್ಣನ್ನು ನೀರು ಹಾಕಿ ಕಾಲಿನಿಂದ ಕಲಸಿ ಹುಳಿಬರಿಸಿ ಒಂದು ಹದಕ್ಕೆ ಬಂದ ನಂತರ ಉಂಡೆತರಹ ಮಾಡಿ ನುರಿತವರು ಗೋಡೆ ಕಟ್ಟುತ್ತಾರೆ. ದಿನ ಬಿಟ್ಟು ಒಣಗಿದ ನಂತರ ಮರದ ಮಣೆ (ತುಳು : ಪೊಲಿಮ್ಮಣೆ) ಯಿಂದ ಗಟ್ಟಿಗೊಳಿಸಲಾಗುತ್ತದೆ. ಪ್ರತಿ ಮನೆಯಲ್ಲಿ ತೊಲೆಹಾಕಿ ಅಟ್ಟದ ರಚನೆ ಇದ್ದೇ ಇರುತ್ತದೆ. ತೆಂಗಿನ ಮತ್ತು ತಾಳೆ ಮರವನ್ನು ಜೊತೆಯಾಗಿ ಒಂದೇ ಮನೆ ರಚನೆಯಲ್ಲಿ ಬಳಸಲು ನಿಷೇಧವಿದೆ. ಹಾಗೆಯೇ ಕಾಸರಕನ ಮರ ಮನೆಗೆ ಉಪಯೋಗಿಸಬಾರದೆಂಬ ನಂಬಿಕೆಯಿದೆ. ವಿವಿಧ ಜಾತಿಯ ಮರಗಳ ಅಭಾವವಿರುದರಿಂದ ಮತ್ತು ಅಷ್ಟು ಅನುಕೂಲಸ್ಥರಾಗದೇ ಇರುವವರು ಬಿದಿರುಗಳನ್ನು ಉಪಯೋಗಿಸಿ ಮನೆಯ ಮಾಡು ರಚಿಸಿ ಹಂಚು ಹಾಕುವುದು ಕಂಡುಬರುತ್ತದೆ.

ಕರಾವಳಿ ಪ್ರದೇಶದಲ್ಲಿನ ಮರಾಟಿಗರಿಗೆ ತಮ್ಮ ಮನೆಯ ಮುಂದೆ ತುಳಸಿ ಗಿಡವಿರಬೇಕೆಂದು ಹೇಳುತ್ತಾರೆ. ವಿಶಿಷ್ಟ ರೀತಿಯಲ್ಲಿ ತುಳಸಿ ಕಟ್ಟೆಯನ್ನು ಕಟ್ಟುತ್ತಾರೆ. ಕೆಲವು ಕುಟುಂಬದಲ್ಲಿ ಹೊಸ ಅಕ್ಕಿ ಊಟ (ಪುದ್ವಾರ್)ದ ದಿನದಂದು ತುಳಸಿ ಪೂಜೆಕೂಡ ನಡೆಯುತ್ತದೆ. ಇಡೀ ಭರತಖಂಡದಲ್ಲಿಯೇ ತುಳಸಿಗಿರುವ ಮಾನ್ಯತೆ ಬೇರೆ ಗಿಡಕ್ಕಿಲ್ಲ. ತುಳಸಿ ಗಿಡವಿರುವ ಕಡೆ ಭೂತ ಪ್ರೇತಾದಿ ದುಷ್ಟಶಕ್ತಿಗಳು ಸುಳಿಯುವುದಿಲ್ಲವೆಂಬ ನಂಬಿಕೆಯಿದೆ. ತುಳಸಿಕಟ್ಟೆಯ ಮುಂದೆ. ಪ್ರಾರ್ಥಿಸಿ ಶಾಪ ಹಾಕಿದರೆ ಶಾಪ ತಟ್ಟುತ್ತದೆ ಎಂಬ ನಂಬಿಕೆ ಮರಾಟಿಗರಲ್ಲಿದೆ. ಪ್ರತಿ ಮನೆಯಲ್ಲಿಯೂ ಪ್ರತಿದಿನ ತುಳಸಿ ಗಿಡಕ್ಕೆ ನೀರು ಹಾಕಿ ಮೂರು ಸುತ್ತು ಪ್ರದಕ್ಷಿಣೆ ಬಂದು ಕೈಮುಗಿಯುವ ಸಂಪ್ರದಾಯವಿದೆ. ರಾತ್ರಿ ದೇವರಿಗೆ ದೀಪವಿಟ್ಟು ಶಂಖನಾದ ಮಾಡುವ ಸಂದರ್ಭದಲ್ಲಿಯೂ ತುಳಸಿಕಟ್ಟೆಗೆ ದೀಪವಿರಿಸುವುದೂ ಇದೆ. ಗೋಂದೋಳು ಪೂಜೆಯ ಪೂಜಾರಿಗಳು (ಗುರುಮಾರಿಕೆ ಇರುವವರು) ಪ್ರತಿದಿನ ಬೆಳಿಗ್ಗೆ ತುಳಸಿ ಗಿಡಕ್ಕೆ ನಮಿಸಿ ವಿಭೂತಿ ಹಚ್ಚಿಕೊಳ್ಳುವ ಶಾಸ್ತ್ರ ಮಾಡುತ್ತಾರೆ. ವೈಜ್ಞಾನಿಕವಾಗಿಯೂ, ತುಳಸಿ ಗಿಡ ಒಂದು ಔಷಧಿಯ ಗಿಡವಾಗಿಯೂ ದೃಢಪಟ್ಟಿದೆ. ಒಂದು ಮನೆಯಲ್ಲಿ ತುಳಸಿ ಕಟ್ಟೆ, ತುಳಸಿ ಗಿಡ ಅವಿಭಾಜ್ಯ ಅಂಗವೆಂದು ಇವರು ನಂಬಿದ್ದಾರೆ.

### ಗೃಹ ಪ್ರವೇಶ

ಗೃಹ ಪ್ರವೇಶ (ಇಲ್ಲ್ ಒಕ್ಕೆಲ್)ವನ್ನು ನಡೆಸಲು ಒಂದು ನಿಗದಿತ ದಿನವನ್ನು ಗೊತ್ತುಪಡಿಸುತ್ತಾರೆ. ಗೃಹಪ್ರವೇಶದ ಹಿಂದಿನ ರಾತ್ರಿ ಕುತ್ತಿಪೂಜೆ (ಕುಟ್ಟಿಪೂಜೆ) ನಡೆಯುತ್ತದೆ. ಅಂದು ಮನೆಯ ರಚನೆಯಲ್ಲಿ ಕೆಲಸಗಾರರಾಗಿ ಬಂದಂಥರವರನ್ನು ಉಡುಗೊರೆ ನೀಡಿ ಗೌರವಿಸಲಾಗುತ್ತದೆ. ಆ ಮೂಲಕ ಮನೆ ರಚನೆಯಲ್ಲಿ ದುಡಿದ ಕೆಲಸಗಾರರ ಜೊತೆ ಸೌಹಾರ್ದ ಸಂಬಂಧವನ್ನು ಇಟ್ಟುಕೊಳ್ಳುತ್ತಾರೆ. ಮನೆ ಕಟ್ಟುವ ಸಂದರ್ಭದಲ್ಲಿ ಯಾವುದೇ ರೀತಿಯಲ್ಲಿ ಮನೆಯವರಿಗೂ ಕೆಲಸಗಾರರಿಗೂ ಜಗಳ, ವೈಷಮ್ಯ ನಡೆಯಬಾರದು, ಅಂತಹ ಸನ್ನಿವೇಶ ಜರುಗಿದರೆ ಮನೆಯಲ್ಲಿ



ಒಲೆಯ ಮೇಲಿರುವ 'ದೆಂಗ' ದ ರಚನೆ



ಮನೆಯೊಳಗೆ ಒಲೆಯ ರಚನೆ

ವಾಸವಾಗಿರುವವರು ನೆಮ್ಮದಿಯಿಂದಿರುವುದಿಲ್ಲ ಎಂಬ ಭಾವನೆಯಿದೆ. ಅಂದು ರಾತ್ರಿ ಮನೆಯ ನಾಲ್ಕು ಮೂಲೆಗಳಲ್ಲಿ 'ಕೋಲ್‌ತ್ರಿ' ಯನ್ನಿಟ್ಟು ಎಂಟು ದಿಕ್ಕುಗಳಲ್ಲಿ ಎಂಟು ಬಾಳೆಲೆಯಲ್ಲಿ ಅಕ್ಕಿ ಹೊದ್ಲು, ಅವಲಕ್ಕಿ ಬೆಲ್ಲವನ್ನು ಬಡಿಸಲಾಗುತ್ತದೆ. ಹೊಸ್ತಿಲ ಎದುರು ಎಲೆಯಲ್ಲಿ ಅನ್ನವನ್ನಿಡುತ್ತಾರೆ. ಮನೆ ಕೆಲಸ ಮಾಡಿದ ಆಚಾರಿಯು ಬಳಸಿದ ಪರಿಕರ (ಉಳಿ) ದಿಂದಲೇ ಒಂದು ಕೋಳಿಯನ್ನು ಬಲಿಕೊಡುತ್ತಾನೆ. ಅದರ ರಕ್ತ ಎಲೆಯ ಅನ್ನದ ಮೇಲೆ ಬೀಳುವಂತೆ ಮಾಡಲಾಗುತ್ತದೆ.

ಬಲಿಕೊಡುವ ಮೂಲಕ ಇತರ ಶಕ್ತಿಗಳನ್ನು ತೃಪ್ತಿ ಪಡಿಸಲಾಗುತ್ತದೆ. ಮನೆಯ ಸುತ್ತಲೂ ಛಾವಣಿಯ ಕೆಳಗಡೆ 'ಚೆನ್ನೆರೆ' ಬಳ್ಳಿಯನ್ನು, ನೂಲನ್ನು ಸುತ್ತಲಾಗುತ್ತದೆ. ಚೆನ್ನೆರೆ ಬಳ್ಳಿಯು ಹೊರಗಿನ ಶಕ್ತಿಗಳನ್ನು ತಡೆಯುತ್ತದೆ ಎಂಬ ನಂಬಿಕೆಯಿದೆ. ಮೇಸ್ತ್ರಿ, ಆಚಾರಿ (ಮರದ ಕೆಲಸಗಾರ) ಮತ್ತು ಇತರೆ ಕೆಲಸಗಾರರಿಗೆ ವಸ್ತ್ರ, ಪಾತ್ರೆಗಳನ್ನು ಉಡುಗೊರೆ ಕೊಡುವ ಮೂಲಕ ಗೌರವಿಸಲಾಗುತ್ತದೆ. ಕುತ್ತಿಪೂಜೆಗೆ ಬಳಸಿದ ಅಕ್ಕಿ, ತೆಂಗಿನ ಕಾಯಿ ಆಚಾರಿಗೆ ಸಲ್ಲುತ್ತದೆ. ಮನೆಯೊಳಗಡೆ ದೀಪ ಬೆಳಗಿಸಿ ಯಾವುದೇ ಕಷ್ಟನಷ್ಟಗಳು ಉಂಟಾಗದೇ ನೆಮ್ಮದಿಯಿಂದ ಅಭಿವೃದ್ಧಿ ಹೊಂದುವಂತೆ ಮಾಡಬೇಕೆಂದು ದೇವರಲ್ಲಿ ಪ್ರಾರ್ಥಿಸುತ್ತಾರೆ. ಹೊಸದಾಗಿ ಕಟ್ಟಿದ ಮನೆಯೊಳಗಡೆ ಪ್ರಥಮವಾಗಿ ದನಕರುವನ್ನು ಎದುರು ಬಾಗಿಲಿನಿಂದ ಬರಿಸಿ ಹಿಂದಿನ ಬಾಗಿಲಿನಿಂದ ಹೊರಗೆ ತರುತ್ತಾರೆ. ಆ ಮೂಲಕ 'ಕಾಮಧೇನು' ವಿನ ಸಂಕೇತವಾದ ದನ ಮನೆ ಪ್ರವೇಶಿಸಬೇಕೆಂದು ಮರಾಟಿಗರು ನಂಬಿದ್ದಾರೆ. ದನಕರು ಮನೆಯೊಳಗಡೆ ಪ್ರಸಾದ ರೂಪದಲ್ಲಿ ಕೊಟ್ಟಂತಹ ಅವಲಕ್ಕಿ ಬಾಳೆಹಣ್ಣು ತಿಂದು ಮೂತ್ರ ಮಾಡಿ ಸೆಗಣಿ ಹಾಕಿದರೆ ಒಳ್ಳೆಯದಾಗುತ್ತದೆ ಎಂಬ ಭಾವನೆ ಇವರಲ್ಲಿ ಮನೆಮಾಡಿದೆ. ಅಂಗಳದಲ್ಲಿ ಹರಿವಾಣದಲ್ಲಿ ಬೆಳ್ತಿಗೆ ಅಕ್ಕಿ ಕುಂಕುಮ ನಾಣ್ಯ ಮತ್ತು ಹೂವುಗಳನ್ನಿಟ್ಟು ಮಧ್ಯದಲ್ಲಿ ದೀಪವಿರಿಸುತ್ತಾರೆ. ಪಕ್ಕದಲ್ಲಿ ಸುಣ್ಣದ ಮಡಕೆ, ಉಪ್ಪಿನ ಪಾತ್ರೆ, ನೀರಿನ ಪಾತ್ರೆ, ಕನ್ನಡಿ, ಹಾಲು, ಹಾಲು ಕುದಿಸುವ ಪಾತ್ರೆಗಳನ್ನು ಶಾಸ್ತ್ರೋಕ್ತವಾಗಿ ಇಡುತ್ತಾರೆ. ಮನೆಯ ಹಿರಿಯರು ಎಲ್ಲರ ಉಪಸ್ಥಿತಿಯಲ್ಲಿ ಒಂದೊಂದು ವಸ್ತುಗಳನ್ನು ಹಿಡಿದು ಮನೆಗೆ ಮೂರು ಸಾರಿ ಪ್ರದಕ್ಷಿಣೆ ಬಂದು ಮನೆಯನ್ನು ಪ್ರವೇಶಿಸುತ್ತಾರೆ. ಅವರ ಹಿಂದೆ ಮನೆಯ ಸದಸ್ಯರೆಲ್ಲರೂ ಇತರೆ ಪಾತ್ರೆ ವಸ್ತುಗಳನ್ನು ಹಿಡಿದು ಮನೆಯನ್ನು ಪ್ರವೇಶಿಸುತ್ತಾರೆ. ಮುತ್ತೈದೆಯರು ಹೊಸಮನೆಯ ಒಲೆಯ ಮೇಲೆ ಹಲಸಿನ ಕಟ್ಟಿಗೆಗಳನ್ನು ಉರಿಸಿ ಹಾಲು ಉಕ್ಕಿಸುತ್ತಾರೆ. ಇದೇ ಸಂದರ್ಭದಲ್ಲಿ ಹೊಸ ತುಳಸಿ ಕಟ್ಟೆಯಲ್ಲಿ ತುಳಸಿ ಗಿಡವನ್ನು ನೆಡುತ್ತಾರೆ.

ಬಹುತೇಕ ಮರಾಟಿಗರು ಗೃಹಪ್ರವೇಶದ ಸಂದರ್ಭದಲ್ಲಿ ಬ್ರಾಹ್ಮಣ ಪುರೋಹಿತರನ್ನು ಕರೆಸಿ ಸತ್ಯನಾರಾಯಣ ಪೂಜೆಯನ್ನು ಮಾಡಿಸುವುದನ್ನು ಜಿಲ್ಲೆಯಲ್ಲಿ ಕಾಣಬಹುದಾಗಿದೆ. ಹಾಗೆಯೇ ಗಣಹೋಮವನ್ನು ಮಾಡಿಸುವುದಿದೆ. ಗೃಹಪ್ರವೇಶದ ದಿನ ಮಾಂಸಹಾರ ಸೇವನೆಗೆ ನಿಷೇಧವಿದೆ.

**೫.೨ ಆಹಾರ ಪದ್ಧತಿ**

ಮಾನವನ ಅಸ್ತಿತ್ವಕ್ಕೆ ಬೇಕಾದ ಮೂಲಭೂತ ಅವಶ್ಯಕತೆಗಳಲ್ಲಿ ಪ್ರಥಮ ಸ್ಥಾನ ಆಹಾರಕ್ಕೆ. ಆಹಾರವಿಲ್ಲದೆ ಜಗತ್ತಿನ ಯಾವ ಪ್ರಾಣಿಯೂ ಬದುಕಿ ಉಳಿಯಲು ಅಸಾಧ್ಯ. ಮಾನವನ ಇತಿಹಾಸವನ್ನು ನೋಡಿದರೆ, ಆತ ಅಲೆಮಾರಿತನವನ್ನು ಬಿಟ್ಟು ಸ್ಥಿರ ನೆಲೆಯೂರಿ ಕೃಷಿಯನ್ನು ಕಂಡುಹಿಡಿದು ತನಗೆ ಬೇಕಾದ ಆಹಾರೋತ್ಪನ್ನವನ್ನು

ರೂಢಿಸಿಕೊಂಡ ನಂತರವೇ ನಾಗರಿಕತೆ ಸಂಸ್ಕೃತಿಗಳು ರೂಪುಗೊಂಡಿವೆ. ಕೃಷಿ ಪ್ರಧಾನವಾದ ದೇಶ ಭಾರತದಲ್ಲಿ ಶೇಕಡ ೮೦ ರಷ್ಟು ಜನ ಕೃಷಿಯಾಧಾರಿತದಿಂದಲೇ ಜೀವನ ಮಾಡುತ್ತಿದ್ದಾರೆ.

ಮರಾಟಿಗರ ಆಹಾರ ಪದ್ಧತಿ ಜಿಲ್ಲೆಯ ಇತರರಿಗಿಂತ ಭಿನ್ನವಾಗಿಲ್ಲ. ಶತಶತಮಾನಗಳಿಂದಲೂ ಪ್ರಕೃತಿಯ ಮಧ್ಯೆ ಬದುಕು ನಡೆಸಿಕೊಂಡು ಬಂದಿರುವ ಇವರು ತಮಗೆ ಬೇಕಾದ, ಬೇಡವಾದ ಆಹಾರಗಳನ್ನು ಅನುಭವದಿಂದಲೇ ಕಂಡುಕೊಂಡಿದ್ದಾರೆ. ಸಾಮಾನ್ಯವಾಗಿ ಆಹಾರ ಸೇವನೆ ಈ ಪರಿಸರದಲ್ಲಿ ಬೆಳೆಯುವ ಮತ್ತು ದೊರಕುವ ಧವಸಧಾನ್ಯ, ಪ್ರಾಣಿ ಮತ್ತು ಇನ್ನಿತರ ಜಲ ಚರಗಳನ್ನು ಅವಲಂಬಿಸಿರುತ್ತದೆ. ಇವರ ಮುಖ್ಯ ಆಹಾರ ಅನ್ನ, ಸಾರು, ಅನ್ನಕ್ಕೆ ಕುಚಲಕ್ಕಿಯನ್ನು ಬಳಸುತ್ತಾರೆ. ಪ್ರಾದೇಶಿಕ ಭಿನ್ನತೆಯಿಂದ ಕೂಡಿದ ಈ ಜಿಲ್ಲೆಯು ರಾಜ್ಯದಲ್ಲಿ ಇತರೆ ಪ್ರದೇಶಗಳಲ್ಲಿ ಬಳಸುವ ಸೋನಮಸೂರಿ ಅಕ್ಕಿಯನ್ನು ಬಳಸುವುದು ಕಡಿಮೆ, ದೈನಂದಿನ ಆಹಾರದಲ್ಲಿ ಕುಚಲಕ್ಕಿಯೇ ಪ್ರಧಾನ.

ವೈದಿಕ ಸಂಸ್ಕೃತಿಯಲ್ಲಿ ಕುಚಲಕ್ಕಿಯ ಬಳಕೆ ಇಲ್ಲ. ಭತ್ತವನ್ನು ಒಮ್ಮೆ ಬೇಯಿಸಿ ಕುಟ್ಟಿ ಕುಚಲಕ್ಕಿ ತಯಾರಿಸುವುದರಿಂದ ಅದು ಮೈಲಿಗೆ ಎಂದು ಪರಿಗಣಿಸಲ್ಪಡುತ್ತದೆ. ಜಾನಪದೀಯ ಸಂಸ್ಕೃತಿಯಲ್ಲಿ ಕುಚಲಕ್ಕಿ ನಿಷಿದ್ಧವಲ್ಲ. ದ್ರಾವಿಡ ಸಂಸ್ಕೃತಿಯಲ್ಲಿ ವ್ರತಾಚರಣೆ ಮಾಡುವವರು ಕುಚಲಕ್ಕಿ ಊಟ ಮಾಡಬಾರದು. ಮರಾಟಿಗರಲ್ಲಿ ವಿಶೇಷ ದಿನಗಳಲ್ಲಿ, ವ್ರತಾಚರಣೆಗಳ ಸಂದರ್ಭಗಳಲ್ಲಿ ಕುಚಲಕ್ಕಿಯ ಯಾವುದೇ ತಿಂಡಿ ತಿನಿಸುಗಳನ್ನು ವರ್ಜ್ಯಸುತ್ತಾರೆ. ಈ ಅಕ್ಕಿಯ ಗಂಜಿಯನ್ನು ಔಷಧಿಯನ್ನಾಗಿಯೂ ಬಳಸುವುದು ಕಂಡುಬರುತ್ತದೆ. ಜನಪದೀಯ ವೈದ್ಯ ಪದ್ಧತಿಯಲ್ಲಿ ಗಿಡಮೂಲಿಕೆಗಳ ಔಷಧಿಯನ್ನು ಉಪಯೋಗಿಸುವ ಸಂದರ್ಭದಲ್ಲಿ ಈ ಕುಚಲಕ್ಕಿ ತೊಳೆದ ನೀರಿನಲ್ಲಿ ಅರೆದು ಹಚ್ಚಿಕೊಳ್ಳುವುದು ಸಾಮಾನ್ಯ.

ಮರಾಟಿಗರು ತಮ್ಮ ದೈನಂದಿನ ಆಹಾರದಲ್ಲಿ ಸಸ್ಯಹಾರಗಳನ್ನು ಹೆಚ್ಚಾಗಿ ಬಳಸುತ್ತಿದ್ದರೂ ಮೂಲತಃ ಇವರು ಮಾಂಸಾಹಾರಿಗಳು. ತಮ್ಮ ಆಚರಣೆ, ಆರಾಧನೆಗಳ ಸಂದರ್ಭದಲ್ಲಿ ಹಂದಿ, ಕೋಳಿಗಳನ್ನು ಬಲಿಕೊಟ್ಟು ಪ್ರಸಾದರೂಪದಲ್ಲಿ ಸ್ವೀಕರಿಸುತ್ತಾರೆ. ಕಾಡಿನಲ್ಲಿ ದೊರಕುವ ಮುಳ್ಳುಹಂದಿ, ಹಂದಿ, ಮೊಲ, ಉಡ, ಬೆರು ಮುಂತಾದ ಪ್ರಾಣಿಗಳನ್ನು ಬೇಟೆಯಾಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಬೇಟೆಯಾಡುವುದು ವಿರಳವಾಗಿವೆ. ಕಾರಣ ಕಾಡುಗಳ ವಿಸ್ತೀರ್ಣ ಕಡಿಮೆಯಾಗುತ್ತಿರುವುದು, ಕಾಡು ಪ್ರಾಣಿಗಳ ಸಂಖ್ಯೆಯಲ್ಲಿ ಇಳಿಕೆ ಮತ್ತು ಕಾನೂನುಗಳು ಜಾರಿಯಲ್ಲಿರುವುದು. ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ಮರಾಟಿಗರು ಮಾಂಸಾಹಾರವನ್ನೇ ತ್ಯಜಿಸಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದಿದೆ. ಇವರ ಮೇಲೆ ಇತರೆ ಸಮುದಾಯಗಳ ಸಂಸ್ಕೃತಿಗಳು ಪ್ರಭಾವವಾಗಿದೆ ಎಂದು ಹೇಳಬಹುದು.

**ಆಹಾರ ಸಂಗ್ರಹಣೆ**

ಪ್ರತಿಯೊಂದು ಆಹಾರಗಳನ್ನು ಸಂಗ್ರಹಿಸಿಡುವುದರಲ್ಲಿ ಯಾವ ಸಮುದಾಯವೂ ಹಿಂದೆ ಬಿದ್ದಿಲ್ಲ. ಮೂಲಭೂತವಾದ ಆಹಾರ ಸಂಗ್ರಹಿಸಿಡುವುದು ಅನುಭವಗಳಿಂದ ತಲೆ ತಲಾಂತರದಿಂದ ರೂಢಿಸಿಕೊಂಡು ಬಂದಿರುವುದು ಸರ್ವೇಸಾಮಾನ್ಯವಾದ ವಿಚಾರ. ಪ್ರತಿಯೊಂದು ಬುಡಕಟ್ಟು ಜನರೂ ಆಹಾರ ಸಂಗ್ರಹಿಸಿಡುವುದರಲ್ಲಿ ಶೇಖರಣಾ ಸಾಧನಗಳನ್ನು ತಯಾರಿಸಿಕೊಳ್ಳುವಲ್ಲಿ ತಮ್ಮ ಕರಕುಶಲತೆ, ಕಲಾ ನೈಪುಣ್ಯತೆಯನ್ನು ತೋರಿಸುತ್ತಾರೆ.

ಬಹುತೇಕ ಮರಾಟಿಗರು ತಮಗೆ ದೊರಕಿದ ದರ್ಕಾಸ್ತು ಭೂಮಿಯಲ್ಲಿ ತರಕಾರಿ, ದವಸ ಧಾನ್ಯಗಳನ್ನು ಬೆಳೆಯುತ್ತಾರೆ. ತೊಂಡೆಕಾಯಿ, ಹೀರೆಕಾಯಿ, ಹಾಗಲಕಾಯಿ, ಸೌತೆಕಾಯಿ ಬದನೆಕಾಯಿ, ಕಾಯಿಮೆಣಸು, ಕುಂಬಳಕಾಯಿ, ಸಿಹಿಕುಂಬಳಕಾಯಿ, ಅಲಸಂಡೆ, ಬೆಂಡೆಕಾಯಿ, ಹರಿವೆ, ಬಸಳೆ, ಕೆಸವು ಇನ್ನಿತರ ಕಾಯಿಪಲ್ಯೆಗಳನ್ನು ಬೆಳೆಸಿ ಮನೆಗೆ ಉಪಯೋಗಿಸುತ್ತಾರೆ. ಇವುಗಳ ಬಿತ್ತನೆಗೆ ಬೇಕಾದ ಬೀಜಗಳನ್ನು ಒಣಗಿಸಿ ಮಣ್ಣಿನ ಮಡಕೆಯಲ್ಲಿಟ್ಟು ಒಲೆಮೇಲಿನ 'ದೆಂಗ'ದಲ್ಲಿಡುತ್ತಾರೆ. ಪ್ರತಿದಿನ ಹೊಗೆಯಾಡುತ್ತಿರುವ ಈ ಜಾಗದಲ್ಲಿ ಯಾವುದೇ ದವಸಧಾನ್ಯಗಳು ಕೆಡುವುದಿಲ್ಲ. ಮಳೆಗಾಲದ ಪ್ರಾರಂಭದಲ್ಲಿ ಬೀಜಗಳನ್ನು ತೆಗೆದು ಬಿತ್ತುತ್ತಾರೆ. ಗದ್ದೆ ಕೆಲಸಕ್ಕೆ ಹೊರ ಹೋಗಿ ಕೂಲಿಯ ರೂಪದಲ್ಲಿ ತಂದಂಥ ಭತ್ತವನ್ನು ಕದಿಕೆ (ಕಣಜ)ಯಲ್ಲಿ ತುಂಬಿಸಿಡುತ್ತಾರೆ. ಬಿದಿರಿನ ದಬ್ಬೆಯನ್ನು ಉಪಯೋಗಿಸಿ ಎತ್ತರದ ಕದಿಕೆಯನ್ನು ತಾವೇ ಸೀಳುಕೊಳ್ಳುತ್ತಾರೆ. ಅದಕ್ಕೆ ಸೆಗಣಿ ಸಾರಿಸಿ ಜಾಗ್ರತೆಯಲ್ಲಿಟ್ಟರೆ ಬಹು ವರ್ಷಗಳ ಕಾಲ ಬಾಳಿಕೆ ಬರುತ್ತದೆ. ಮತ್ತು ಅದಕ್ಕೆ ಯಾವುದೇ ಇಲಿ, ಹೆಗ್ಗಣ, ಬೆಕ್ಕುಗಳ ಉಪಟಲ ಇರುವುದಿಲ್ಲ. ಕೆಲವು ಮನೆಗಳಲ್ಲಿ 'ಕೊಮ್ಮೆ' (ಬೆತ್ರ) ಗಳಲ್ಲಿಯೂ ಭತ್ತವನ್ನು ಕೂಡಿಡುತ್ತಾರೆ. ಕೊಮ್ಮೆಗೆ ಅದರದ್ದೆ ಆದ ಮುಚ್ಚಳವೂ ಇದ್ದು ಯಾವುದೇ ಕೀಟಗಳ ಬಾಧೆಯಿರುವುದಿಲ್ಲ. ಕಾಯಿ ಹಲಸಿನ ತೊಳೆಗಳನ್ನು ಬೀಜದಿಂದ ಬೇರ್ಪಡಿಸಿ ಉಪ್ಪು ನೀರಲ್ಲಿ ಹಾಕಿ ಭರಣಿ, ಅಥವಾ ಮಡಕೆಗಳಲ್ಲಿ ಮುಚ್ಚಿಡುತ್ತಾರೆ. ಮಳೆಗಾಲದ ಸಂದರ್ಭದಲ್ಲಿ ಬೇಕಾದಾಗಲೆಲ್ಲಾ ಸ್ವಲ್ಪ ಸ್ವಲ್ಪ ತೆಗೆದು ವಿವಿಧ ರೀತಿಯ ತಿಂಡಿ-ಪಲ್ಯಗಳನ್ನು ಮಾಡುತ್ತಾರೆ. ಹಲಸಿನ ಬೀಜಗಳನ್ನು ಮಣ್ಣಿನಲ್ಲಿ ಕಲಸಿಡುತ್ತಾರೆ. ಬೀಜದ ಮೇಲಿನ ತೆಳುವಾದ ಪದರದ ಮೇಲೆ ಸುತ್ತಲೂ ಮಣ್ಣು ಕೂತಿರುವುದರಿಂದ ಬೀಜ ಕೆಟ್ಟು ಹೋಗುವುದಿಲ್ಲ. ಮನೆಯ ಒಂದು ಮೂಲೆಯಲ್ಲಿ ಶೇಖರಿಸಿಡುತ್ತಾರೆ. ಮಳೆಗಾಲ ಬಂದಾಗ ತೆಗೆದು ಹಲಸಿನ ಬೀಜದ ಪಲ್ಯ ಮಾಡುತ್ತಾರೆ. ಇತ್ತೀಚಿನವರೆಗೂ ಜಿಲ್ಲೆಯ ಮರಾಟಿಗರು ಸಾಂಬಾರ ಪಲ್ಯಗಳಿಗೆ ಹುಳಿಗಾಗಿ ಉಂಡೆಹುಳಿ (ಉಂಡೆಯಾಕಾರದ ಹುಳಿ)ಯನ್ನೇ ಬಳಸುತ್ತಿದ್ದರು. ಇಂದು ಕಡಿಮೆಯಾಗಿ ಹುಣಿಸೆ ಹುಳಿಯನ್ನು ಬಳಸುತ್ತಾರೆ. ಉಂಡೆಹುಳಿ ಮರದಲ್ಲಿ ಹಣ್ಣಾಗುವ ಸ್ವಲ್ಪ ಮೊದಲು ಕೊಯ್ದು ಸಣ್ಣದಾಗಿ ಹೆಚ್ಚಿ ಬಿಸಿಲಲ್ಲಿ ಒಣಗಿಸಲಾಗುತ್ತದೆ. ಒಣಗಿದ ಉಂಡೆ ಹುಳಿಯಿಂದ ಬೀಜಗಳನ್ನು ಬೇರ್ಪಡಿಸಿ ಒನಕೆಯಿಂದ ಕುಟ್ಟಿ ಪುಡಿಮಾಡಿ ಮಡಕೆಗಳಲ್ಲಿ ಸಂಗ್ರಹಿಸಿಡುತ್ತಾರೆ. ಮೂರು-ನಾಲ್ಕು ವರ್ಷಗಳ ತನಕ ಯಾವುದೇ ರೀತಿಯಲ್ಲಿ ಹುಳಿ ಕೆಡದೆ ಚೆನ್ನಾಗಿರುತ್ತದೆ. ತುಂಬಾ ರುಚಿಕರವಾಗಿದ್ದು ಸಾಂಬಾರು- ಪಲ್ಯಗಳಿಗೆ ವಿಶೇಷ ರುಚಿಯನ್ನು ತಂದುಕೊಡುತ್ತದೆ. ತಾವು ಕುಮೇರಿ ಬೆಳೆಯಲ್ಲಿ ಭತ್ತದ ಜೊತೆಗೆ ಬೆಳೆದ ಸೌತೆ, ಕುಂಬಳಕಾಯಿಗಳನ್ನು ಕೆಡದಂತೆ ಮನೆಯ ಅಥವಾ ಕೊಟ್ಟಿಗೆಯ ಪಕ್ಕಾಸಿಗೆ ನೇತುಹಾಕುತ್ತಾರೆ. ಹಲಸಿನ ತೊಳೆಯಂತೆಯೇ ವಿವಿಧ ಮಾವಿನಕಾಯಿಗಳನ್ನು ಉಪ್ಪುನೀರಲ್ಲಿ ಸೇರಿಸಿ ಭದ್ರವಾಗಿಡುತ್ತಾರೆ.

ಹಿಂದಿನ ಕಾಲದಲ್ಲಿ ಮರಾಟಿಗರಿಗೆ ಅಕ್ಕಿ ಸಿಗುತ್ತಿರುವುದು ಬಹಳ ಅಪರೂಪವೆಂದು ಹಿರಿಯರು ತಮ್ಮ ಕಷ್ಟಗಳನ್ನು ತೋಡಿಕೊಳ್ಳುತ್ತಾರೆ. ಕುಮೇರಿ ಬೇಸಾಯದಲ್ಲಿ ಇಂತಿಷ್ಟು ಚೆನ್ನಾಗಿ ಬೆಳೆ ಬರುತ್ತದೆ ಎಂದು ಹೇಳುವ ಅಂದಾಜು ಮಾಡುವ ಹಾಗಿರಲಿಲ್ಲ. ಒಂದು ಕಡೆ ಮಳೆ ಕೈಕೊಟ್ಟರೆ ಇನ್ನೊಂದು ಕಡೆ ಕಾಡು ಪ್ರಾಣಿಗಳ ಉಪಟಲದಿಂದ ಬೆಳೆ ನಾಶವಾಗುತ್ತಿತ್ತು. ಪಕ್ಕದ ರಾಗಿನೋ ಭತ್ತವನ್ನೋ ಅಂಬಳಿ, ಗಂಜಿ ಮಾಡಿಕೊಂಡು ಕುಡಿಯುತ್ತಿದ್ದಂತೆ.

ದಿನದಲ್ಲಿ ಒಂದು ಹೊತ್ತು ರಾಗಿ ಅಂಬಳಿ ಅಥವಾ ಅಕ್ಕಿ ಗಂಜಿ ನೀರು ಕುಡಿದರೆ ಇತರೆ ಹೊತ್ತಿನಲ್ಲಿ ಕಾಡಿನಲ್ಲಿ ದೊರಕಿದ ಹಲಸು, ಗೆಡ್ಡೆ ಗೆಣಸುಗಳನ್ನು ತಿಂದು ಬದುಕಿದವರು, ಚಹಾ ಕುಡಿಯಲು ಅನುಕೂಲವಿಲ್ಲದ ಸಮಯದಲ್ಲಿ ಕುಂಟಾರು ಗಿಡದ ಚಿಗುರು, ಪೇರಳೆ ಮರದ ನಾರು ಮತ್ತ 'ತಜಂಕ್' ಬೀಜಗಳನ್ನು ಹಾಕಿ ಅದರ ಚಹಾವನ್ನು ಕುಡಿದು ಬದುಕಿದ್ದೇವೆ ಎಂದು ಬೆಳ್ತಂಗಡಿಯ ಗೋಪಾಲ ನಾಯ್ಕರು ತಮ್ಮ ಕಷ್ಟದ ಅನುಭವಗಳನ್ನು ಮೆಲುಕುಹಾಕುತ್ತಾರೆ.

ಕಾಲ ಬದಲಾಗಿದೆ. ಹಾಗೆಯೇ ಆಹಾರ ಕ್ರಮದಲ್ಲಿಯೂ ಬದಲಾವಣೆಯಾಗಿದೆ ಈಗ ಯಾರೂ ರಾಗಿಯ ಅಂಬಳಿ, ಜೋಳದ ರೊಟ್ಟಿಯನ್ನೇ ನೆಚ್ಚಿಕೊಂಡಿಲ್ಲ. ದಿನನಿತ್ಯದ ಆಹಾರದಲ್ಲಿ ಕುಚಲಕ್ಕಿಯೇ ಪ್ರಧಾನವಾಗಿದೆ. ಬಹುತೇಕ ಮರಾಟಿ ಕುಟುಂಬ ಕೂಲಿಕೆಲಸಗಾರರು. ಹಾಗಾಗಿ ಬೆಳಿಗ್ಗೆ ಕುಚಲಕ್ಕಿಯ ಗಂಜಿಯನ್ನೇ ತಿಂದು ಕೂಲಿ ಕೆಲಸಕ್ಕೆ ಹೋಗುತ್ತಾರೆ. ಜಿಲ್ಲೆಯ ಎಲ್ಲಾ ಕೂಲಿ ಕೆಲಸಗಾರರಿಗೆ ಮದ್ಯಾಹ್ನದ ಊಟ ಕೂಲಿ ಕೆಲಸ ಮಾಡಿಸುವವರ ಮನೆಯಲ್ಲಿಯೇ ದೊರಕುತ್ತದೆ. ಮಧ್ಯಾಹ್ನದಲ್ಲಿಯೂ ಮನೆಯಲ್ಲಿರುವವರು ಕುಚಲಕ್ಕಿಯ ಅನ್ನ ಮತ್ತು ಸಾಂಬಾರು ಪಲ್ಯಗಳನ್ನು ಊಟಮಾಡುತ್ತಾರೆ. ರಾತ್ರಿಯ ಹೊತ್ತಲ್ಲಿ ಕೂಡ ಅನ್ನವನ್ನೇ ಇಷ್ಟಪಡುತ್ತಾರೆ. ಮಧ್ಯಮ ವರ್ಗದ, ಶ್ರೀಮಂತ ಕುಟುಂಬಗಳಲ್ಲಿ ಬೆಳಿಗ್ಗೆ ಕುಚಲಕ್ಕಿಯ ರೊಟ್ಟಿ, ಕಡುಬು, ದೋಸೆ, ಇಡ್ಲಿ ಉಪ್ಪಿಟ್ಟು ಹೀಗೆ ನಾನಾ ರೀತಿಯ ಉಪಹಾರವನ್ನು ಚಹಾದ ಜೊತೆ ಸೇವಿಸುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಚಹಾ ಸೇವನೆ ಅಧಿಕ ಪ್ರಮಾಣದಲ್ಲಿರುವುದರಿಂದ ಸಹಜವಾಗಿಯೇ ಮರಾಟಿಗರೂ ಕೂಡ ಚಹಾ ಸೇವನೆಯಲ್ಲಿ ಒಂದು ಹೆಜ್ಜೆ ಮುಂದು. ಬೆಳಿಗ್ಗೆ, ಮಧ್ಯಾಹ್ನ ೧೧ ಗಂಟೆಗೆ ಮತ್ತು ಸಾಯಂಕಾಲ ೪-೫ ಗಂಟೆಗೆ ಚಹಾ ಕುಡಿಯುವುದು ರೂಢಿಯಲ್ಲಿದೆ.

**ಮಾಂಸದ ಊಟ**

ಸಾಮಾನ್ಯವಾಗಿ ದಿನನಿತ್ಯ ಸಸ್ಯಾಹಾರ ಆಹಾರಗಳನ್ನು ಉಪಯೋಗಿಸಿದರೆ ವಾರದಲ್ಲಿ ಒಂದೆರಡು ಸಾರಿ ಮೀನು, ಮೊಟ್ಟೆ ಉಪಯೋಗಿಸುತ್ತಾರೆ. ಸಂಬಂಧಿಕರು ಅಪರೂಪದವರು ಬಂದಾಗ ಅಗತ್ಯವಾಗಿ ಕೋಳಿಯೂಟ ಮಾಡುತ್ತಾರೆ. ಅಥವಾ ಸಮುದ್ರ ಮೀನಿನ ಊಟ ಹಾಕುತ್ತಾರೆ. ಬಹುತೇಕ ಮರಾಟಿಗರು ಮನೆಯಲ್ಲಿ ಒಣಮೀನನ್ನು ಸಂಗ್ರಹಿಸಿಡುತ್ತಾರೆ. ವಿಶೇಷ ದಿನಗಳಲ್ಲಿ ಹಂದಿ ಮಾಂಸವನ್ನು ಉಪಯೋಗಿಸುತ್ತಾರೆ. ಹಂದಿ ಮಾಂಸ ತಿನ್ನುವವರ ಸಂಖ್ಯೆ ದಿನದಿಂದ ದಿನಕ್ಕೆ ಕಡಿಮೆಯಾಗುವುದೂ ಗಮನಾರ್ಹ. ಕಾಡಿನ ಮೊಲ, ಮುಳ್ಳುಹಂದಿ, ಬೆರು, ಬರಿಂಕ, ಉಡ ಮೊದಲಾದ ಪ್ರಾಣಿಗಳನ್ನು ಮರಾಟಿಗರು ಇಷ್ಟಪಡುತ್ತಾರೆ.

**ವಿಶೇಷ ತಿಂಡಿಗಳು**

ಮಳೆಗಾಲದ ಸಂದರ್ಭದಲ್ಲಿ ತಮ್ಮ ಜಮೀನಿನಲ್ಲಿ ದೊರಕುವ ಕೆಸುವನ್ನು ಬಳಿಸಿ ಪತ್ರೊಡೆಯನ್ನು ಮಾಡುತ್ತಾರೆ. ಪತ್ರೊಡೆ ಜಿಲ್ಲೆಯ ವಿಶಿಷ್ಟವಾದ ತಿಂಡಿಯೂ ಹೌದು. ಕೆಸುವಿನ ಎಲೆಗಳನ್ನು ತಂದು ಸಣ್ಣದಾಗಿ ಹೆಚ್ಚಿ ರುಬ್ಬಿದ ಅಕ್ಕಿಯ ಜೊತೆ ಸೇರಿಸಿ ಬಾಳೆಯಲ್ಲಿ ಹಾಕಿ ಮಡಚಿ ಮಡಕೆಯಲ್ಲಿಟ್ಟು ಬೇಯಿಸುತ್ತಾರೆ. ಕೆಸುವಿನ ಎಲೆಗಳ ಜೊತೆ ಮರ ಕೆಸುವಿನ ಎಲೆ ಒಂದೆರಡಾದರೂ ಬೇಕೇ ಬೇಕು ಎಂಬ ಭಾವನೆ ಇದೆ. ಬೇಯಿಸಿದ ನಂತರ ಮಡಕೆಯಿಂದ

ತೆಗೆದು ಮತ್ತೆ ಚಿಕ್ಕ ಚಿಕ್ಕ ತುಂಡುಗಳಾಗಿ ಮಾಡುತ್ತಾರೆ. ಕಡೆಯುವ ಕಲ್ಲಲ್ಲಿ ಮಸಾಲೆಯನ್ನು ರುಬ್ಬಿ ಅದರ ಜೊತೆ ಸೇರಿಸಿ ಮತ್ತೆ ಬೇಯಿಸುತ್ತಾರೆ. ಒಗ್ಗರಣೆ ಹಾಕಿದರೆ ಪತ್ರೊಡೆ ತಯಾರಿ. ಇದು ಮಳೆಗಾಲದಲ್ಲಿ ಆಟಿ ತಿಂಗಳಲ್ಲಿ ಎರಡು ಮೂರು ಸಾರಿ ಮಾಡುವುದು ಸಂಪ್ರದಾಯ.

ಮಳೆಗಾಲದಲ್ಲಿ ಭೂಮಿಯಲ್ಲಿ ಹುಟ್ಟುವ ಅಣಬೆಯನ್ನು ಮರಾಟಿಗರು ಬಹಳ ಇಷ್ಟಪಡುತ್ತಾರೆ. ಅಣಬೆಗಳನ್ನು ಎಲ್ಲಿ ಸಿಕ್ಕರೂ ಬಿಡದೇ ಮನೆಗೆ ತೆಗೆದುಕೊಂಡು ಹೋಗಿ ಪಲ್ಯಮಾಡುತ್ತಾರೆ. ಮಾವಿನ ಹಣ್ಣಿನ ಕಾಲದಲ್ಲಿ 'ಮಾವಿನ ಮಾಂಬಳ' ಮಾಡಿಡುವ ಮರಾಟಿಗರೂ ಬಹಳಷ್ಟು ಮಂದಿ ಇದ್ದಾರೆ. ಹಣ್ಣನ್ನು ಚೆನ್ನಾಗಿ ಹಿಂಡಿ, ಸಿಪ್ಪೆ ತೆಗೆದು ತಿರುಳು ರಸ ಸಂಗ್ರಹಿಸುತ್ತಾರೆ. ಜೀರಿಗೆ, ಮೆಣಸಿನಕಾಯಿ, ಉಪ್ಪು ಸೇರಿಸಿ ಅಡಿಕೆ ಹಾಳೆಗಳಲ್ಲಿ ಹಾಕಿ ಒಣಗಿಸುತ್ತಾರೆ. ಎರಡು ಮೂರು ದಿನ ಒಣಗಿಸಿ ಸಂಗ್ರಹಿಸಿಡುತ್ತಾರೆ. ವಿಪರೀತ ಮಳೆಯಾಗುವ ಸಂದರ್ಭದಲ್ಲಿ ತಿನ್ನುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆ ಹಲಸಿನ ಹಣ್ಣಿಗೆ ಹೆಸರುವಾಸಿಯಾಗಿದೆ. ಹಲಸಿನ ಕಾಯಿಗಳನ್ನು ತಂದು ತೊಳೆಗಳನ್ನು ಬಿಡಿಸಿ ಬೇಯಿಸಿ ಕಡೆಯುವ ಕಲ್ಲಿನಲ್ಲಿ ಚೆನ್ನಾಗಿ ರುಬ್ಬುತ್ತಾರೆ. ಉಪ್ಪು, ಬೇಕಾದರೆ ಮೆಣಸಿನ ಹುಡಿ, ಜೀರಿಗೆ ಹಾಕುತ್ತಾರೆ. ಕೈಯಲ್ಲಿ ಉಂಡೆ ಕಟ್ಟಿ ಹಪ್ಪಳದ ಮಣೆಯನ್ನು ಉಪಯೋಗಿಸಿ ಹಪ್ಪಳ ತಯಾರಿಸುತ್ತಾರೆ. ನಾಲ್ಕೈದು ದಿನಗಳು ಬಿಸಿಲಲ್ಲಿ ಒಣಗಿಸಿ ಮಡಕೆ, ಪ್ಲಾಸ್ಟಿಕ್ ಚೀಲಗಳಲ್ಲಿ ಸಂಗ್ರಹಿಸುತ್ತಾರೆ. ಮಳೆಗಾಲದಲ್ಲಿ ಚಹಾ ಕುಡಿಯುವ ಸಂದರ್ಭದಲ್ಲಿ ಸೇವಿಸುತ್ತಾರೆ.

**ಪಾನೀಯಗಳು**

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಯಾವ ಹಳ್ಳಿಗೂ ಹೋದರೂ ಅತಿಥಿಗಳಿಗೆ ಮೊದಲು ಕೈಕಾಲು ತೊಳೆಯಲು ನೀರು, ನಂತರ ಕುಳಿತುಕೊಳ್ಳಲು ಚಾಪೆ, ಬಾಯಾರಿಕೆಗೆ ಬೆಲ್ಲ ನೀರು ಕೊಟ್ಟು ಎಲೆಯಡಿಕೆ ತಟ್ಟೆ ತಂದಿಡುವುದು ಪದ್ಧತಿ. ಮರಾಟಿಗರ ಮನೆಗೆ ಹೋದವರಿಗೆ ಮೊದಲು ನೀರು ಕೊಟ್ಟು ಕುಳಿತುಕೊಳ್ಳಲು ಹೇಳುವುದು ಸಂಪ್ರದಾಯ. ವಿಶೇಷ ಅತಿಥಿಗಳಿಗೆ ಬೆಲ್ಲ ನೀರು ಕೊಡುವುದು ತಲೆತಲಾಂತರದಿಂದ ಬಂದ ರೂಢಿ. ಬೆಲ್ಲ ತಿಂದು ನೀರು ಕುಡಿಯುವುದು ಆರೋಗ್ಯಕ್ಕೂ ಒಳ್ಳೆಯದು ಎಂದು ಆಯುರ್ವೇದವೂ ತಿಳಿಸುತ್ತದೆ. ಬೆಲ್ಲ ನೀರಿನ ನಂತರ ಲಘು ಉಪಹಾರ ನೀಡುತ್ತಾರೆ. ಅಲ್ಲದೆ ಎಳನೀರು, ಲಿಂಬೆ ಪಾನಕ, ಪುನರ್ಪುಳಿ ಪಾನಕ ಕೊಡುವುದು ಸಾಮಾನ್ಯ.

ಅಮಲು ಬರಿಸುವ ಪಾನೀಯಗಳನ್ನು ಸೇವಿಸುವುದರಲ್ಲಿ ಮರಾಟಿ ಬುಡಕಟ್ಟು ಹಿಂದೆ ಬಿದ್ದಿಲ್ಲ. ಇವರು ದಿನನಿತ್ಯದಲ್ಲಿ ಕೂಲಿಕಾರರಾಗಿರುವುದರಿಂದ ಅಥವಾ ರೈತಾಪಿ ಜನವರ್ಗದವರಾದ್ದರಿಂದ ಶೇಂದಿ, ಸಾರಾಯಿ ಕುಡಿಯುತ್ತಾರೆ. ತೆಂಗು ಮತ್ತು ತಾಳೆ ಮರದಿಂದ ತೆಗೆದ ಕಳ್ಳು (ಶೇಂದಿ) ಮರಾಟಿಗರಿಗೆ ಪ್ರಿಯವಾದ ಅಮಲು ಪಾನೀಯ ಎಂದೇ ಹೇಳಬೇಕು. ಸಾರಾಯಿ ಮುಟ್ಟದವರೂ ಕೂಡ ಈ ಕಳ್ಳನ್ನು ನಿರ್ಭಯವಾಗಿ ಕುಡಿಯುತ್ತಾರೆ. ಮರಾಟಿಗರ ಆಚರಣೆಗಳಾದ ಗೋಂದೋಳು ಪೂಜೆ, ಭೈರವ ಪೂಜೆ, ಕಲ್ಲುರ್ಟಿ ಅಗೆಲು ಹೀಗೆ ಇನ್ನಿತರ ಸಂದರ್ಭಗಳಲ್ಲಿ ತಾಳೆ ಮರದ ಅಥವಾ ತೆಂಗಿನ ಮರದ ಕಳ್ಳು ಅವಶ್ಯಕವಾಗಿ ಬೇಕಾಗುತ್ತದೆ. ಆ ಸಂದರ್ಭದಲ್ಲಿ ಪ್ರಸಾದ ರೂಪದಲ್ಲಿ ಶೇಂದಿ ಕುಡಿಯುವುದನ್ನು ಕಾಣಬಹುದು. ಜನಪದ ವೈದ್ಯದಲ್ಲಿ ತಾಳೆ ಮರದ ಶೇಂದಿಗೆ ಮಹತ್ವವಿದೆ. ಹಾಗಾಗಿ ನಾಟಿ ವೈದ್ಯರು ಅನೇಕ ಖಾಯಿಲೆಗೆ ಔಷಧಿಯಾಗಿ ಈ ಶೇಂದಿಯನ್ನು ಕುಡಿಸುತ್ತಾರೆ.

ಕಾಮಾಲೆಯಂತಹ ಖಾಯಿಲೆಗೆ ತಾಳೆ ಮರದ ಶೇಂದಿ ರಾಮಬಾಣವಿದ್ದಂತೆ. ಜಿಲ್ಲೆಯಲ್ಲಿ ಬಹಳ ಮರಾಟಿ ಪುರುಷರು ಸಾರಾಯಿ ಕುಡಿತಕ್ಕೆ ಬಲಿಯಾಗಿದ್ದಾರೆ. ಯುವಕರು ಅದನ್ನು ಪ್ಯಾಶನ್ ಆಗಿ, ಪ್ರತಿಷ್ಠೆಯಾಗಿ ಆಲೋಚಿಸಿ ಸುಲಭವಾಗಿ ಬಲಿಯಾಗುತ್ತಿರುವುದು ವಿಷಾಧನೀಯ. ಮರಾಟಿಗರಲ್ಲಿ ನಿರೀಕ್ಷಿಸಿದಷ್ಟು ಅಭಿವೃದ್ಧಿಯಾಗದೇ ಇರುವುದಕ್ಕೆ ಕುಡಿತ ಒಂದು ಪ್ರಮುಖ ಕಾರಣ.

ಬದಲಾದ ಸಮಾಜದಲ್ಲಿ ಮರಾಟಿಗರೂ ಬದಲಾಗುತ್ತಿದ್ದಾರೆ. ಆಹಾರ ಕ್ರಮವೂ ಬದಲಾಗುತ್ತಿದೆ. ಒಂದು ಕಾಲದಲ್ಲಿ ಬಿದಿರಿನ ಅಕ್ಕಿಯನ್ನು ತಿಂದು ಬದುಕಿದ ಮರಾಟಿಗರಿಗೆ ಇಂದು ಭತ್ತದ ಅಕ್ಕಿ ಯಥೇಚ್ಛವಾಗಿ ದೊರಕುತ್ತಿದೆ. ದೈನಂದಿನ ಆಹಾರ ಕ್ರಮದಿಂದ ಹಿಡಿದು ಸಮ್ಮಾನದೂಟಗಳವರೆಗೂ ಬದಲಾವಣೆ ಕಂಡಿದೆ. ಕೊತ್ತಂಬರಿ (ದನಿಯಾ)ಯ ಪಾನಕವನ್ನು ಚಹಾದ ರೂಪದಲ್ಲಿ ಕುಡಿಯುತ್ತಿದ್ದ ಇವರಲ್ಲಿ ಇಂದಿನ ತಲೆಮಾರಿಗೆ ಚಹಾ ಬಿಟ್ಟರೆ ಬೇರೆ ಯಾವುದೂ ತಿಳಿದಿಲ್ಲ. ಯಥೇಚ್ಛವಾಗಿ ದೊರಕುವ ಗೆಡ್ಡೆಗೆಣಸುಗಳನ್ನು ಬಿಟ್ಟು ಮಾರುಕಟ್ಟೆಗಳಲ್ಲಿ ದೊರಕುವ ತರಕಾರಿಗಳತ್ತ ಹೆಚ್ಚು ದೃಷ್ಟಿ ಹಾಯಿಸುತ್ತಾರೆ. ಕೋಳಿ ಹಂದಿಯಂತಹ ಪ್ರಾಣಿ ಮಾಂಸಹಾರವನ್ನು ಸೇವಿಸುವುದು ಕಡಿಮೆಯಾಗುತ್ತಿದೆ. ಒಟ್ಟಾರೆಯಾಗಿ ಜಿಲ್ಲೆಯಲ್ಲಿ ಆಹಾರ ಪದ್ಧತಿ ಬದಲಾವಣೆಯನ್ನು ಕಂಡಿದೆ, ಅದಕ್ಕೆ ಮರಾಟಿಗರೂ ಹೊರತಾಗಿಲ್ಲ.

**೫.೩ ಉಡುಗೆ ತೊಡುಗೆ**

ಉಡುಗೆ ತೊಡುಗೆಗಳನ್ನು ಧರಿಸುವುದರಲ್ಲಿ ಒಂದೊಂದು ಸಮುದಾಯದವರಲ್ಲೂ ವೈವಿಧ್ಯತೆ ಕಂಡುಬರುತ್ತದೆ. ಹಿಂದಿನ ಕಾಲದಲ್ಲಿ ಗಂಡು ಮಕ್ಕಳು ಮೂರು ನಾಲ್ಕು ವರ್ಷಗಳವರೆಗೆ ಲಂಗೋಟಿ ಕಟ್ಟಿಕೊಳ್ಳುತ್ತಿದ್ದರು. ಇಂದು ನಿಕ್ಕರ್ ಅಥವಾ ಚಡ್ಡಿಯನ್ನು ಧರಿಸುತ್ತಾರೆ. ಹಿರಿಯ ಗಂಡಸರು ಹೊರಗೆ ಹೋಗುವಾಗ ಕಚ್ಚೆ ಹಾಕುತ್ತಿದ್ದರು. ತಲೆಗೆ ಕೆಂಪು ಮುಂಡಾಸು ಮತ್ತು ಕಚ್ಚೆ ಹಾಕಿ ಹೊರಗೆ ಹೋಗುತ್ತಿದ್ದದನ್ನು ಸುಳ್ಯದ ಸುಬ್ಬಯ್ಯ ನಾಯ್ಕರು ನೆನಪಿಸುತ್ತಾರೆ. ಗಂಡು ಮಕ್ಕಳು ಕಿವಿಗೆ 'ಟಿಕ್ಕಿ'ಯನ್ನು ಮತ್ತು ಹಿರಿಯರು 'ಒಂಟಿ'ಯನ್ನು ಧರಿಸುತ್ತಿದ್ದರು. ಈಗಲೂ ಅನೇಕ ಹಿರಿಯ ಮರಾಟಿಗರ ಕಿವಿಗಳಲ್ಲಿ ಒಂಟಿಯಿರುವುದು ಜಿಲ್ಲೆಯಲ್ಲಿ ಕಾಣಬಹುದು. ಇಂದಿನ ತಲೆಮಾರಿನಲ್ಲಿ ಗಂಡಸರು ಕಿವಿಗೆ ಯಾವುದೇ ಆಭರಣ ಧರಿಸುವುದಿಲ್ಲ. ಸಭೆ ಸಮಾರಂಭಗಳಿಗೆ ಬಿಳಿ ವಸ್ತ್ರ (ಪಂಚೆ) ಬಿಳಿ ಅಂಗಿ ಮತ್ತು ಹೆಗಲಿಗೆ ಶಾಲು (ಶಲ್ಯ) ಧರಿಸುತ್ತಿದ್ದರು.

ಹೆಣ್ಣು ಮಕ್ಕಳಿಗೆ ೧೦-೧೨ ವರ್ಷಗಳು ತುಂಬಿದಾಗ ಮೂಗು ಬೊಟ್ಟು ಚುಚ್ಚುತ್ತಾರೆ. ಕಿವಿಗೆ ಕೆಂಪು ಅಥವಾ ಬಿಳಿಕಲ್ಲಿನ ವಾಲೆಯನ್ನು ಇಡುತ್ತಾರೆ. ಇತ್ತೀಚಿನ ಹೆಣ್ಣುಮಕ್ಕಳು ವಾಲೆಯ ಬದಲು ಕೇವಲ ರಿಂಗ್ ಮಾತ್ರ ಇಟ್ಟುಕೊಳ್ಳುವುದಕ್ಕೆ ಇಷ್ಟಪಡುತ್ತಾರೆ. ಕೈಗಳಿಗೆ ಗಾಜಿನ ಅಥವಾ ರಬ್ಬರ್ ಬಳೆಗಳನ್ನು ಹಾಕಿಕೊಂಡರೆ ಕಾಲಿಗೆ ಬೆಳ್ಳಿಯ ಗೆಜ್ಜೆ ಧರಿಸುತ್ತಾರೆ. ಹಿಂದಿನ ಕಾಲದಲ್ಲಿ ಮರಾಟಿ ಗಂಡಸರು ಕೂದಲನ್ನು ಉದ್ದಕ್ಕೆ ಬಿಟ್ಟು ಹಿಂದುಗಡೆ ಜುಟ್ಟು ಹಾಕುತ್ತಿದ್ದರು. ಗೋಂದೋಳು ಪೂಜೆಯ ಪೂಜಾರಿಗಳಾಗಿದ್ದರೆ ಪ್ರತಿ ದಿನ ಹಣೆಗೆ ಕೈ ಕಾಲುಗಳಿಗೆ ವಿಭೂತಿ ಹಚ್ಚಿಕೊಳ್ಳುವರು.

ಮದುವೆ ಸಂದರ್ಭದಲ್ಲಿ ವಿಶೇಷ ಅಲಂಕಾರವಿರುತ್ತದೆ. ಮದುಮಗಳು ಜರತಾರಿ ಸೀರೆಯನ್ನು ಉಟ್ಟುಕೊಂಡಿರುತ್ತಾಳೆ. (ಧಾರೆ ಸೀರೆ) ಕೊರಳಿಗೆ ನಕ್ಲೇಸ್ ಮತ್ತು ಚೈನು, ಸೊಂಟಕ್ಕೆ ಡಾಬು, ಬೆರಳಿಗೆ ಉಂಗುರ ಮತ್ತು ತಲೆಗೆ ಬಾಸಿಂಗ ಕಟ್ಟುತ್ತಾರೆ. ಜಡೆಯನ್ನು ಹೆಣೆದು ಮಲ್ಲಿಗೆ, ಕನಕಾಂಬರ ಇನ್ನಿತರ ಹೂಗಳಿಂದ ಅಲಂಕರಿಸುತ್ತಾರೆ. ಮದುಮಗ ಕೊರಳಿಗೆ ಚಿನ್ನದ ಸರ, ತಲೆಗೆ ಪೇಟ ಮತ್ತು ಹೆಗಲಿಗೆ ಕತ್ತರಿಯಾಕಾರದ ಶಲ್ಯವನ್ನು ಕಟ್ಟಿಕೊಂಡಿರುತ್ತಾರೆ.

ಯಾವುದೇ ಗದ್ದೆ, ತೋಟಗಳ ಕೆಲಸದ ವೇಳೆ ಸ್ತ್ರೀ ಪುರುಷರು ತಲೆಗೆ ಅಡಿಕೆ ಹಾಳೆಯ 'ಮುಟ್ಟಾಳೆ'ಯನ್ನು ಧರಿಸುತ್ತಾರೆ. ಕಾಡಿನಿಂದ ಸೊಪ್ಪು, ಕಟ್ಟಿಗೆ ಇನ್ನಿತರ ಕೆಲಸಗಳಲ್ಲಿ ಮುಟ್ಟಾಳೆ ತಲೆಯ ನೋವನ್ನು ತಡೆಯುತ್ತದೆ. ಕೂಲಿ ಕೆಲಸಗಾರರು ಕೆಲಸದಿಂದ ಬಂದ ದುಡ್ಡನ್ನು ನೋಟುಗಳನ್ನು ಈ ಮುಟ್ಟಾಳೆಯ ಒಳಗಡೆಯೇ ಇಟ್ಟುಕೊಂಡಿರುವುದನ್ನು ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ಕಾಣಬಹುದು. ಹೊಲ ತೋಟಗಳಲ್ಲಿ ಅಡಿಕೆ, ಗೊಬ್ಬರ, ಮಣ್ಣು ಹೀಗೆ ಅನೇಕ, ಪ್ರತಿದಿನದ ಕೆಲಸಗಳಲ್ಲಿ ತಲೆಯಲ್ಲಿ ಮುಟ್ಟಾಳೆಯ ಉಪಸ್ಥಿತಿ ಇರಲೇಬೇಕು.

**೫. ೪ ಜನಪದ ವೈದ್ಯ ಪದ್ಧತಿ**

ಜನಪದ ವೈದ್ಯ ಸಂಪ್ರದಾಯವೂ ಹೌದು ವಿಜ್ಞಾನವೂ ಹೌದು. ಪಾಶ್ಚಾತ್ಯರು ದೇಶಕ್ಕೆ ಬರುವುದಕ್ಕೆ ಮುಂಚೆ ನಮ್ಮ ಗ್ರಾಮೀಣ ಜನಸಾಮಾನ್ಯರಿಗೆ ಜನಪದೀಯ ವೈದ್ಯವೇ ಶ್ರೀರಕ್ಷೆಯಾಗಿತ್ತು. ಜನಪದರು ಪ್ರಕೃತಿಯಾರಾಧಕರು. ಪ್ರಕೃತಿಯಲ್ಲಿ ದೊರೆಯುತ್ತಿದ್ದ ಆಹಾರಗಳೇ ರೋಗರುಜಿನಗಳಿಗೆ ಔಷಧಿಯಾಗಿತ್ತು. ಆಹಾರ ಪದಾರ್ಥಗಳನ್ನೇ ಔಷಧಿ ಪದಾರ್ಥಗಳನ್ನಾಗಿ ಮಾರ್ಪಡಿಸುವ ಮಾನವನ ಬುದ್ಧಿವಂತಿಕೆ ನಿಜಕ್ಕೂ ಅದ್ಭುತವಾದುದು. ಎಲ್ಲಾ ವೈದ್ಯ ವಿಧಾನಗಳ ಮೂಲವೇ ಜನಪದ ವೈದ್ಯ ಪದ್ಧತಿ. ಜನಪದ ವೈದ್ಯದ ಮುಂದುವರಿದ ಮೊದಲ ಹಂತವೇ ಆಯುರ್ವೇದ. ಜನಪದ ವೈದ್ಯ ಸಂಪ್ರದಾಯವಾದುದು, ಸಾಮೂಹಿಕ ಅನುಭವ ನಂಬಿಕೆಗಳ ಒಟ್ಟು ಮೊತ್ತವೇ ಒಂದು ಪದ್ಧತಿಯಾಗಿ ರೂಪುಗೊಂಡಿರುವಂಥದ್ದು. ಜನಪದ ವೈದ್ಯ ಪದ್ಧತಿ ರೋಗಗಳನ್ನು ವಾಸಿಮಾಡುವುದಕ್ಕಿಂತ ರೋಗಗಳು ಬಾರದಂತೆ ತಡೆಯುತ್ತದೆ ಮತ್ತು ನಂಬಿಕೆಗಳ ಮೂಲಕ ಮಾನಸಿಕ ದೃಢತೆಯನ್ನು ಹೆಚ್ಚಿಸುತ್ತ ಆ ಮೂಲಕ ರೋಗಿಯ ದೇಹದ ರೋಗದ ಜೊತೆ ಮಾನಸಿಕ ರೋಗವೂ ದೂರವಾಗುತ್ತದೆ. ಜನಪದ ವೈದ್ಯಕ್ಕೆ ನಾಡ ಔಷಧಿ, ನಾಟಿ ಔಷಧಿ, ಹಸಿರೌಷಧಿ, ಕಾಡುಮದ್ದು, ಮನೆಮದ್ದು ಹೀಗೆ ಅನೇಕ ಹೆಸರುಗಳು ಪ್ರಚಲಿತದಲ್ಲಿವೆ.

ವಕ್ತೃ, ರಾಷ್ಟ್ರಪಶಸ್ತಿ ಪುರಸ್ಕೃತ ಶಿಕ್ಷಕ ಶ್ರೀ ಬಿ. ಐತಪ್ಪ ನಾಯ್ಕರು ಹೇಳುವಂತೆ ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲಿಯೂ ಸುಮಾರು ೨೦೦೦ ಮರಾಟಿ ಸಮುದಾಯದ ಜನಪದ ವೈದ್ಯರಿದ್ದಾರೆ. ಈ ಪದ್ಧತಿ ತಲೆತಲಾಂತರದಿಂದ ಬೆಳೆದು ಉಳಿದುಕೊಂಡು ಬಂದಿದೆ ಕೃಷಿಯನ್ನೆ, ಕೂಲಿಯನ್ನೇ ನಂಬಿಕೊಂಡು ಬಂದ ಮರಾಟಿಗರಿಗೆ ಪಶುಸಂಗೋಪನೆ ಅತ್ಯಂತ ಪ್ರೀತಿಯ ಕೆಲಸಗಳಲ್ಲಿ ಒಂದು. ಹಾಗಾಗಿ ಪ್ರತಿಯೊಂದು ಮನೆಯವರೂ ಕೂಡ ದನ-ಕರು, ಎತ್ತುಗಳನ್ನು ಸಾಕಿ ಸಲಹಿ ಹಾಲು ಗೊಬ್ಬರ ಇತ್ಯಾದಿಗಳನ್ನು ಪಡೆಯುತ್ತಾ ಬಂದಿದ್ದಾರೆ. ಗುಡ್ಡಗಾಡು ಪ್ರದೇಶಗಳಾದ್ದರಿಂದ ಜಾನುವಾರುಗಳಿಗೆ ಬೇಕಾಗುವ ಮೇವಿನ ಬಗ್ಗೆ ಹೆಚ್ಚು ಚಿಂತಿಸಬೇಕಿಲ್ಲ. ಈ ಜಾನುವಾರುಗಳಿಗೆ ದೈಹಿಕ ಆರೋಗ್ಯ ಕೆಟ್ಟರೆ ಅವರದ್ದೇ ಆದ ಗಿಡಮೂಲಿಕೆಗಳ ಔಷಧಿಗಳಿಂದ ಗುಣಪಡಿಸುತ್ತಾರೆ.

ಮಳೆಗಾಲದಲ್ಲಿ ಸಾಮಾನ್ಯವಾಗಿ ಎಲ್ಲಾ ಎತ್ತು ದನ ಕರುಗಳಿಗೆ ನಾಲಗೆಯಯಲ್ಲಿ ಗುಳ್ಳೆ (ಕಪ್ಪೆ ಬರುವುದು) ಬಂದು ಯಾವುದೇ ಆಹಾರ ತಿನ್ನಲಾಗುವುದಿಲ್ಲ. ಇಂತಹ ಸಂದರ್ಭದಲ್ಲಿ ಮರಾಟಿಗರೇ ಕೆಲವೊಂದು ಗಿಡದ ಸಿಪ್ಪೆ (ಕೆತ್ತೆ) ಯನ್ನು ಕೆಂಡದಲ್ಲಿ ಉರಿಸಿ ದನಕರುಗಳಿಗೆ ಆದ ಗುಳ್ಳೆಯ ಮೇಲೆ ಇಟ್ಟು ಉಜ್ಜುತ್ತಾರೆ. ಭತ್ತ, ಕಾಯಿಮೆಣಸು, ಉಪ್ಪು ತಿನ್ನಲು ಕೊಟ್ಟು ನೋವು ಒಂದೆರಡು ದಿನದಲ್ಲಿ ಶಮನವಾಗುವಂತೆ ಮಾಡುತ್ತಾರೆ. ದನಕರುಗಳಿಗೆ ನೆಗಡಿಯಾದರೆ ಗೊಟ್ಟ (ಬಿದಿರನ ಕೋಲು) ದ ಮೂಲಕ ಸ್ವಲ್ಪ ಗೇರು ಹಣ್ಣಿನಿಂದ ತಯಾರಿಸಿದ ಮದ್ಯವನ್ನು ಕೊಡುತ್ತಾರೆ. ಇದರಿಂದ ನೆಗಡಿ ಕಡಿಮೆಯಾಗುತ್ತದೆ. ಹೀಗೆ ಜಾನುವಾರುಗಳ ಅನೇಕ ರೋಗಗಳನ್ನು ಗುಣಪಡಿಸುವುದರಲ್ಲಿ ಇವರು ಸಿದ್ಧಹಸ್ತರು.

ಪುತ್ತೂರು ತಾಲೂಕಿನ ದೇವಕಿ (ವಯಸ್ಸು ೯೩) ಅವರು ನಾಟಿ ವೈದ್ಯ ಪದ್ಧತಿಯಲ್ಲಿ ಹೆಸರುವಾಸಿಯಾದವರು. ಪುತ್ತೂರು 'ತಾಲೂಕು ಜನಪದ ವೈದ್ಯೆ' ಪ್ರಶಸ್ತಿ ಪುರಸ್ಕೃತರೂ ಹೌದು. ಇದುವರೆಗೆ ಸುಮಾರು ೨೦೦೦ ಮಹಿಳೆಯರಿಗೆ ಪ್ರಸೂತಿ ಕಾರ್ಯ ಮಾಡಿದ್ದಾರೆ. ಹಾಗೆಯೇ ಮಹಿಳೆಯರಿಗೆ ಬರುವ ಬಿಳಿಸೆರಗು, ಬಂಜೆತನ, ಕಾಮಲೆ (ಹಳದಿ) ಮುಂತಾದ ಖಾಯಿಲೆಗಳನ್ನು ಗುಣಪಡಿಸುವಲ್ಲಿ ಇವರ ಪಾತ್ರ ಬಹಳ ಮಹತ್ವದ್ದು. ಯಾವುದೇ ಪ್ರತಿಫಲಾಪೇಕ್ಷೆ ಇಲ್ಲದೆ ಈ ಸಮಾಜ ಕಾರ್ಯವನ್ನು ಮಾಡಿಕೊಂಡು ಬಂದಿದ್ದಾರೆ. ನಾಟಿ ವೈದ್ಯರೆಲ್ಲರೂ ಯಾವುದೇ ಖಾಯಿಲೆ ಬಂದಾಗಲೂ ಹಗಲಿರುಳೆನ್ನದೆ ರೋಗಿಗಳ ಮನೆಗೆ ಬಂದು ಔಷಧಿ ನೀಡಿ ಗುಣಪಡಿಸುತ್ತಾರೆ. ಹಿಂದಿನ ಕಾಲದಲ್ಲಿ ಬುಡಕಟ್ಟು ಜನರಿಗೆ ಕಾಡು ಬೆಟ್ಟ ಗುಡ್ಡಗಳಲ್ಲಿರುವ ಅಸಂಖ್ಯಾತ ಗಿಡಮರಗಳಿಂದ ಪೌಷ್ಠಿಕಾಂಶವಿರುವ ಉತ್ಕೃಷ್ಟ ಹಣ್ಣು ಹಂಪಲು ಪ್ರಾಣಿ ಮಾಂಸಗಳಂತಹ ಆಹಾರ ದೊರೆಯುತ್ತಿತ್ತು. ಆದರೆ ಇಂದು ಕಾಡುಗಳೇ ಕನಿಷ್ಟಕ್ಕೆ ಬಂದಿರುವುದರಿಂದ ಸ್ವಾಭಾವಿಕ ಪ್ರಕೃತಿ ಸಂಪತ್ತು ದೊರಕುತ್ತಿಲ್ಲ. ಇದೂ ಒಂದು ರೀತಿಯಲ್ಲಿ ಅವರ ಆರೋಗ್ಯದ ಮೇಲೆ ಪರಿಣಾಮ ಬೀರಿದೆ. ಅದು ಅಪೌಷ್ಠಿಕತೆಗೆ ಒಂದು ಕಾರಣವೂ ಹೌದು. ಹಾಗಾಗಿ ಅನಾರೋಗ್ಯ ಉಂಟಾದಾಗ ನೇರವಾಗಿ ವೈದ್ಯರಲ್ಲಿಗೆ ಹೋಗುವುದು ಕಡಿಮೆ. ಇಂದಿಗೂ ನಾಟಿ ವೈದ್ಯ ಪದ್ಧತಿಯತ್ತ ಒಲವು ತೋರಿಸುವುದು ಕಂಡು ಬರುತ್ತದೆ. ಇತ್ತೀಚಿನ ಒಂದು ದಶಕಗಳಿಂದ ನಗರ ಪಟ್ಟಣ ಪ್ರದೇಶದ ವೈದ್ಯರಲ್ಲಿಗೆ ಹೋಗುತ್ತಿದ್ದಾರೆ.

ಜನಪದರಲ್ಲಿ ಪ್ರಚಲಿತವಿರುವ ಮಾಯ, ಮಾಟ, ತಂತ್ರಗಳು ಇಂದಿಗೂ ಅನೇಕ ಗ್ರಾಮೀಣ ಪ್ರದೇಶದಲ್ಲಿನ ಬುಡಕಟ್ಟುಗಳಲ್ಲಿ ಕಂಡು ಬರುತ್ತಿದೆ. ಕೆಲವೊಂದು ಖಾಯಿಲೆಗಳಿಗೆ ಇಂದಿಗೂ ಮರಾಟಿಗರು ತಂತ್ರ-ಮಂತ್ರಗಳ ಉಪಯೋಗ ಪಡೆದುಕೊಳ್ಳುತ್ತಿದ್ದಾರೆ. ಜ್ವರ, ಅಲರ್ಜಿ, ಮೈ-ಕೈ ನೋವು ಹೀಗೆ ಇನ್ನಿತರ ಸಣ್ಣಪುಟ್ಟ ತೊಂದರೆಗಳು ಎದುರಾದಾಗ ತಮ್ಮ ಕುಟುಂಬದ ನಿಪುಣ ತಂತ್ರಗಾರರಲ್ಲಿಗೆ ಹೋಗಿ ತಾಯಿತ, ಭಸ್ಮ, ತಂದು ಉಪಯೋಗಿಸುವುದು ಕಂಡು ಬರುತ್ತಿದೆ. ಜಿಲ್ಲೆಯ ಸುಳ್ಯ, ಪುತ್ತೂರು, ಬಂಟ್ವಾಳ ತಾಲೂಕುಗಳಲ್ಲಿ ಆಚರಣೆಯಲ್ಲಿರುವ 'ವಿಷ್ಣುಮೂರ್ತಿ ಒತ್ತೆಕೋಲ' ದಲ್ಲಿರುವ ಕುಣಿತಗಾರನ ಕೈಗೆ ನೂಲನ್ನು ಕೊಟ್ಟು ಮಂತ್ರಿಸಿದ ನಂತರ ಕೊರಳಿಗೆ, ಕೈಗೆ ಕಟ್ಟಿಕೊಳ್ಳುವುದೂ ಇದೆ. ದೆವ್ವ, ಪೀಡೆ, ಪಿಶಾಚಿ ಮುಂತಾದವುಗಳ ಉಪದ್ರವಗಳಿಗೆ ಮಂತ್ರದ ಮೂಲಕವೇ ಪರಿಹಾರ ಕಂಡುಕೊಳ್ಳುತ್ತಾರೆ. ಮಕ್ಕಳಿಗೆ, ಮಯಸ್ಕರಿಗೆ ದೃಷ್ಟಿಯಾದರೆ ತಾವೇ ಮನೆಯಲ್ಲಿ ದೃಷ್ಟಿ ತೆಗೆಯುತ್ತಾರೆ. ಒಂದು ಹರಿವಾಣದಲ್ಲಿ ನೀರಿಗೆ ಸುಣ್ಣ, ಅರಸಿನ ಹಾಕುತ್ತಾರೆ. ನೀರು ಕೆಂಪು ಬಣ್ಣಕ್ಕೆ ತಿರುಗುತ್ತದೆ. ಹತ್ತಿಯ ಅರಿವೆಯ

ಬತ್ತಿ ಮಾಡಿ ಎಣ್ಣೆಯಲ್ಲಿ ಅದ್ದಿಸಿ, ದೀಪಹಚ್ಚಿ, ಕೊಡವನ್ನು ಅದರ ಮೇಲೆ ತಲೆಕೆಳಗಾಗಿಟ್ಟು ಆ ಕೊಡವನ್ನು ದೃಷ್ಟಿ ತಾಗಿದ ವ್ಯಕ್ತಿಯ ಸುತ್ತಲೂ ಮೂರು ಸಲ ತಿರುಗಿಸಿ ಕೊಡವನ್ನು ಹರಿವಾಣದ ನೀರಿನಲ್ಲಿ ತಲೆಕೆಳಗಾಗಿ ಇಡುತ್ತಾರೆ. ಆಗ ನೀರೆಲ್ಲ ಕೊಡದೊಳಗೆ ಶಬ್ದ ಮಾಡುತ್ತಾ ಒಳ ಸೇರಿಕೊಳ್ಳುತ್ತದೆ. ಆ ಮೂಲಕ ದೃಷ್ಟಿ ಹೋಯಿತು ಎಂದು ನಂಬುತ್ತಾರೆ. ವೈಜ್ಞಾನಿಕವಾಗಿ ನೋಡಿದರೆ ಬೆಂಕಿಯಿಂದ ಕೊಡದ ಹವೆ ಬಿಸಿಯಾಗುತ್ತದೆ, ಹೊರಗಿನ ಹವೆಯ ಒತ್ತಡದ ಮೂಲಕ ನೀರು ಕೊಡದಲ್ಲಿ ಸೇರಿಕೊಳ್ಳುವುದೇ ಆಗಿದೆ. ಕೆಲವೊಮ್ಮೆ ಒತ್ತಡ ಜಾಸ್ತಿಯಾಗಿ ಕೊಡ ಒಡೆಯುವ ಸಂಭವವೂ ಇರುತ್ತದೆ. ಆಗ ದೃಷ್ಟಿ ಬಹಳ ಕಠಿಣವಾಗಿತ್ತೆಂದು ಭಾವಿಸುತ್ತಾರೆ. ಅನೇಕ ಮೂಢನಂಬಿಕೆಗಳು ಬಾಲ್ಯದಲ್ಲಿಯೇ ಮಕ್ಕಳ ಮನಸ್ಸಿನ ಮೇಲೆ ಗಾಢ ಪರಿಣಾಮವನ್ನು ಉಂಟುಮಾಡುತ್ತವೆ. ಅದು ಮಕ್ಕಳು ಬೆಳೆದಂತೆಲ್ಲಾ ಗಾಢವಾಗುತ್ತಾ ಹೋಗುತ್ತವೆ. ಒಂದು ರೀತಿಯಲ್ಲಿ ಪರಂಪರಾಗತವಾದ ನಂಬಿಕೆಗಳನ್ನು ಬಿಟ್ಟು ಸ್ವತಂತ್ರವಾಗಿ ವಿಚಾರ ಮಾಡಲು 'ಪರಂಪರೆ' 'ಸಂಪ್ರದಾಯ' ಗಳು ತೊಡಕಾಗುತ್ತವೆ. ಮರಾಟಿಗರು ಕೂಡ ಇಂದಿಗೂ ಅನೇಕ ಮಾಯ, ಮಾಟ, ಮಂತ್ರಗಳನ್ನು ಅವಲಂಭಿಸಿರುವುದೂ ಕೂಡ ಈ ರೀತಿಯ ಪರಂಪರೆಯ ಮೂಲಕವೇ ಎಂದು ಹೇಳಬಹುದು. ಶಿಕ್ಷಣ ದೊರಕುತ್ತಿರುವುದರಿಂದ ಮುಂದೊಂದು ದಿನ ಈ ಮಾಟ, ಮಂತ್ರಗಳ ಆಚರಣೆ ನಂಬಿಕೆಗಳು ದೂರವಾಗಲೂಬಹುದು.

ಜಾಗತೀಕರಣ, ಖಾಸಗೀಕರಣ, ಉದಾರೀಕರಣ ಈ ರೀತಿಯ ಜೀವನಶೈಲಿಯ ಆಕ್ರಮಣಗಳಿಂದ ಸಾಮಾನ್ಯವಾದ ಖಾಯಿಲೆಗಳು ಮತ್ತು ಸಹಜವಾದ ಹೆರಿಗೆಗಳು ಹೈಟೆಕ್ ಆಸ್ಪತ್ರೆಗಳಲ್ಲಿ ನಡೆಯುವಂಥಾಗಿದೆ. ತಂತ್ರಜ್ಞಾನದ ಹೆಸರಿನಲ್ಲಿ ಹೈಟೆಕ್ ಆಸ್ಪತ್ರೆಗಳು, ನರ್ಸಿಂಗ್ ಹೋಮ್‌ಗಳು ಜನಸಾಮಾನ್ಯರ ಆರೋಗ್ಯದ ನೆಪದಲ್ಲಿ ಲಾಭದಾಯಕ ಉದ್ಯಮಗಳಾಗಿವೆ. ಬಡವ, ಮಧ್ಯಮವರ್ಗದವರು ಕಾಲಿಡದಂತಹ ಕೇಳರಿಯದಂತಹ ರೀತಿಯಲ್ಲಿವೆ, ನಮ್ಮ ಆರೋಗ್ಯ ಕೇಂದ್ರಗಳು. ಸರ್ಕಾರಿ ಆರೋಗ್ಯ ಕೇಂದ್ರಗಳಲ್ಲಿ ಯಾವುದೇ ರೀತಿಯ ಸಲಕರಣೆಗಳ ಕೊರತೆಗಳ ಪಟ್ಟಿ ಸದಾ ಮುಂದಿರುತ್ತದೆ. ಮರಾಟಿಗರಲ್ಲಿ ಅನೇಕರು ವೈದ್ಯಪದ್ಧತಿಯ ಮೂಲಕ ಅಸಾಮಾನ್ಯ ರೋಗವೆಂದು ಕರೆಯಲ್ಪಡುವ ಜಾಂಡೀಸ್‌ಗೆ ನಿಸರ್ಗದಲ್ಲಿನ ಮೂಲಗಳನ್ನು ಉಪಯೋಗಿಸಿ ಗುಣಪಡಿಸುವವರಿದ್ದಾರೆ. ಕೇವಲ ಒಂದು ಕೋಳಿ, ಹತ್ತು ರೂಪಾಯಿಗೆ, ಎಲೆ ಅಡಿಕೆಯಂತಹ ದಕ್ಷಿಣೆ ಪಡೆದು ನೂರಾರು ರೋಗಗಳನ್ನು ಗುಣಪಡಿಸುವ ನೂರಾರು ಹೆರಿಗೆಗಳನ್ನು ಮಾಡಿರುವ ಗ್ರಾಮೀಣ ಮತ್ತು ಬುಡಕಟ್ಟು ಮಹಿಳೆಯರು ಅನೇಕರಿದ್ದಾರೆ. ಇವರೆಲ್ಲರ ಅನುಭವದ ಮುಂದೆ ನಮ್ಮ ತಂತ್ರಜ್ಞಾನ ಎಂದಿಗೂ ಸರಿಸಮವಾಗಿರಲು ಸಾಧ್ಯವಿಲ್ಲ.

### ೫.೫ ಜನಪದ ಕ್ರೀಡೆಗಳು

ನಿರಂತರ ಚಲನಶೀಲನಾದ ಮಾನವ ಸಂಘಟಿತನಾಗಿ ಜೀವನ ಪ್ರಾರಂಭಿಸಿದಾಗ ಕ್ರೀಡೆ, ಶಿಸ್ತು ನಿಯಮಗಳಿಗೂ ರೂಪ ಕೊಟ್ಟ. ಅದು ಕ್ರಮೇಣ ಆತನ ಆಲೋಚನೆ, ಸಿದ್ಧಾಂತಗಳಿಗೆ ಒಂದು ಭದ್ರ ಬುನಾದಿಯನ್ನೇ ನೀಡಿತು. ಹಾಗಾಗಿ ಹಿಂದಿನಿಂದ ಇಂದಿನವರೆಗೂ ನೂರಾರು ಚಿತ್ರ-ವಿಚಿತ್ರ ಕ್ರೀಡೆಗಳು ಇಡೀ ಜಗತ್ತಿನಾದ್ಯಂತ ಪ್ರಚಲಿತದಲ್ಲಿದೆ. ಬಹುತೇಕ ಕ್ರೀಡೆಗಳು ಯಾವುದೇ ಜಾತಿ, ವರ್ಣ, ಭೇದಗಳು ಇಲ್ಲದೆ ನಿರಂತರವಾಗಿ ಒಟ್ಟು ಮಾನವತ್ವ ಪಡೆದುಕೊಂಡು ಬಂದಿವೆ. ಬಾಲ್ಯದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಒಂದಲ್ಲ

ಒಂದು ಕ್ರೀಡೆಗೆ ಮಾರು ಹೋಗುತ್ತಾನೆ. ಮೇಲ್ನೋಟಕ್ಕೆ ಕೇವಲ ಮನೋರಂಜನೆಗಾಗಿ ಆಟಗಳಿವೆ ಎಂದೆನಿಸಿದರೂ ಅದನ್ನು ಮಾರಿದ ಸಾಮಾಜಿಕ, ಸಾಂಸ್ಕೃತಿಕ ಉದ್ದೇಶಗಳನ್ನು ಆಟಗಳು ಹೊಂದಿವೆ. ''ಜನಪದ ಆಟಗಳು ಕೂಡ ಸಂಸ್ಕೃತಿಯ ಘಟಕಗಳೇ ಆಗಿವೆ. ಸಂಸ್ಕೃತಿಯ ಸಂವಹನದ ಒಂದು ಮಾಧ್ಯಮವಾಗಿ ಈ ಆಟಗಳು ಚಲನಶೀಲವಾಗಿದೆ. ಮನುಷ್ಯನನ್ನು ಸಂಸ್ಕೃತಿಗೆ ಒಳಪಡಿಸುವ, ಸಂಸ್ಕೃತಿಯ ಅಂಶಗಳನ್ನು ಅವನಿಗೆ ಸಂವಹನ ಮಾಡು ಕ್ರಿಯೆಗಳನ್ನು ಈ ಆಟಗಳು ನಿರ್ವಹಿಸುತ್ತವೆ. ಇದರಿಂದ ಜನಪದ ಆಟಗಳ ಅಧ್ಯಯನವೂ ಸಾಂಸ್ಕೃತಿಕ ಘಟಕವೊಂದರ ಅಧ್ಯಯನವೇ ಆಗಿದೆ. ಆಟಗಳ ಮೂಲಕವೇ ಸಂಸ್ಕೃತಿಯನ್ನು ಅರ್ಥ ಮಾಡಿಕೊಂಡು ವ್ಯಾಖ್ಯಾನಿಸಬಹುದಾಗಿದೆ. ಸಾಂಕೇತಿಕವಾಗಿ ಸಂಸ್ಕೃತೀಕರಣ ಮತ್ತು ಸಾಮಾಜೀಕರಣಗೊಳಿಸುವ ಪ್ರಬಲ ಮಾಧ್ಯಮಗಳು ಜನಪದ ಆಟಗಳಾಗಿವೆ''[೧]

ಈ ಜನಪದ ಕ್ರೀಡೆಗಳ ಮುಖ್ಯ ಅಂಶವೆಂದರೆ, ಅವುಗಳ ಅಭ್ಯಾಸ, ಪ್ರಯೋಗಗಳಿಗೆ ಹೆಚ್ಚಿನ ಹಣ ಬೇಕಾಗಿಲ್ಲ. ಸುತ್ತ ಮುತ್ತಲಿನ ಪರಿಸರದಲ್ಲಿ ದೊರಕುವ ಸಾಮಾಗ್ರಿಗಳೇ ಸಾಕು. ಜಿಲ್ಲೆಯಲ್ಲಿ ಮರಾಟಿಗರು ಎಲ್ಲಾ ಸಮುದಾಯದವರ ಜೊತೆಗೂಡಿ ಈ ಜನಪದ ಆಟಗಳನ್ನು ಆಡುವುದು ಕಂಡುಬರುತ್ತದೆ. ಇದರಿಂದ ವ್ಯಕ್ತಿ ವ್ಯಕ್ತಿಗಳ ಮಧ್ಯೆ ಸಮುದಾಯ -ಸಮುದಾಯಗಳು ಮಧ್ಯೆ ಬಾಂಧವ್ಯ ಬೆಳೆಯಲು ಸಹಕಾರಿಯಾಗುತ್ತದೆ.

**ಲಗೋರಿ**

ಬಹುತೇಕ ಎಲ್ಲಾ ಪ್ರದೇಶಗಳಲ್ಲಿ ಚಿಕ್ಕ ಮಕ್ಕಳು ಲಗೋರಿ ಆಟದಲ್ಲಿ ಮಗ್ನರಾಗಿರುತ್ತಾರೆ. ಮನೆಯಂಗಳದಲ್ಲಿ ಅಥವಾ ಗದ್ದೆ ಬಯಲುಗಳಲ್ಲಿ ಹಂಚಿನ ತುಂಡು/ಚಪ್ಪಟೆಯಾಕಾರದ ಕಲ್ಲುಗಳನ್ನು ಮತ್ತು ರಬ್ಬರ್ ಚೆಂಡು ಬಳಸಿ ಆಡುವ ಆಟ ಲಗೋರಿ. ಆಟದಲ್ಲಿ ಎರಡು ತಂಡಗಳಿದ್ದು, ಒಂದು ತಂಡ ಗೋರಿಯಾಕಾರದಲ್ಲಿ ಜೋಡಿಸಿಟ್ಟ ಕಲ್ಲುಗಳನ್ನು ಚೆಂಡಿನ ಮೂಲಕ ಹೊಡೆದುರುಳಿಸಿದಾಗ ಮತ್ತೊಂದು ತಂಡ ಅದನ್ನು ಕಟ್ಟುವ ಸಾಹಸ ಮಾಡುವುದು. ಮತ್ತೊಂದು ತಂಡ ಕಲ್ಲುಗಳನ್ನು ಕಟ್ಟದಂತೆ ಚೆಂಡು ಎಸೆಯುವ ಮೂಲಕ ತಡೆಯೊಡ್ಡುವುದು. ಒಂದು ವೇಳೆ ಚೆಂಡು ತಗುಲಿಸಿಕೊಂಡರೆ ಆ ತಂಡ ಸೋಲನ್ನು ಒಪ್ಪಿಕೊಳ್ಳಬೇಕಾಗುವುದು. ಸರಿಯಾಗಿ ಕಟ್ಟಿದರೆ ಅಂಕವನ್ನು ಪಡೆಯುತ್ತದೆ.

ಲಗೋರಿ ಅಪ್ಪಟ ಗ್ರಾಮೀಣ ಜನಪದ ಕ್ರೀಡೆಯಾಗಿದೆ. ಕಾಲ ಬದಲಾದಂತೆ ಲಗೋರಿ ಆಟ ಮರೆಯಂಚಿಗೆ ಸರಿಯುತ್ತಾ, ಕ್ರಿಕೇಟ್ ಆಟವನ್ನೇ ಎಲ್ಲರೂ ಆಡುವುದು ಕಂಡುಬರುತ್ತದೆ. ಜಿಲ್ಲೆಯಲ್ಲಿ ಈಗ್ಗೆ ೪-೫ ವರ್ಷಗಳ ಮೊದಲು ಸುಳ್ಯ ತಾಲೂಕಿನಲ್ಲಿ ಉತ್ಸಾಹಿ ಯುವ ಜನರು ಸಂಘಟಿತರಾಗಿ ಮರೆಯಂಚಿಗೆ ತಳ್ಳಲ್ಪಟ್ಟ ಲಗೋರಿ ಆಟವನ್ನು ಪುನರುಜ್ಜೀವನಗೊಳಿಸಿದುದು ಸಂದರ್ಭೋಚಿತ ಮತ್ತು ಶ್ಲಾಘನೀಯ. ಸುಳ್ಯ ಪರಿಸರದಲ್ಲಿ ಪ್ರತಿವರ್ಷ ಅನೇಕ ಲಗೋರಿ ಪಂದ್ಯಾಟಗಳು ನಡೆಯುತ್ತಿವೆ. ಆಕರ್ಷಕ ಬಹುಮಾನಗಳನ್ನಿಟ್ಟು ಜನತೆ ಸಮಾಜದ ಪ್ರೋತ್ಸಾಹ ಕೋರಲಾಯಿತು. ಇಂಥ ಜನಪದ ಕ್ರೀಡೆಗಳನ್ನು ಉಳಿಸಿ ಬೆಳೆಸುವುದು ಮಹತ್ವದ ಕರ್ತವ್ಯವಾಗಿವೆ.

## ಕಲ್ಲಾಟ

ಸಾಮಾನ್ಯವಾಗಿ ಬಿಡುವಿನ ಸಮಯದಲ್ಲಿ ಹೆಣ್ಣು-ಗಂಡು ಮಕ್ಕಳು ಆಡುವ ಆಟವೇ ಕಲ್ಲಾಟ. ನುಣುಪಾಗಿರುವ ಚಿಕ್ಕ ಐದು ಕಲ್ಲುಗಳನ್ನು ಆರಿಸಿಕೊಂಡು ನೆಲಕ್ಕೆ ಹಾಕಿ ಅದರಲ್ಲಿ ಯಾವುದಾದರೂ ಒಂದು ಕಲ್ಲನ್ನು ಹೆಕ್ಕಿ ತೆಗೆದು ಬೆರಳುಗಳಿಂದ ಮೇಲಕ್ಕೆ ಹಾರಿಸಿ ನೆಲದಲ್ಲಿರುವ ಒಂದೊಂದು ಕಲ್ಲನ್ನು ಇತರ ಕಲ್ಲುಗಳಿಗೆ ತಗುಲದಂತೆ ತೆಗೆಯಬೇಕು. ಹೆಕ್ಕಿ ತೆಗೆಯುವಾಗ ಕಲ್ಲು ಕೆಳಕ್ಕೆ ಜಾತಿ ಬಿದ್ದರೆ ಸೋತಂತೆ. ಕಲ್ಲಾಟದಲ್ಲಿ ಸುಮಾರು ೮-೯ ಆಟಗಳಿವೆ. ಕತ್ರೆ, ಉಯ್ಯಾಲೆ, ಹೂ ಕೊಯ್ಯುವುದು, ದನ ಕೊಡುವುದು ಹೀಗೆ ಅನೇಕ ಪಾರಿಭಾಷಿಕ ಪದಗಳಿಂದ ಕೂಡಿರುವ ಕಲ್ಲಾಟದಲ್ಲಿ ಕೈಚಳಕವೇ ಮುಖ್ಯವಾಗಿದೆ.

## ಪಳ್ಳಿ ಆಟ

ಜಿಲ್ಲೆಯ ಪ್ರಾಥಮಿಕ ಶಾಲೆಗಳಲ್ಲಿ ಆಟದ ಮೈದಾನದಲ್ಲಿ ಮಕ್ಕಳು ಪಳ್ಳಿ ಆಟವನ್ನು ಆಡುತ್ತಾರೆ. ಒಬ್ಬನ ಕೈಯನ್ನು ಮತ್ತೊಬ್ಬ ಹಿಡಿದುಕೊಂಡು ಎದುರುಬದುರಾಗಿದ್ದರೆ ಇತರರು ಅವರಿಬ್ಬರ ಕೈಯನ್ನು ಬಿಡಿಸಲು ಪ್ರಯತ್ನಿಸುತ್ತಾರೆ. ಬಿಡಿಸಲು ಬರುವವರ ಬೆನ್ನಿಗೆ ಇವರಿಬ್ಬರು ಗುದ್ದು ನೀಡುವರು. ಏಟನ್ನು ಲೆಕ್ಕಿಸದೆ ಹಿಡಿದು ಕೊಂಡವರ ಕೈಯನ್ನು ಬಿಡಿಸುವ ಅತೀ ಸಾಹಸ ಈ ಆಟದಲ್ಲಿದೆ. ಪಳ್ಳಿ ಆಟದಲ್ಲಿ ದೇಹದ ಅತೀ ಸೂಕ್ಷ್ಮ ಅಂಗಗಳಿಗೆ ಹೊಡೆಯಬಾರದೆಂಬ ನಿಯಮವನ್ನು ಎಲ್ಲರೂ ಸೇರಿ ಮೊದಲೇ ಒಪ್ಪಿಕೊಂಡಿರುತ್ತಾರೆ.

## ಹುಲಿ ದನ ಆಟ

ಹಿಂದಿನ ಕಾಲದಲ್ಲಿ ಕಾಡಿಗೂ - ನಾಡಿಗೂ ಒಂದು ಉತ್ತಮವಾದ ಸಂಬಂಧವಿತ್ತು. ಕಾಡು ಅತೀ ವಿಸ್ತಾರದಲ್ಲಿದ್ದು ನಾಡು ಅಲ್ಪ ಪ್ರಮಾಣದಲ್ಲಿತ್ತು. ಕಾಡಿನ ಕಾಡುಪ್ರಾಣಿಗಳು ನಾಡಿನ ಸಾಧುಪ್ರಾಣಿಗಳನ್ನು ಆಹಾರವಾಗಿ ಪಡೆಯುತ್ತಿದ್ದವು.ಆಗಾಗ್ಗೆ ಹಟ್ಟಿ,ಕೊಟ್ಟಿಗೆಗೆ ದಾಳಿ ಮಾಡಿ ದನ - ಕರುಗಳನ್ನು ಕೊಂದು ತಿನ್ನುತ್ತಿದ್ದ ಉದಾಹರಣೆಗಳಿವೆ. ಹುಲಿಯಂಥ ಬಲಿಷ್ಠ ಪ್ರಾಣಿಗಳನ್ನು ಬೇಟೆಯಾಡಿದ ಧೀರರ,ಶೂರರ ನೂರಾರು ಜನಪದ ಕಥೆ, ಐತಿಹ್ಯಗಳು ನಮ್ಮ ಹಳ್ಳಿಗರಲ್ಲಿವೆ. ಜನಪದರ ಆಹಾರ ಉತ್ಪಾದನೆಯ ಒಂದು ಮೂಲವಾದ ದನ-ಎತ್ತು-ಕರುಗಳನ್ನು ಹುಲಿ ಹಿಡಿಯುವ ಕ್ರಿಯೆ ಮತ್ತು ದನ ಹುಲಿ ಆಟದ ಸೃಷ್ಟಿ ಈ ಆಟದ ಜನಪ್ರಿಯತೆಗೆ ಕಾರಣವಾಗಿದೆ.

ಮಕ್ಕಳೆಲ್ಲಾ ಸೇರಿ ಕೈ ಕೈ ಹಿಡಿದು ಒಂದು ವೃತ್ತಾಕಾರ ಕೋಟೆಯನ್ನು ರಚಿಸುತ್ತಾರೆ. ಒಬ್ಬ ಹುಲಿಯ ಪಾತ್ರ ವಹಿಸಿದರೆ ಮತ್ತೊಬ್ಬ ದನದ ಪಾತ್ರ ವಹಿಸುತ್ತಾನೆ. ಕೋಟೆಯೊಳಗೆ ದನವಿದ್ದಾಗ ಹೊರಗಿನಿಂದ ಹುಲಿ ಒಳಗೆ ಹೋಗಲು ಪ್ರಯತ್ನಿಸುತ್ತದೆ. ಕೈ ಕೈ ಹಿಡಿದ ಮಕ್ಕಳು ಹುಲಿಯನ್ನು ಒಳ ಬಿಡದಂತೆ ಎಚ್ಚರ ವಹಿಸುತ್ತಾರೆ. ಒಂದು ವೇಳೆ ಹುಲಿ ಒಳ ನುಸುಳಿದರೆ ದನವನ್ನು ಹೊರಗೆ ಬಿಡುತ್ತಾರೆ. ತುಂಬಾ ಸಮಯದ ತನಕ ಸಾಗುವ ಈ ಆಟ ಹುಲಿ ಹಸುವನ್ನು ಮುಟ್ಟಿದಾಗ ಆಟ ಕೊನೆಗೊಳ್ಳುತ್ತದೆ.

ಎಲ್ಲಾ ಆಟಗಾರರು ತಮ್ಮ ಜಯಕ್ಕಾಗಿ ಅನೇಕ ತಂತ್ರೋಪಾಯಗಳನ್ನು ಬಳಸುತ್ತಾರೆ. ಓಡುವುದು, ಹಾರುವುದು, ಕಿರಿಚಾಡುವುದು, ನಗುವುದು ಇತ್ಯಾದಿ ಕ್ರಿಯೆಗಳು ಆಟದುದ್ದಕ್ಕೂ ಕಂಡುಬರುತ್ತದೆ. ಇದರ ಮೂಲಕ ಮಕ್ಕಳಿಗೆ

ಹೆಚ್ಚಿನ ದೈಹಿಕ ವ್ಯಾಯಮಸಿಗುತ್ತದೆ. "ಆಟಗಾರರು ವಿವಿಧ ತಂತ್ರಗಳನ್ನು ಯೋಚಿಸಿ ಬಳಸಬೇಕಾಗಿರುವುದರಿಂದ ಮಾನಸಿಕ ಸೂಕ್ಷ್ಮತೆಯೂ ಬೆಳೆಯುತ್ತದೆ. ಮುಖ್ಯವಾಗಿ ಹುಲಿ ದನ ಆಟವು ಪ್ರಬಲ ಸಾಮಾಜಿಕ ಸಂವಹನ ಮಾಧ್ಯಮವಾಗಿ ಕಾರ್ಯವೆಸಗುತ್ತದೆ. ಹುಲಿ ಅಂದರೆ ಕ್ರೂರ, ಕೆಟ್ಟ ಪ್ರಾಣಿ ಎಂಬ ಲೋಕ ದೃಷ್ಟಿ ಇಲ್ಲಿ ಕೆಲಸ ಮಾಡುತ್ತದೆ. ದನವು ಸಾಧು, ನಮ್ಮ ಸಂಸ್ಕೃತಿಯ ಪ್ರತೀಕವೆಂಬಂತೆ ಎಲ್ಲರೂ ಅದನ್ನು ರಕ್ಷಿಸುತ್ತಾರೆ. ಇಲ್ಲಿ ಹುಲಿ ಹುಲಿಯಾಗದೆ ಕೆಟ್ಟ ಮೌಲ್ಯ, ಹೊರಗಿನ ಸಂಸ್ಕೃತಿಯನ್ನು ಸೂಚಿಸುತ್ತದೆ. ದನವು ಸಮಾಜ ನಂಬಿದ ಮೌಲ್ಯ ನಂಬಿಕೆಗಳ ಸಂಕೇತವಾಗಿದೆ."[3]

**ಗೇರು ಬೀಜದಾಟ :-**

ಬೇಸಿಗೆ ಸಮಯದಲ್ಲಿ ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ಶಾಲಾ ಮಕ್ಕಳು (ಹೆಚ್ಚಾಗಿ ಗಂಡು ಮಕ್ಕಳು) ಆಡುವ ಆಟ ಇದಾಗಿದೆ. ಮನೆಯಿಂದ ಶಾಲೆಗೆ, ಶಾಲೆಯಿಂದ ಮನೆಗೆ ಬರುವಾಗ ಮತ್ತು ಇತರ ವಿರಾಮದ ಸಮಯದಲ್ಲಿ ನಾಲ್ಕೈದು ಹುಡುಗರು ಸೇರಿ ಆಟ ಆಡುತ್ತಾರೆ. ಮಾರ್ಗದಲ್ಲಿ ನಿಂತಲ್ಲಿ ನಿಲ್ಲದೇ ಆಟ ಸಾಗುತ್ತಾ ಹೋಗುತ್ತದೆ. ಒಬ್ಬ ಒಂದು ಗೇರು ಬೀಜವನ್ನು ನೆಲಕ್ಕೆ ಸ್ವಲ್ಪ ದೂರ ಬಿಸಾಡಿದಾಗ ಮತ್ತೊಬ್ಬ ಅಲ್ಲಿಂದಲೇ ಮುಂದೆ ಬಿದ್ದ ಬೀಜಕ್ಕೆ ಗುರಿಯಿಡಬೇಕಾಗುತ್ತದೆ. ಗುರಿ ತಪ್ಪಿ ಮುಂದೆ ಹೋಗಿ ಬಿದ್ದರೆ ಸರದಿಯಂತೆ ಮೊದಲಿನವ ತನ್ನ ಬೀಜವನ್ನು ಎತ್ತಿಕೊಂಡು ಮುಂದಿರುವ ಬೀಜಕ್ಕೆ ಗುರಿಯಿಡುತ್ತಾನೆ.ಗುರಿ ಸರಿಯಾಗಿದ್ದರೆ ಗೇರು ಬೀಜ ಆತನದಾಗುತ್ತದೆ. ಹೀಗೆ ಶಾಲೆ ಮುಟ್ಟುವ ತನಕ ಅಥವಾ ಮನೆ ತಲುಪುವ ತನಕ ಆಟ ಮುಂದುವರಿಯುತ್ತದೆ. ಇಲ್ಲಿ ಲಾಭ ನಷ್ಟದ ವ್ಯವಹಾರದ ಪರಿಚಯವಾಗುತ್ತದೆ. ಜೊತೆಗೆ ಸಂತೋಷ, ಸೂಕ್ಷ್ಮತೆಗಳೊಂದಿಗೆ ಬಹುಮಾನವನ್ನು ನೀಡುತ್ತದೆ. ಸಂಪಾದಿಸಿದ ಗೇರು ಬೀಜಗಳನ್ನು ಅಂಗಡಿಗೆ ಕೊಟ್ಟು ಮಿಠಾಯಿ ತಿಂದು ಮಕ್ಕಳು ಸಂತೋಷಪಡುತ್ತಾರೆ. ಆಟದಿಂದ ಮಕ್ಕಳಿಗೆ ಏಕಾಗ್ರತೆ, ಸೂಕ್ಷ್ಮತೆ, ಗುರಿಯಿಡುವಿಕೆಗಳ ಪರಿಚಯ, ಚಿಕ್ಕಂದಿನಲ್ಲಿಯೇ ಸರಳವಾಗಿ ಲಾಭ ನಷ್ಟ ವ್ಯವಹಾರಗಳ ಬಗ್ಗೆ ತಿಳುವಳಿಕೆಯಾಗುತ್ತದೆ.

**ಕಣ್ಣು ಮುಚ್ಚಾಲೆ ಆಟ :-**

ಚಿಕ್ಕ ಮಕ್ಕಳು ಆಡುವ ಜನಪ್ರಿಯವಾದ ಆಟ ಕಣ್ಣು ಮುಚ್ಚಾಲೆ. ರಾಜ್ಯದಾದ್ಯಂತ ಈ ಆಟವನ್ನು ಅತಿ ಚಿಕ್ಕ ವಯೋಮಾನದ ಮಕ್ಕಳು ಆಡುವುದನ್ನು ಕಾಣಬಹುದು. 'ಕಣ್ಣಾ ಮುಚ್ಚೇ, ಕಾಡೇ ಗೂಡೇ, ಉದ್ದಿನ ಮೂಟೇ ಉರುಳಿ ಹೋಯಿತು. ನಮ್ಮಯ ಹಕ್ಕಿ ಬಿಟ್ಬೇ ಬಿಟ್ಬೇ, ನಿಮ್ಮಯ ಹಕ್ಕಿ ಅಡಗಿಕೊಳ್ಳಿ' ಎಂದು ಹಾಡುತ್ತಾ ಒಂದು ಕಡೆ ಕೂರಿಸಿ ಒಬ್ಬ ಎರಡೂ ಕಣ್ಣುಗಳನ್ನು ಮುಚ್ಚುತ್ತಾರೆ. ಆಟದಲ್ಲಿದ್ದ ಇತರರೆಲ್ಲರೂ ಸಿಕ್ಕಂದರಲ್ಲಿ ಅಡಗಿಕೊಳ್ಳುತ್ತಾರೆ. ಅಡಗಿದ ನಂತರ 'ಕೂ' ಎಂದು ಕೂಗಿದಾಗ ಕಣ್ಣು ಮುಚ್ಚಿದವನ್ನು ಕಣ್ಣು ತೆರೆದು ಅಡಗಿರುವವರನ್ನು ಹುಡುಕಿ ಮುಟ್ಟಲು ಪ್ರಯತ್ನಿಸುತ್ತಾನೆ. ಯಾರು ಸಿಗದಿದ್ದರೆ ಅವರೆಲ್ಲರೂ ಬಂದು ಕಣ್ಣು ಮುಚ್ಚಿದವವನ್ನು ಹಿಡಿದರೆ ಆತ ಸೋತಂತೆ. ಪ್ರತಿಯೊಬ್ಬರೂ ತನ್ನ ಬಾಲ್ಯಾವಸ್ಥೆಯಲ್ಲಿ ಕಣ್ಣು ಮುಚ್ಚಾಲೆ ಆಟ ಆಡಿದವರಾದುದರಿಂದ ಇಷ್ಟು ಜನಪ್ರಿಯತೆಯನ್ನು ಪಡೆದ ಆಟ ಇದಾಗಿದೆ.

**ಚೆನ್ನೆಮಣೆ ಆಟ :-**

ದಕ್ಷಿಣ ಕನ್ನಡ ಜಿಲ್ಲೆಯ ಆಟಗಳಲ್ಲಿ ಚೆನ್ನೆಮಣೆ, ಧಾರ್ಮಿಕ ಹಿನ್ನಲೆ ಹೊಂದಿದ ಆಟಗಳಲ್ಲಿ ಒಂದು . ರಾಜ್ಯದ ಉತ್ತರ ಕನ್ನಡ, ಮೈಸೂರು, ಚಿಕ್ಕಮಗಳೂರು, ಹಾಸನ, ತುಮಕೂರು ಮುಂತಾದ ಜಿಲ್ಲೆಗಳಲ್ಲೂ ಈ ಆಟ ರೂಢಿಯಲ್ಲಿದೆ. ಅಲ್ಲದೇ ಜರ್ಮನಿ, ಫಿಲಿಪೇನ್ಸ್, ಅಮೇರಿಕಾ ದೇಶಗಳಲ್ಲಿಯೂ ಈ ಚೆನ್ನೆಮಣೆ ಆಟವನ್ನು ಹೋಲುವ ಆಟವಿದೆ ಎಂದು ಪ್ರೊ. ಪೀಟರ್ ಜೆ. ಕ್ಲಾಸ್ ಅವರು ಹೇಳುತ್ತಾರೆ.[೬]

ಸಾಂಪ್ರದಾಯಿಕವಾಗಿ ಆಷಾಡ ಮಾಸದಲ್ಲಿ ಆಡುವ ಆಟ ಇದು. ಶ್ರೀ ಕೃಷ್ಣ ಜನ್ಮಾಷ್ಟಮಿಯಂದು ರಾತ್ರಿಯೆಲ್ಲಾ ಚೆನ್ನೆಮಣೆ ಆಡಿ ಬೆಳಗಿನ ಜಾವ ಅಟ್ಟಕ್ಕೇರಿಸಬೇಕು. ನಂತರ ಮುಂದಿನ ವರ್ಷದ ಆಷಾಡ ಮಾಸದಲ್ಲಿ ಕೆಳಗಿಳಿಸಬೇಕು ಎಂದು ಹಿರಿಯರ ನಂಬಿಕೆ.

ಚೆನ್ನೆಮಣೆ ಮರದಿಂದ ಕೆತ್ತಲಾದ ಆಯತಾಕಾರದ ಮಣೆ. ಎರಡು ಸಾಲುಗಳಲ್ಲಿ ತಲಾ ಏಳೇಳು ಹೊಂಡಗಳಿದ್ದು,ಒಂದು ಮನೆಗೂ ಇನ್ನೊಂದಕ್ಕೂ ಸಾಮಾನ್ಯವಾಗಿ ಹೆಬ್ಬೆರಳಿನಾಂತರ ಕಂಡು ಬರುತ್ತದೆ. ಮಣೆಯ ಎರಡೂ ತುದಿಗಳಲ್ಲಿ ಗೆದ್ದ ಕಾಯಿಗಳನ್ನು ಸಂಗ್ರಹಿಸಿಡಲು ತೋಡುಗುಂಡಿಗಳಿರುತ್ತವೆ. ಒಂದೊಂದು ಹೊಂಡಕ್ಕೆ ತಲಾ ನಾಲ್ಕು ಕಾಯಿಗಳಂತೆ ಸುಮಾರು ೫೬ ಬೀಜಗಳು ಬೇಕಾಗುತ್ತದೆ.ಜಿಲ್ಲೆಯಲ್ಲಿ ಸಿಗುವ ಚೆನ್ನೆಮರದ ಕೆಂಪು ಬಣ್ಣದ ಸುಂದರವಾದ ಕಾಯಿಗಳನ್ನು ಆರಿಸಿ ಚೆನ್ನೆಮಣೆ ಆಟ ಆಡುವುದು ಕಂಡು ಬರುತ್ತದೆ.

ಚೆನ್ನೆಮಣೆಯು ಕಲಾತ್ಮಕತಿಯಿಂದ ಕೂಡಿದ್ದು ಕುಸುರಿ ಕೆಲಸದಿಂದ ನೋಡಲು ಬಹಳ ಸುಂದರವಾಗಿರುತ್ತದೆ. ಜಿಲ್ಲೆಯಲ್ಲಿ ಬಹುತೇಕ ಮಣೆಗಳು ಕಪ್ಪು ಬಣ್ಣದ ಮರದಿಂದ ತಯಾರಿಸಿದವುಗಳು

ಹಿಂದಿನ ಕಾಲದಲ್ಲಿ ಒಂದು ಚೆನ್ನೆಮಣೆಯನ್ನು ರಚಿಸಲು ಬಡಗಿಗೆ ಒಂದು ಮುಡಿ ಅಕ್ಕಿಯನ್ನು ಕೊಡಬೇಕಾಗಿತ್ತು ಎಂದು ಹಿರಿಯರು ಹೇಳುತ್ತಾರೆ. ವಿಶಿಷ್ಟವಾದ ಸ್ಥಾನಮಾನವನ್ನು ಹೊಂದಿರುವ ಈ ಆಟ ತುಳುವ ಸಂಸ್ಕೃತಿಯೊಂದಿಗೆ ಅರ್ಥಪೂರ್ಣ ಸಂಬಂಧವನ್ನು ಹೊಂದಿದೆ. ಪೆರ್ಗ, ಜೋಡುಪೆರ್ಗ, ಬುಳೆ, ಅರಸು, ಮಂತ್ರಿ, ಸೇವಕ ಹೀಗೆ ಅನೇಕ ಹೆಸರುಗಳುಳ್ಳ ಈ ಆಟಗಳು ಜಿಲ್ಲೆಯ ರೈತರ ಬದುಕನ್ನು ಪ್ರತಿಬಿಂಬಿಸುತ್ತದೆ. ಒಟ್ಟು ದೈನಂದಿನ ಬದುಕನ್ನು ಚೆನ್ನೆಮಣೆ ಆಟ ಪ್ರತಿಬಿಂಬಿಸುವುದು ಸ್ವಾರಸ್ಯಕರವಾಗಿದೆ. ಆಟದಲ್ಲಿ ಎಷ್ಟುಸಾರಿ ಸೋಲುತ್ತಾರೋ ಅವರಿಗೆ ಅಷ್ಟು ಮದುವೆಯಾದಂತೆ ಎಂಬ ಫಲಿತಾಂಶ ವೈಶಿಷ್ಟ್ಯಪೂರ್ಣವಾದುದು, ಚೆನ್ನೆಮಣೆ ಆಟ ಪಗಡೆಯಾಟಕ್ಕೆ ಸರಿಸಾಟಿಯಾಗಿ ನಿಲ್ಲಬಲ್ಲುದು. ಇಲ್ಲಿ ಮುಖ್ಯವಾಗಿ ಆಟಗಾರನ ಜಾಣ್ಮೆ, ನೆನಪಿನ ಶಕ್ತಿ, ಮುಂದಾಲೋಚನೆ ಶಕ್ತಿ ಮಹತ್ವದ ಪಾತ್ರವಹಿಸುತ್ತದೆ.

ಅಕ್ಕತಂಗಿಯರು, ಗಂಡ ಹೆಂಡತಿ ಚೆನ್ನೆಮಣೆ ಆಡುವುದಕ್ಕೆ ನಿಷೇಧವಿದೆ. ಅದಕ್ಕೆ ಕಾರಣವೂ ಇದೆ. ಸತ್ಯನಾಪುರದ ಸಿರಿಪಾಡ್ದನದಲ್ಲಿ ಸ್ಪಷ್ಟಪಡಿಸಲಾಗಿದೆ. ಅಕ್ಕತಂಗಿಯರಾದ ಅಬ್ಬಗ-ದಾರಗರಿಬ್ಬರೂ ಚೆನ್ನೆಮಣೆ ಆಟವಾಡುವಾಗಿನ ಜಗಳದಿಂದ ಚೆನ್ನೆಮಣೆಯಲ್ಲೇ ಹೊಡೆದುಕೊಂಡು (ಸತ್ತ) ದುರಂತವನ್ನು ಕಾಣುತ್ತಾರೆ. ಹಾಗೆಯೇ ಪರ್ಮಲೆ ಬಲ್ಲಾಳನ ಪಾಡ್ದನದಲ್ಲಿ ಬಲ್ಲಾಳರು ಮಡದಿ ಮಾನಿಗಳನ್ನು ಚೆನ್ನೆ ಆಡಲು ಒತ್ತಾಯಿಸಿ ಆಟದಲ್ಲಿ ಸೋಲುತ್ತಾ

ಬಂದಾಗ, ಮಾನಿಗಳನ್ನು ನೀರು ತಂದು ಕೊಡಲು ಒಳಗೆ ಕಳುಹಿಸಿ, ಮಣೆಯನ್ನು ತಿರುಗಿಸಿಟ್ಟನು. ಇದನ್ನರಿತ ಹೆಂಡತಿ 'ನೀವು ಆಟ ತಪ್ಪಿಸಿದ್ದೀರಿ' ಎಂದು ಚೆನ್ನೆಯ ಮಣೆಯನ್ನು ಸಿಟ್ಟಿನಲ್ಲಿ ಕಾಲಿನಿಂದ ದೂಡಿ ಕೆಳಗೆ ಹಾಕುತ್ತಾಳೆ. ಕೊನೆಗೆ ವಿರಸದಲ್ಲಿ ಆಕೆ ತನ್ನ ತವರು ಮನೆ ಸೇರುತ್ತಾಳೆ. ಇಂತಹ ಘಟನೆಗಳಿಂದ ನಿಷೇಧಗಳು ಪ್ರಚಲಿತದಲ್ಲಿವೆ.

**ಕೋಳಿ ಅಂಕ :-**

ತುಳುನಾಡಿನ ಜನಪದ ಕ್ರೀಡೆಗಳಲ್ಲಿ ಕೋಳಿ ಅಂಕಕ್ಕೆ ಮಹತ್ವದ ಸ್ಥಾನವಿದೆ. ಇಂತಹ ಕ್ರೀಡೆ ರಾಜ್ಯದ ಬೇರೆ ಯಾವ ಪ್ರದೇಶಗಳಲ್ಲೂ ಕಂಡುಬಾರದು. ಹಿಂದಿನ ಕಾಲದಿಂದಲೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೋಳಿ ಅಂಕ ಜನಪ್ರಿಯವಾದ ಕ್ರೀಡೆಯಾಗಿಯೇ ಮುಂದುವರೆದುಕೊಂಡು ಬಂದಿದೆ. ಕೋಳಿ ಅಂಕದ ಸಲುವಾಗಿಯೇ ಜಿಲ್ಲೆಯ ವೈದಿಕೇತರ ಸಮುದಾಯಗಳ ಜನರು ಗಂಡು ಕೋಳಿಗಳನ್ನು (ಹುಂಜ) ಸಾಕಿ ಸಲಹುತ್ತಾರೆ. ಕೋಳಿ ಅಂಕ ನಡೆಯುವ ಅಡ್ಡೆಗೆ ಕೋಳಿಗಳನ್ನು ತರುತ್ತಾರೆ. ಸರಿಸಮನಾದ ಕೋಳಿಗಳನ್ನು ಜತೆ ಮಾಡಿ ಅವುಗಳೆರಡರ ಒಂದೊಂದು ಕಾಲಿಗೂ ಬಾಳ್ (ಚಿಕ್ಕ ಗಾತ್ರದ ಕತ್ತಿ) ಗಳನ್ನು ಕಟ್ಟಿ ಹುರಿದುಂಬಿಸಿ ಕಾದಾಟಕ್ಕೆ ಇಳಿಸುತ್ತಾರೆ. ನೆರೆದ ಜನರೆಲ್ಲರೂ ತಮ್ಮ ನೆಚ್ಚಿನ ಕೋಳಿ ಮೇಲೆ ಪಣವಾಗಿ ಹಣ (ದೂದು) ಕಟ್ಟುತ್ತಾರೆ. ಯಾವ ಕೋಳಿ ಸಾಯುತ್ತದೆಯೋ ಆ ಕೋಳಿ ಎದುರು ಪಾರ್ಟಿಯವನಿಗೆ ಹೋಗುತ್ತದೆ. ಅದರ ಮೇಲೆ ಹಣ ಕಟ್ಟಿದ್ದರೆ ಹಣವೂ ಆತನಿಗೆ ಸಂದಾಯವಾಗುತ್ತದೆ. ಕೋಳಿ ಒಂದು ವೇಳೆ ಓಡಿ ಹೋದರೂ ಸೋಲು ಎಂದು ಪರಿಗಣಿಸಲಾಗುತ್ತದೆ.

ಸಾಮಾನ್ಯವಾಗಿ ಕೋಳಿ ಅಂಕಗಳು ಶೇಂದಿ ಅಂಗಡಿ, ಸಾರಾಯಿ ಅಂಗಡಿಯ ಹತ್ತಿರ ನಡೆಯುವುದನ್ನು ಕಾಣಬಹುದು. ಕೋಳಿ ಅಂಕದಲ್ಲಿ ಬಾಳ್ ಕಟ್ಟುವವನು ಅದರಲ್ಲಿ ವಿಶೇಷ ಪರಿಣತಿಯನ್ನು ಹೊಂದಿದ್ದು ಒಂದು ಕೋಳಿಗೆ ಬಾಳ್ ಕಟ್ಟಿದರೆ ಇಂತಿಷ್ಟು ದರವನ್ನು ನಿಗದಿಪಡಿಸಿರುತ್ತಾನೆ. ಜಿಲ್ಲೆಯ ಅನೇಕ ಜಾತ್ರೆಗಳ ನಂತರದಲ್ಲಿ ವಿಶೇಷವಾಗಿ ದೇವಸ್ಥಾನದ ಹೆಸರಿನಲ್ಲಿ ಕೋಳಿ ಅಂಕ ನಡೆಯುತ್ತದೆ. ಕೋಳಿ ಅಂಕದ ಸಲುವಾಗಿಯೇ 'ಕುಕ್ಕುಟ ಪಂಚಾಂಗ'ವಿರುವುದು ಉಲ್ಲೇಖನೀಯ. ಕೋಳಿಗಳಲ್ಲಿ ಬೊಳ್ಳೆ, ಮೈರ, ಗಿಡಿಯ, ಮೈಪ, ಕಕ್ಕೆ, ಕೆಂಪು ಉರಿಯ, ಗೆಂಡ ಬೊಳ್ಳೆ, ಉರಿಯ ಹೀಗೆ ಹಲವಾರು ಜಾತಿಗಳಿವೆ. ಯಾವ ಜಾತಿಯ ಕೋಳಿ ಇನ್ನಾವ ಜಾತಿಯ ಕೋಳಿಯೊಡನೆ ಯಾವ ದಿನದಂದು ಸೆಣಸಾಡಿದರೆ ಗೆಲುವಾಗುತ್ತದೆ ಎಂಬುದರ ಬಗ್ಗೆ ಕುಕ್ಕುಟ ಪಂಚಾಂಗದಲ್ಲಿ ಮಾಹಿತಿಗಳಿರುತ್ತವೆ.

**ಕಂಬಳ :-**

ಕಂಬಳ ಕೂಡ ತುಳುನಾಡಿನ ಒಂದು ವಿಶಿಷ್ಟವಾದ ಜನಪದ ಕ್ರೀಡೆ. ಗದ್ದೆ ಬೇಸಾಯ ಮುಗಿದ ನಂತರ ಕಂಬಳ ಪ್ರಾರಂಭವಾಗುತ್ತದೆ. ಮತ್ತು ಕಂಬಳದ ಸಲುವಾಗಿಯೇ ಜೋಡು ಕೆರೆಗಳನ್ನು ನಿರ್ಮಿಸಿ ಸ್ಪರ್ದೆಯನ್ನು ಮಾಡುವುದು ಜಿಲ್ಲೆಯ ವೈಶಿಷ್ಟ್ಯ. ಕೆಸರು ಗದ್ದೆಯಲ್ಲಿ ಕೋಣಗಳನ್ನು ಓಡಿಸುವುದರ ಮೂಲಕ ಕೋಣಗಳ ಮಧ್ಯೆ ಹಣಾಹಣಿ ನಡೆಯುತ್ತದೆ. ಇಂತಹ ಕ್ರೀಡೆ ಜಿಲ್ಲೆಯಾದ್ಯಂತ ನಡಿಯುತ್ತದೆ. ಕಂಬಳದ ಕೋಣಗಳನ್ನು ಸಾಕಲು ಆರ್ಥಿಕವಾಗಿ ಮುಂದುವರೆದಿರಬೇಕಾಗುತ್ತದೆ. ಮರಾಟಿಗರಲ್ಲಿ ಅಷ್ಟು ಶಕ್ತರಾದವರು ಇಲ್ಲವೆಂದು ಹೇಳಬೇಕು. ಆದರೆ ಕೋಣಗಳನ್ನು ಓಡಿಸುವ ಹಂತಗಳಲ್ಲಿ ಮರಾಟಿ ಯುವಕರು ಭಾಗವಹಿಸುವುದನ್ನು ನೋಡಬಹುದು. ಧನಿಕರ ಮನೆಗಳಲ್ಲಿ ಕೋಣಗಳ

ದಿನನಿತ್ಯದ ಆರೋಗ್ಯವನ್ನು ನೋಡುವ, ಕಾಪಾಡುವ ಕಾಯಕವನ್ನು ಮರಾಟಿಗರು ಮಾಡುವುದು ಇದೆ. ಜಿಲ್ಲೆಯ ಪ್ರಸಿದ್ಧ ಕಂಬಳಗಳಲ್ಲಿ ಕೃಷಿಕ ಮರಾಟಿಗರು ನೋಡಿ ಆನಂದಿಸುವುದು ಸಾಮಾನ್ಯವಾಗಿದೆ.

**ತೆಂಗಿನ ಕಾಯಿ ಕುಟ್ಟುವುದು :-**

ಜಿಲ್ಲೆಯಲ್ಲಿ ವಿಶೇಷ ಹಬ್ಬ ಹರಿದಿನಗಳಂದು ಯುವಕರು, ಮಧ್ಯಮ ವಯಸ್ಕರೆಲ್ಲಾ ಸೇರಿ ತೆಂಗಿನ ಕಾಯಿ ಕುಟ್ಟುವ ಗ್ರಾಮೀಣ ಆಟವನ್ನು ಆಡುತ್ತಾರೆ. ಕೆಲವು ತೆಂಗಿನ ಮರದ ತೆಂಗಿನ ಕಾಯಿಗಳು ಸಿಪ್ಪೆ ಬಹಳ ಗಟ್ಟಿಮುಟ್ಟಾಗಿದ್ದು ಇಂಥ ಆಟಗಳಿಗೆ ಸರಬರಾಜಾಗುತ್ತವೆ. ಓರ್ವ ತೆಂಗಿನ ಕಾಯಿಯನ್ನು ನೆಲದಲ್ಲಿರಿಸಿ ಎರಡು ಕೈಯಿಂದ ಹಿಡಿದುಕೊಂಡರೆ ಎದುರಾಳಿ ತನ್ನ ತೆಂಗಿನ ಕಾಯಿಯಿಂದ ಹೊಡೆಯುತ್ತಾನೆ. ಯಾವ ತೆಂಗಿನ ಕಾಯಿ ಒಡೆದು ಹೋಯಿತೊ ಅದು ಗೆದ್ದವನ ಪಾಲಾಗುತ್ತದೆ. ಒಂದೊಂದು ತೆಂಗಿನ ಕಾಯಿ ಗಟ್ಟಿಮುಟ್ಟಾಗಿದ್ದು ಎದುರಾಳಿ ೧೦/೧೨ ತೆಂಗಿನ ಕಾಯಿಗಳ ಏಟಿಗೂ ಜಗ್ಗದೇ ಇರುವುದನ್ನು ಕಾಣಬಹುದು. ಪಾರಂಪರಿಕ ಕೃಷಿಯಿಂದ ಬೆಳೆದ ತೆಂಗಿನ ಕಾಯಿಗಳು ಗಟ್ಟಿತನವನ್ನು ತೋರಿಸುತ್ತವೆ ಎಂದು ವಕ್ತೃಗಳ ಅನುಭವ. ರಾಸಾಯನಿಕ ಗೊಬ್ಬರ ಬಳಸಿ ಬೆಳೆದ ತೆಂಗಿನ ಕಾಯಿಯ ಸಿಪ್ಪೆಗೆ ಗಟ್ಟಿತನವಿಲ್ಲ ಎಂದು ಹೇಳುತ್ತಾರೆ. ನೆರೆದ ಪ್ರೇಕ್ಷಕರೂ ಎರಡೂ ತೆಂಗಿನ ಕಾಯಿಯ ಮೇಲೆ ಹಣ ಕಟ್ಟುವುದೂ ಇದೆ. ಗ್ರಾಮೀಣ ಜಾತ್ರೆ, ಭೂತ ಕೋಲಗಳ ಸಂದರ್ಭಗಳಲ್ಲಿ ತೆಂಗಿನಕಾಯಿ ಕುಟ್ಟುವ ಸ್ಪರ್ದೆಯನ್ನು ಇಂದಿಗೂ ನೋಡಬಹುದಾಗಿದೆ.

**ತೆಂಗಿನ ಕಾಯಿಗೆ ಕಲ್ಲು ಹೊಡೆಯುವುದು :-**

ಇಂತಿಷ್ಟು ನಿಗದಿತ ದೂರದಲ್ಲಿ ಸುಲಿದ ತೆಂಗಿನ ಕಾಯಿಯನ್ನಿರಿಸಿ ಕಲ್ಲುಗಳಿಂದ ಹೊಡೆಯುವ ಕ್ರೀಡೆಯೇ ಇದು. ಇಲ್ಲಿ ನಿಖರತೆ, ಗುರಿ ಮತ್ತು ಸಾಮರ್ಥ್ಯದ ಪರಿಚಯವಾಗುತ್ತದೆ. ಹಬ್ಬ ಹರಿದಿನಗಳಂದು ಭೋಜನ ಮುಗಿಸಿ ವಿಶ್ರಾಂತಿಯ ಸಂದರ್ಭಗಳಲ್ಲಿ ಮರಾಟಿ ಯುವಕರೆಲ್ಲ ಸೇರಿ ತೆಂಗಿನ ಕಾಯಿಗೆ ಗುರಿಯಿಟ್ಟು ಹೊಡೆದು ಸಂತೋಷ ಪಡುತ್ತಾರೆ. ಸಾಮಾನ್ಯವಾಗಿ ಕಲ್ಲು ಹೊಡೆಯುವವನಿಂದ ೪೦-೫೦ ಅಡಿ ದೂರದಲ್ಲಿ ತೆಂಗಿನ ಕಾಯಿಯನ್ನಿರಿಸುವುದನ್ನು ಕಾಣಬಹುದು. ಯಾರು ಹೊಡೆದು ತೆಂಗಿನ ಕಾಯಿಯನ್ನು ಹೋಳು ಮಾಡುತ್ತಾರೋ ಅವರಿಗೆ ಆ ತೆಂಗಿನ ಕಾಯಿ ಬಹುಮಾನ. ತೆಂಗಿನ ಕಾಯಿ ಹೊಡೆಯಲು ಸರದಿಯಲ್ಲಿ ಒಬ್ಬನಿಗೆ ಇಂತಿಷ್ಟು ಕಲ್ಲು ಎಂದು ಮೊದಲೇ ನಿಗದಿಪಡಸಲಾಗುತ್ತದೆ.

**ಕಬಡ್ಡಿ :-**

ನಮ್ಮ ದೇಶದ ಗ್ರಾಮೀಣ ಜನಪದ ಕ್ರೀಡೆಗಳಲ್ಲಿ ಕಬಡ್ಡಿ ಒಂದು. ಗ್ರಾಮೀಣ ಪ್ರದೇಶಗಳಲ್ಲಿ ಯುವಕರು ಪ್ರತಿಯೊಂದು ಹಳ್ಳಿಗಳಲ್ಲಿಯೂ ಕಬಡ್ಡಿ ಆಟದಲ್ಲಿ ಪಾಲ್ಗೊಳ್ಳುತ್ತಾರೆ. ಪ್ರಾಥಮಿಕ ಶಾಲೆಯ ಹುಡುಗರಿಂದ ಹಿಡಿದು ಮಧ್ಯವಯಸ್ಕರವರೆಗೂ ಎಲ್ಲಾ ವಯೋಮಾನದವರೂ ಸೇರಿ ಆಡುವ ಆಟ ಕಬಡ್ಡಿ. ಪ್ರತಿವರ್ಷ ನೂರಾರು ಕಬಡ್ಡಿ ಪಂದ್ಯಾಟಗಳು ಜಿಲ್ಲೆಯಾದ್ಯಂತ ನಡೆಯುತ್ತಿರುತ್ತವೆ. ಒಂದೊಂದು ತಂಡದಲ್ಲಿ ಏಳೇಳು ಆಟಗಾರರಿದ್ದು ನಿಗದಿಪಡಿಸಿದ ಕಣದಲ್ಲಿರುತ್ತಾರೆ. ಕಬಡ್ಡಿ ಕಬಡ್ಡಿ ಎಂದು ಹೇಳುತ್ತಾ ಒಂದು ಕಣದ ಆಟಗಾರ ಎದುರಾಳಿಗಳನ್ನು

ಮುಟ್ಟಲು ಪ್ರಯತ್ನಿಸುತ್ತಾರೆ. ಆಗ ಆತನನ್ನು ಎದುರಾಳಿ ತಂಡದವರು ಹಿಡಿದು ನಿಲ್ಲಿಸಿದರೆ ಆತ ತಂಡದಿಂದ ಹೊರಗೆ ಮತ್ತು ಎದುರಾಳಿ ತಂಡಕ್ಕೆ ಅಂಕ ಬರುತ್ತದೆ. ಒಬ್ಬರನ್ನು ಮುಟ್ಟಿ ತಕ್ಷಣ ತನ್ನ ತಂಡಕ್ಕೆ ಮರಳಿದರೆ ಒಂದು ಅಂಕವನ್ನು ತರುತ್ತಾನೆ. ಹೀಗೆ ಮೂರು ಸಾರಿ ಯಾರು ಹೆಚ್ಚು ಅಂಕವನ್ನು ಗಳಿಸುತ್ತಾರೋ ಅವರು ವಿಜಯಿ ತಂಡವಾಗುತ್ತದೆ.

ಜಿಲ್ಲೆಯಾದ್ಯಂತ ಹೊನಲು ಬೆಳಕಿನ ಕಬಡ್ಡಿ ಪಂದ್ಯಗಳು ನಿರಂತರವಾಗಿ ನಡೆಯುತ್ತವೆ.ಇತ್ತೀಚೆಗೆ ಹಣ್ಣು ಮಕ್ಕಳ ಕಬಡ್ಡಿ ಪಂದ್ಯಾಟಗಳೂ ನಡಿಯುತ್ತಿರುವುದು ಸ್ವಾಗತಾರ್ಹ.

ಇತ್ತೀಚೆಗೆ ಇಂತಹ ಜನಪದ ಕ್ರೀಡೆಗಳನ್ನು ಬೆಳೆಸುವಲ್ಲಿ ಇಂದಿನ ಯುವ ಜನರ ಪಾಲು ಮಹತ್ವದ್ದಾಗಿದೆ. ಎಲ್ಲರೂ ಕ್ರಿಕೇಟ್ ಕ್ರಿಕೇಟ್ ಎಂಜು ಬೊಬ್ಬೆ ಹೊಡೆಯಲಾರಂಭಿಸಿದ್ದಾರೆ. ಅಲ್ಲಿರುವಂತಹ ಬಂಡವಾಳ, ಮೋಸದಾಟಗಳೆಲ್ಲ ನಮ್ಮ ಜನಪದ ಕ್ರೀಡೆಗಳಲ್ಲಿ ಕಂಡುಬಾರದು. ಜನಪದ ಕ್ರೀಡೆಗಳನ್ನು ಪುನರುಜ್ಜೀವನಗೊಳಿಸುವತ್ತ ಜನಸಾಮಾನ್ಯರು ಮತ್ತು ಸರಕಾರ ಗಮನಹರಿಸಬೇಕಾಗಿದೆ.

**೫.೭ ಕಸುಬು-ವ್ಯವಸಾಯ**

ಮಾನವ ತನ್ನ ಬದುಕನ್ನು ನಿಭಾಯಿಸಲು ಒಂದಲ್ಲ ಒಂದು ಕಸುಬನ್ನು ಅವಲಂಬಿಸಲೇಬೇಕಾಗುತ್ತದೆ. ಅದು ಆತನಿಗೆ ಅನಿವಾರ್ಯವೂ ಹೌದು. ಹಲವಾರು ಮಾರ್ಗಗಳಿದ್ದರೂ ತನಗೆ ಪ್ರಿಯವಾದ, ಒಪ್ಪಿತವಾದ ವೃತ್ತಿಯನ್ನೇ ಆಯ್ದುಕೊಳ್ಳುತ್ತಾನೆ. ಅದು ತಲೆತಲಾಂತರದಿಂದ ಹಿರಿಯರಿಂದ ಕಿರಿಯರಿಗೆ ವರ್ಗಾಯಿಸಲ್ಪಡುತ್ತಲೇ ಬರುತ್ತದೆ. ಅದರಲ್ಲಿ ಪರಿಣತಿಯನ್ನು ಪಡೆದಂತೆ ತಮ್ಮ ಕುಟುಂಬದಲ್ಲಿ ಸದಸ್ಯರು ಪರಿಣತಿಯನ್ನು ಪಡೆಯುವಂತೆ ಮಾಡುತ್ತಾನೆ. ಮಾನವನ ಇತಿಹಾಸದತ್ತ ನೋಟ ಹರಿಸಿದಾಗ ಮೊದಲು ಬೇಟೆಯಾಡಿ ಜೀವನ ಸಾಗಿಸುತ್ತಾ ಬಂದಂತೆ ಕೃಷಿಯನ್ನು ಕಂಡುಕೊಂಡು ಒಂದು ಸಂತೃಪ್ತ ಜೀವನದೆಡೆಗೆ ಹೆಜ್ಜೆ ಹಾಕಿಕೊಂಡು ಬಂದಿರುವುದು ತಿಳಿದುಬರುತ್ತದೆ. ಅಂದಿನಿಂದ ಇಂದಿನವರೆಗೂ ಬೇಟೆ, ಕೃಷಿ ಇವೆರಡರ ಜೊತೆಗೆ ಇನ್ನೆಷ್ಟೋ ರೀತಿಯಲ್ಲಿ ಪರಿಣತಿಯನ್ನು ಪಡೆದುಕೊಂಡು ಬಂದ ಮಾನವರು ಇಂದು ವೈಜ್ಞಾನಿಕವಾಗಿ ಸಾಗುತ್ತಿದ್ದಾರೆ. ಎಲ್ಲಾ ಸಾಧನೆಗಳಿಗೆ ಮೂಲ ಆಧಾರ ಈ ಬೇಟೆ ಮತ್ತು ಕೃಷಿ ಎಂದು ಹೇಳಿದರೆ ತಪ್ಪಿಲ್ಲ.

ಒಂದು ಸಮುದಾಯದ ಆರ್ಥಿಕ ಸ್ಥಿತಿಗತಿಗಳನ್ನು ತಿಳಿದುಕೊಳ್ಳಲು ಆ ಸಮುದಾಯದ ವೃತ್ತಿ, ಬುದ್ಧಿಮತ್ತೆಗಳೆಲ್ಲವೂ ಮುಖ್ಯವಾಗಿರುತ್ತದೆ. ದೈವದತ್ತವಾದ ಪ್ರಕೃತಿ ಸಂಪತ್ತನ್ನು ಮರಾಟಿಗರು ಬಳಸಿಕೊಳ್ಳುವುದರಲ್ಲಿ ಸಿದ್ಧಹಸ್ತರು. ಪ್ರಾಚೀನ ಕಾಲದಲ್ಲಿ ಯಾರೊಬ್ಬರ ಒಡೆತನಕ್ಕೂ ಸೇರದ ಸಾರ್ವಜನಿಕ ಕಾಡಿನಲ್ಲಿ ಗಿರಿಜನರು ಕಾಡಿನ ಸ್ವಯಂ ಪ್ರಭುಗಳಾಗಿ ಕಾಡಿನ ಉತ್ಪನ್ನಗಳನ್ನು ಬಳಸಿ ಕಾಡುಪ್ರಾಣಿಗಳ ಬೇಟೆಯಾಡಿ ತಿಂದುಂಡು ಬದುಕಿದವರು. ಆಹಾರದ ಕೊರತೆಯಾದಾಗ, ಕಾಡಿನ ಸಮತಟ್ಟು ನೆಲ ನೋಡಿ ಕಾಡಿನ ಗಿಡಗಂಟೆಗಳನ್ನು ಕಡಿದು ಸುಟ್ಟು ಮಳೆಗಾಲದಲ್ಲಿ ನೆಲ ಮೆದುವಾದಾಗ ನೆಲವನ್ನು ಕೆದರಿ ರಾಗಿ, ಭತ್ತ, ಧಾನ್ಯಗಳನ್ನು ಬಿತ್ತಿ ಬೇಸಾಯ ಮಾಡಿಕೊಂಡು ಬಂದವರು. ಇತ್ತೀಚಿನವರೆಗೂ ಕುಮೇರಿ ಬೇಸಾಯವನ್ನು ಮಾಡಿಕೊಂಡು ಬಂದ ಅನುಭವಗಳನ್ನು ಜಿಲ್ಲೆಯ ಅನೇಕ ಹಿರಿಯರು

ನೆನಪಿಸಿಕೊಳ್ಳುತ್ತಾರೆ. ಇಲ್ಲಿ ಅರಣ್ಯ ಸಂಸ್ಕೃತಿ ಮತ್ತು ಕೃಷಿ ಸಂಸ್ಕೃತಿಗಳೆರಡರ ಮಿಳಿತವನ್ನು ನಾವು ಕಾಣಬಹುದು. ಮರಾಟಿಗರು ಯಾವತ್ತು ಕೃಷಿ ಮತ್ತು ಕುಲಕಸುಬುಗಳನ್ನು ಆರ್ಥಿಕವಾದ ಲಾಭದ ಮೇಲೆ ಲೆಕ್ಕ ಹಾಕಿದವರಲ್ಲ. ಕೃಷಿಯಲ್ಲಿ ದೊರೆತ ಉತ್ಪನ್ನಗಳನ್ನು ದೇವರು ನೀಡಿದ ವರವೆಂದು ಬೇಕಾದಷ್ಟು ಮಾತ್ರ ಬಳಸಿಕೊಂಡು ಬಂದವರು.

ಭಾರತೀಯ ಸಾಮಾಜಿಕ ವ್ಯವವಸ್ಥೆಯು ವೃತ್ತಿಯಾಧಾರಿತ ಸಂಕೀರ್ಣ ವ್ಯವಸ್ಥೆಯಾಗಿದೆ. ಬಹುತೇಕ ಸಮುದಾಯಗಳು ಪರಂಪರಾಗತ ಒಂದೊಂದು ವೃತ್ತಿಯಲ್ಲಿ ಗುರುತಿಸಿಕೊಂಡವರು. ಆದರೆ ಬುಡಕಟ್ಟು ಸಮುದಾಯಗಳು ಯಾವುದೇ ರೀತಿಯ ನಿರ್ದಿಷ್ಟ ವೃತ್ತಿಯನ್ನು ಹೊಂದಿದವರಲ್ಲ. ತಮಗೆ ತಿಳಿದ ಎಲ್ಲಾ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಬಂದವರಿವರು. ಪರಂಪರಾಗತ ಕಸುಬುಗಳು ಮತ್ತು ಆಧುನಿಕ ಕಾಲದ ಎಲ್ಲಾ ಕೆಲಸಗಳ ಜೊತೆ ಅನುಸಂಧಾನ ಮಾಡಿಕೊಂಡ ಮರಾಟಿಗರು ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳುವಲ್ಲಿ ಹೋರಾಟ ಮಾಡುತ್ತಲೇ ಬಂದಿದ್ದಾರೆ.

ಮಹಾರಾಷ್ಟ್ರದಿಂದ ವಲಸೆ ಬಂದವರಾದ ಮರಾಟಿಗರು ಆರಂಭದಲ್ಲಿ ಜಿಲ್ಲೆಯ ಮತ್ತು ಒಟ್ಟು ಈ ಪ್ರದೇಶಗಳ ಗುಡ್ಡ, ಬೆಟ್ಟಕಾಡುಗಳ ಪರಿಸರಗಳಲ್ಲಿ ನೆಲೆನಿಂತರು. ಈ ಪ್ರದೇಶಗಳು ಮಾನವನ ನೆಲೆಗೆ ಎಲ್ಲಾ ರೀತಿಯ ನೆಲ-ಜಲ, ಆಹಾರಗಳನ್ನು ಒದಗಿಸಿಕೊಡುವಲ್ಲಿ ಮಹತ್ತರ ಪಾತ್ರ ವಹಿಸಿವೆ ಎಂದು ಹೇಳಬಹುದು. ಜನಪದರು ಎಂದೂ ಪ್ರಕೃತಿಯ ವಿರುದ್ಧವಾಗಿ ಹೋದವರಲ್ಲ. ಅನಕ್ಷರಸ್ಥರಾಗಿದ್ದರೂ ಪ್ರಕೃತಿ, ಪರಿಸರ ಹೀಗೆ ಸಕಲವನ್ನೂ ಪೂಜನೀಯವಾಗಿ ಕಾಣುತ್ತಿದ್ದರು. ಅವುಗಳನ್ನು ಬೆಳಸಿ, ಪೋಷಿಸಿ, ರಕ್ಷಿಸಿ ಬೆಳವಣಿಗೆಗೆ ಕಾರಣರಾದರು. ಅಕ್ಷರಸ್ಥರು, ನಾಗರಿಕರು ಎಂದೆಲ್ಲ ಕರೆಯಲ್ಪಡುವ ಇಂದಿನ ಪೀಳಿಗೆ ಪರಿಸರವನ್ನು ಸಂಪೂರ್ಣವಾಗಿ ಅಲಕ್ಷಿಸಿ ನಿರ್ನಾಮ ಮಾಡುತ್ತಾ ಬರುತ್ತಿದೆ. ಪರಿಸರ ಅಸಮತೋಲನಗೊಂಡು ವೈಪರೀತ್ಯಗಳು ಸಂಭವಿಸಿದಾಗ ಎಚ್ಚೆತ್ತುಕೊಂಡು (ಸಂಪೂರ್ಣವಾಗಿ ಇನ್ನೂ ಎಚ್ಚೆತ್ತುಕೊಂಡಿಲ್ಲ). 'ಕಾಡು ರಕ್ಷಿಸಿ' 'ಮರ ಬೆಳಸಿ' 'ಮಣ್ಣು ರಕ್ಷಿಸಿ' ಎಂಬುದಾಗಿ ಕೂಗಲಾರಂಭಿಸಿದ್ದೇವೆ. ಮರಾಟಿಗರು ಹಿಂದಿನಿಂದಲೂ ಪಾರಂಪರಿಕ ಕೃಷಿಯನ್ನೇ ಮಾಡಿಕೊಂಡು ಬಂದವರು. ಕಿರಿಯ ತಲೆಮಾರು ಆಧುನಿಕ ನಗರ ಕೇಂದ್ರಿತ ಬದುಕಿಗೆ ಮಾರುಹೋಗುತ್ತಿದ್ದರೆ ಹಿರಿಯ ತಲೆಮಾರು ಇಂದಿಗೂ ಸಾಂಪ್ರದಾಯಿಕ ಕೃಷಿಯನ್ನೇ ನಂಬಿಕೊಂಡು ಬರುತ್ತಿದ್ದಾರೆ. ಪಾರಂಪರಿಕ ಬೆಳೆಗಳನ್ನು ಆಯಾ ಪ್ರದೇಶಕ್ಕನುಗುಣವಾಗಿ ಬೆಳೆಸಿದರೆ ಮಾತ್ರ ಅದು ನಮ್ಮನ್ನು ಬೆಳೆಸುತ್ತದೆ. ''ಪ್ರತಿಯೊಂದು ಬೆಳೆಗಳಿಗೂ ಪ್ರಾದೇಶಿಕ ಬೇರುಗಳಿವೆ. ತಾಂತ್ರಿಕವಾಗಿ ಸಾಧ್ಯವಿದೆಯೆಂದು ಒಂದು ಪ್ರದೇಶದಲ್ಲಿ ಪರಾಂಪರಾಗತವಾಗಿದ್ದ ಬೆಳೆಯನ್ನು ಇನ್ನೊಂದು ಕಡೆ ಬೆಳೆಸಿದರೆ ಸರಕಾರವೇ ಅದನ್ನು ನಾಶಪಡಿಸಬೇಕು. ಅಸಾಧ್ಯವಾದರೆ ನಿಸರ್ಗವೇ ಅದನ್ನು ನಿರ್ನಾಮ ಗೊಳಿಸುತ್ತದೆ.'' ಎಂಬ ಖ್ಯಾತ ಪರಿಸರವಾದಿ ಸುಂದರಲಾಲ್ ಬಹುಗುಣ ಅವರ ಮಾತುಗಳು ಅಕ್ಷರಸಃ ಸತ್ಯ. ಪ್ರಾದೇಶಿಕ ಪಾರಂಪರಿಕ ಅಸಮತೋಲನದ ಬೆಳೆಗಳನ್ನು ಬೆಳೆಸುವುದರಲ್ಲಿ ಆಸಕ್ತಿ ವಹಿಸದೇ ಇರುವುದು ಆರೋಗ್ಯಕರ ಬೆಳವಣಿಗೆ. ದಕ್ಷಿಣ ಕನ್ನಡ ಜಿಲ್ಲೆಯ ಮರಾಟಿಗರು ಹಿಂದಿನ ಕಾಲದಿಂದ ಇಂದಿನವರೆಗೂ ಕೃಷಿ, ಕೂಲಿಯನ್ನೆ ಮಾಡಿಕೊಂಡು ಬಂದಿದ್ದಾರೆ. ಕೂಲಿಕಾರ್ಮಿಕರಾಗಿ ಮರಾಟಿಗರು ನಿಷ್ಠೆಗೆ ಹೆಸರಾದವರು. ಯಾವತ್ತು ಯಜಮಾನರಿಗೆ ಎರಡು ಬಗೆದವರಲ್ಲ. ಎಲ್ಲಾ ಕೆಲಸಗಳನ್ನು ವಿನಯದಿಂದಲೇ ತಾಳ್ಮೆಯಿಂದಲೇ ಕಲಿಯುತ್ತಾ ಬಂದಿದ್ದಾರೆ.



ಒನಕೆ, ಮೊರ, ಇನ್ನಿತರ ಪರಿಕರಗಳು



ಕಂಚು, ತಾಮ್ರಗಳ ಪಾತ್ರೆಗಳು



ಪೂಜಾ ಸಾಮಾಗ್ರಿಗಳು



ಚೆನ್ನೆ ಮಣೆ

ದಕ್ಷಿಣ ಕನ್ನಡ, ಉಡುಪಿ, ಕೊಡಗು ಮತ್ತು ಕಾಸರಗೋಡು ಜಿಲ್ಲೆಗಳಲ್ಲಿ ನೆಲಸಿದ ಮರಾಟಿಗರು ಮೊತ್ತಮೊದಲು ಕಾಡಿನ, ಬೆಟ್ಟದ ಅಂಚಿನಲ್ಲಿ ಬೇಸಾಯ ಕುಮೇರಿ (Shifting cultivation)ವನ್ನು ಮಾಡಿಕೊಂಡು ಬಂದವರು. ಕಾಡಿನ ಸನಿಹದಲ್ಲಿ ಇದ್ದ ಇವರಿಗೆ ಸಹಜವಾಗಿಯೇ ಚಿಕ್ಕಪುಟ್ಟ ಪ್ರಾಣಿಗಳನ್ನು ಬೇಟೆಯಾಡುವುದು ಅನಿವಾರ್ಯವೂ ಆಗಿತ್ತು. ಈ 'ಸ್ಥಳಾಂತರಿ ಸಾಗುವಳಿ'ಯಲ್ಲಿ ಒಂದು ಸಾರಿ ಭತ್ತ ಬೆಳೆದರೆ ಅದರ ನಂತರ ರಾಗಿ, ಹುರುಳಿ, ತರಕಾರಿ ಹೀಗೆ ನಾನಾ ರೀತಿಯ ಬೆಳೆಗಳನ್ನು ಬೆಳೆಯುತ್ತಾ ಬಂದವರು. ಗಿಡಗಂಟಿಗಳನ್ನು ಸುಟ್ಟು ಎತ್ತುಗಳ ಅಥವಾ ತಾವೇ ಗುದ್ದಲಿ ಹಾರೆಯಿಂದ ನೆಲ ಅಗೆದು ಹಸನುಮಾಡಿ ಬಿತ್ತುತ್ತಿದ್ದರು. ಬರಗಾಲ ಬಂದರೆ ಯಾವುದೇ ಬೆಳೆಬಾರದೆ ಹಣ್ಣು ಹಂಪಲು ಗೆಡ್ಡೆ-ಗೆಣಸುಗಳನ್ನು ತಿಂದು ಬದುಕಿದವರು. ಬೆಳೆದ ಬೆಳೆಗಳಿಗೆ ಕಾಡುಪ್ರಾಣಿಗಳ ಉಪಟಲ ಕಂಡುಬಂದಾಗ ರಾತ್ರಿಯೆಲ್ಲ ಮರಗಳ ಕವಲುಗಳ ಮಧ್ಯೆ ಹಲಗೆ ಹಾಕಿ ಕುಳಿತು ಕಾಯುವ ಕೆಲಸ ಮಾಡುತ್ತಿದ್ದರು. ಹಗಲಲ್ಲಿ ಬೆಳೆಗಳ ಆರೈಕೆ, ಕೂಲಿಕೆಲಸ ಮಾಡಿದರೆ ಇರುಳಲ್ಲಿ ಬೆಳೆಯನ್ನು ಕಾಯುವ ಶ್ರಮದಾಯಕ ಕೆಲಸ ಮಾರಾಟಿಗರದ್ದಾಗಿತ್ತು. ಜಿಲ್ಲೆಯ ಕೆಲವೊಂದು ಪ್ರದೇಶಗಳಲ್ಲಿ ಇತರ ಸಮುದಾಯದವರಿಂದ ಶೋಷಣೆಗೆ ಒಳಗಾಗಿದ್ದಾರೆ. ಅತ್ಯುತ್ತಮ ಉದಾಹರಣೆ ಎಂದರೆ ಕೊಡಗು ಜಿಲ್ಲೆಯ ನಿಡ್ಯಮಲೆ ಪ್ರದೇಶ. ಇಲ್ಲಿ ನಿಡ್ಯಮಲೆ ಅತೀ ಎತ್ತರ ಬೆಟ್ಟ ಗುಡ್ಡ. ಅದರ ತುತ್ತತುದಿಯಲ್ಲಿ ಸುಮಾರು ೨೦-೪೦ ಕುಟುಂಬಗಳು ನೆಲಸಿವೆ. ಮೊದಲು ಗುಡ್ಡದ ತಪ್ಪಲಲ್ಲಿ ಸಮೃದ್ಧ ನೀರಿನಾಶ್ರಯವಿರುವ ಜಾಗದಲ್ಲಿ ವಾಸಿಸುತ್ತಿದ್ದರು. ಇತರ ಸಮುದಾಯದವರು ಬಂದು ಬಲತ್ಕಾರದಿಂದ ಓಡಿಸಿದ್ದರಿಂದ ಈ ಗುಡ್ಡದ ತುದಿಗೆ ಬಂದು ಸಾಹಸದ ಜೀವನ ನಡೆಸಬೇಕಾಯಿತು ಎಂದು ಅಲ್ಲಿನ ಮರಾಟಿಗರು ತಮ್ಮ ದುರಾದೃಷ್ಟವನ್ನು ತೋಡಿಕೊಳ್ಳುತ್ತಾರೆ. ಈ ಪ್ರದೇಶಕ್ಕೆ ಸರಿಯಾದ ನೀರಿನಾಶ್ರಯವಿಲ್ಲ. ಸಾರಿಗೆ ವ್ಯವಸ್ಥೆಯಿಲ್ಲ. ತಲೆಹೊರೆಯ ಮೂಲಕ ಐದು-ಹತ್ತು ಕಿ.ಮೀ ಕಾಲ್ನಡಿಗೆಯಲ್ಲಿ ಸಾಗಬೇಕಾದ ಸಾಹಸದ ಜೀವನ ಇವರದ್ದು. ಗುಡ್ಡದ ತುದಿಯಲ್ಲಿಯೇ ಗೋಡಂಬಿ ಗಿಡಗಳನ್ನು, ಅಡಿಕೆ ಸಸಿಗಳನ್ನು ನೆಟ್ಟು ಬದುಕಿಸಿ ಫಸಲು ಪಡೆಯುತ್ತಿರುವುದು ಕಂಡುಬರುತ್ತಿದೆ. ಹೀಗೆ ದಕ್ಷಿಣ ಕನ್ನಡ, ಕಾಸರಗೋಡು ಜಿಲ್ಲೆಯಲ್ಲಿ ಅನೇಕ ಗುಡ್ಡ, ಬೆಟ್ಟಗಳಲ್ಲಿ ಇಂದಿಗೂ ಅನೇಕ ಮರಾಟಿಗರು ಸಾಹಸಮಯ ಜೀವನ ಮಾಡುತ್ತಿದ್ದಾರೆ.

**ಬೇಟೆ**

ಮಾನವನ ಬೆಳವಣಿಗೆಯ ಇತಿಹಾಸದಲ್ಲಿ ಪ್ರಮುಖವಾಗಿ ಐದು ಹಂತಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಬೇಟೆ, ಪಶುಸಂಗೋಪನೆ, ಆಹಾರ ಸಂಗ್ರಹಣೆ, ಕೃಷಿ ಮತ್ತು ವಿಜ್ಞಾನಯುಗ. ಇತಿಹಾಸಯುದ್ದಕ್ಕೂ ಒಂದಲ್ಲ ಒಂದು ವೃತ್ತಿಯನ್ನು ಕೈಗೊಂಡ ಮಾನವ ಪ್ರಪ್ರಥಮವಾಗಿ ಹಸಿವೆ, ನಿದ್ರೆ, ಮೈಥುನಗಳಿಗೆ ಸೀಮಿತವಾಗಿತ್ತು. ಆಹಾರ ಸಂಗ್ರಹಣೆ ಪ್ರಮುಖ ಉದ್ದೇಶವಾಗಿದ್ದರಿಂದ ಮೊದಲು ಬೇಟೆ ಆತನ ಮೂಲ ವೃತ್ತಿಯಾಗಿತ್ತು ಎನ್ನಲಡ್ಡಿಯಿಲ್ಲ.

ಮರಾಟಿಗರು ಕೂಡ ವಲಸೆ ಬಂದ ಪ್ರಥಮದಲ್ಲಿ ಬೇಟೆಯಾಡುತ್ತಿದ್ದಿರಬಹುದು. ಆಹಾರಕ್ಕಾಗಿ ಬೇಟೆಯಾಡುವುದು ಆಗ ಅನಿವಾರ್ಯವೂ ಆಗಿರುವುದು ಸಹಜ. ಇಂದು ಬೇಟೆ ಒಂದು ಹವ್ಯಾಸ ಮಾತ್ರ. ಅದು ಒಂದು ವೃತ್ತಿಯಾಗಿ ಉಳಿದಿಲ್ಲ. ಅನಿವಾರ್ಯವೂ ಅಲ್ಲ. ಕೂಲಿಕೆಲಸವಿಲ್ಲದಿದ್ದಾಗ ಅಥವಾ ಗೆಳೆಯರೆಲ್ಲಾ ಸೇರಿದ ಸಂದರ್ಭದಲ್ಲಿ

ರಾತ್ರಿ ಅಪರೂಪಕ್ಕೆ ಬೇಟೆಗೆ ಹೋಗುವುದು ಕಂಡುಬರುತ್ತದೆ. ಇವರು 'ಶಿಕಾರಿ' ಬೇಟೆಯನ್ನು ಊರಿನವರೆಲ್ಲರೂ ಅಥವಾ ತಮ್ಮ ಕುಟುಂಬದ ಸದಸ್ಯರೆಲ್ಲರೂ ಸೇರಿ ಆಡುವುದು ಇತ್ತು ಎಂದು ಹಿರಿಯರು ತಮ್ಮ ಅನುಭವವನ್ನು ತಿಳಿಸುತ್ತಾರೆ. ಕೆಲವು ವಿಶೇಷ ದಿನಗಳಲ್ಲಿ 'ಸಾಂಪ್ರದಾಯಕ' ಬೇಟೆಯಾಡುವುದು ಇದೆ. ಉದಾ : ಕೆಡ್ಡಸ. ಕೆಡ್ಡಸದ ದಿನದಂದು ಪ್ರಾಣಿ ಮಾಂಸ ತಿನ್ನಬೇಕು. ಇಲ್ಲದಿದ್ದರೆ ಎಲುಬು ಸುರಿ ಬೀಳುವುದು ಎಂಬ ನಂಬಿಕೆ ಇಡೀ ಜಿಲ್ಲೆಯ ಜನರಲ್ಲಿದೆ. ಊರಿನ ಎಲ್ಲಾ ಸಮುದಾಯಗಳ ಜನರೆಲ್ಲರ ಜೊತೆ ಮರಾಟಿ ಯುವಕರೂ ಹಿರಿಯರೂ ಸೇರಿ ಬೇಟೆಗೆ ಹೋಗುತ್ತಾರೆ. ಅತೀ ಹೆಚ್ಚು ಜನರಿದ್ದರೆ 'ಶಿಕಾರಿ' ಎಂದೂ, ಓರ್ವ ಅಥವಾ ಬೆರಳೆಣಿಕೆಯ ಜನ ಸೇರಿ ಹೋಗುವುದನ್ನು ಬೇಟೆ ಎಂದು ಕರೆಯಲಾಗುತ್ತದೆ. ಶಿಕಾರಿಯಲ್ಲಿ ಕೆಲವರ ಜತೆ ಕೋವಿ, (ನಾಡ ಬಂದೂಕು) ಗಳಿದ್ದರೆ ಇತರ ಸಹಾಯಕಕ್ಕಾಗಿ ನಾಯಿಗಳನ್ನು ಹಿಡಿದುಕೊಂಡು ಹೋಗುತ್ತಾರೆ. ಸಹಾಯಕರೆಲ್ಲ ಕೇಕೆ ಹಾಕುತ್ತ ಒಂದು ಕಡೆಯಿಂದ ಪ್ರಾಣಿಗಳನ್ನು ಅಟ್ಟಿಸಿಕೊಂಡು ಬಂದರೆ ಬಂದೂಕು ಹಿಡಿದುಕೊಂಡವರು ಪ್ರಾಣಿಗೆ ಗುರಿಯಿಡುತ್ತಾರೆ. ಜಿಲ್ಲೆಯ ಅನೇಕ ಮರಾಟಿಗರು ಬೇಟೆಯ ಸಲುವಾಗಿಯೇ ನಾಯಿಗಳನ್ನು ದಷ್ಟಪುಷ್ಟವಾಗಿ ಬೆಳೆಸುತ್ತಾರೆ. ನಿಯತ್ತಿಗೆ ಹೆಸರಾದ ನಾಯಿಗಳು ಬೇಟೆಯನ್ನು ನಿರೀಕ್ಷಿಸಿದಂತೆ ಯಜಮಾನನಿಗೆ ಸಹಾಯ ಮಾಡುತ್ತವೆ. ಕೆಲವೊಂದು ಸಣ್ಣ ಪುಟ್ಟ ಪ್ರಾಣಿಗಳನ್ನು ಬೇಟೆಯಾಡಿ ಮನೆಗೆ ತಂದುಕೊಡುವಷ್ಟು ಜಾಣತನವನ್ನು ತೋರಿಸುವ ನಾಯಿಗಳಿದ್ದವು ಎಂದು ಹಿರಿಯರು ನೆನಪಿಸುತ್ತಾರೆ. ದಟ್ಟವಾದ ಕಾಡುಗಳಲ್ಲಿ ಮೊಲ, ಮುಳ್ಳುಹಂದಿ, ಕಾಡುಹಂದಿ, ಚಿಪ್ಪುಹಂದಿ, ಬೆರು, ಬರಿಂಕ, ಅಲಂಕು, ಹೀಗೆ ಇನ್ನಿತರ ಪ್ರಾಣಿಗಳ ಜಾಡು ಹಿಡಿಯುವಲ್ಲಿ ಎಲ್ಲ ನಾಯಿಗಳು ಪ್ರಮುಖ ಪಾತ್ರವಹಿಸುತ್ತವೆ. ಕಾಡುಹಂದಿ, ಮುಳ್ಳುಹಂದಿಯಂತಹ ದೊಡ್ಡ ದೊಡ್ಡ ಪ್ರಾಣಿಗಳು ಬೇಟೆಯಲ್ಲಿ ಸಿಕ್ಕರೆ ಎಲ್ಲರೂ ಹಂಚಿ ತಿನ್ನುತ್ತಾರೆ.

ಇಂದು ಕಾಡೆಲ್ಲಾ ವಿನಾಶದ ಅಂಚಿಗೆ ಬಂದಿದೆ. ದಟ್ಟವಾದ ಕಾಡುಗಳು ವಿರಳವಾಗಿವೆ. ಇದ್ದರೂ ಪ್ರಾಣಿಗಳು ಅಲ್ಪಸಂಖ್ಯಾತವಾಗಿವೆ. ಕೆಲವೇ ಕೆಲವು ಜಾತಿಯ ಪ್ರಾಣಿಗಳು ಕಂಡುಬರುತ್ತವೆ. ಬಲೆಬೀಸುವ ಮೂಲಕ ಮತ್ತು ಉರುಳು ಹಾಕಿಡುವ ಮೂಲಕ ಬೇಟೆಯಾಡುವುದು ಬೇಟೆಯ ಇನ್ನೊಂದು ರೀತಿ. ಅನೇಕ ಮರಾಟಿಗರು ಹಿಂದಿನ ಕಾಲದಲ್ಲಿ ಬಲೆಯನ್ನು ಉಪಯೋಗಿಸಿ ಮೊಲದಂತಹ ಪ್ರಾಣಿಗಳನ್ನು ಹಿಡಿಯುತ್ತಿದ್ದರು. ಮರಗಳ ತರಗೆಲೆಗಳ ಮಧ್ಯೆ ಬಲೆ ಹಾಕಿದ್ದು ಪ್ರಾಣಿಗಳು ಬಂದು ಸಿಕ್ಕಿ ಬಿದ್ದಾಗ ಬಂದು ಕೊಂದು ತೆಗೆದುಕೊಂಡು ಹೋಗುತ್ತಾರೆ. ಪ್ರಾಣಿಗಳು ತೋಟಕ್ಕೆ ಗದ್ದೆಗೆ ಹಾಗೂ ಇತರೆ ಬೆಳೆಗಳಿಗೆ ಬರುವ ದಾರಿಯನ್ನು ಹುಡುಕುತ್ತಾರೆ, ಎತ್ತರದಿಂದ ಇಳಿದು ಬರುವ ದಾರಿಯನ್ನು ನೋಡಿ ಪ್ರತಿ ದಿನ ಪ್ರಾಣಿ ಬರುತ್ತದೆಯೋ ಇಲ್ಲವೋ ಎಂದು ನಿಗಾ ವಹಿಸುತ್ತಾರೆ. ದಿನ ಬಿಟ್ಟು ದಿನ ಬರುವ ಹಂದಿಯಾಗಲೀ, ಮುಳ್ಳುಹಂದಿ ಹಾಗೂ ಇತರೆ ಪ್ರಾಣಿಗಳನ್ನು ಗಮನಿಸಿ ಮೋಟಾರ್ ಸೈಕಲ್‌ನ ಗೇರ್ ತಂತಿಯನ್ನು ಉರುಳು ಮಾಡಿ ಕಟ್ಟುತ್ತಾರೆ. ಸ್ವಲ್ಪ ದೂರದಲ್ಲಿ ಅವಿತು ಕುಳಿತಿರುತ್ತಾರೆ. ಪ್ರಾಣಿ ಸರಾಗವಾಗಿ ಬಂದು ಮೇಲಿಂದ ಕೆಳಗೆ ಇಳಿದು ಬರುವ ರಭಸದಲ್ಲಿ ಪ್ರಾಣಿಯ ಕೊರಳಿಗೆ ತಂತಿ ಬಿಗಿದು ಪ್ರಾಣಿ ಕಿರುಚುವ ಸಂದರ್ಭದಲ್ಲಿ ದೊಣ್ಣೆ, ಕತ್ತಿ ಹಿಡಿದು ಅವಿತುಕೊಂಡಿರುವವರು ಬಂದು ಪ್ರಾಣಿಯನ್ನು ಕೊಲ್ಲುವ ಮೂಲಕ ಬೇಟೆಯಾಡುತ್ತಾರೆ.

ಅಡಿಕೆ ಗೊನೆ ಹಣ್ಣಾದಾಗ ತಿನ್ನಲು ಬರುವ ಸಸ್ತನಿ ಬಾವಲಿಯನ್ನು ಹಿಡಿಯಲು ಕತ್ತರಿಯಾಕಾರದ ಸಲಕರಣೆಯನ್ನು ಬಳಸುತ್ತಾರೆ. ಅಡಿಕೆ ಮರ ಹತ್ತಿ ಹಣ್ಣಾದ ಅಡಿಕೆ ಗೊನೆಯ ಮೇಲ್ಗಡೆ ಕತ್ತಿಯಾಕಾರದ ಬಲೆಯನ್ನು ಇಡುತ್ತಾರೆ. ಬಾವಲಿ ಹಾರಿ ಬಂದು ಕುಳಿತ ತಕ್ಷಣ ಅದರ ಕಾಲುಗಳಿಗೆ ಗರಗಸದಂತಿರುವ ಕಬ್ಬಿಣದ ತುಂಡುಗಳು ಜೋಡಣೆಯಾಗುತ್ತವೆ. ಬಾವಲಿಗೆ ಹಾರಾಡಲು ಸಾಧ್ಯವಾಗುವುದಿಲ್ಲ. ಬಾಳೆಗೊನೆಯ ತುದಿಯಲ್ಲಿರುವ ಸಿಹಿರಸವನ್ನು ಹೀರಲು ಬಾವಲಿಗಳು ಬಂದಾಗ 'ಮರಕೋಲು' ಎಂಬ ಅಂಟನ್ನು ಚಿಕ್ಕ ಕೋಲಲ್ಲಿ ಜೋಡಿಸಿರುತ್ತಾರೆ. ಬಾವಲಿ ಅದರಲ್ಲಿ ಸಿಕ್ಕಿಹಾಕಿಕೊಳ್ಳುತ್ತದೆ. ಗಾಳ ಹಾಕುವುದರ ಮೂಲಕ ಮೀನನ್ನು ಬೇಟೆಯಾಡುವ ಹವ್ಯಾಸವೂ ಮರಾಟಿಗರಿಗಿದೆ. ಎರೆಹುಳವನ್ನು ಗಾಳದ ಕೊಕ್ಕೆಗೆ ಸಿಕ್ಕಿಸಿ ಗಾಳ ಹಾಕುತ್ತಾರೆ. ಜಿಲ್ಲೆ ನದಿ ದಡದಲ್ಲಿರುವವರು ವಿವಿಧ ಬೆತ್ತದ ಬುಟ್ಟಿಗಳನ್ನು ಉಪಯೋಗಿಸಿ ಮೀನು ಹಿಡಿಯುತ್ತಾರೆ. ಇತ್ತೀಚೆಗೆ ತಂತ್ರಜ್ಞಾನಗಳಿಂದ ಅನೇಕ ರೀತಿಯಲ್ಲಿ ಬೇಟೆಯಾಡುವುದು ಸಹಜವಾಗಿದೆ. ವಿದ್ಯುತ್ ಆಧಾರಿತ ಲೈಟನ್ನು ನುರಿತ ಬೇಟೆಗಾರರರು ತಲೆಗೆ ಕಟ್ಟಿಕೊಂಡು ಕಾಡಲ್ಲಿ ತಿರುಗಾಡಿ ಹಂದಿಯಂತಹ ದೊಡ್ಡ ಪ್ರಾಣಿಗಳ ಬೇಟೆಯಾಡುತ್ತಾರೆ. ನಾಡ ಬಾಂಬುಗಳನ್ನು ಆಹಾರದಲ್ಲಿ ಬೆರಸಿ ಅಡಿಕೆ ತೋಟಗಳಲ್ಲಿ ಇಟ್ಟಿರುತ್ತಾರೆ. ಕಾಡು ಹಂದಿಗಳು ಬಂದು ಆಹಾರವನ್ನು, ಗಡ್ಡೆ, ಗೆಣಸುಗಳನ್ನು ಜಗಿದಾಗ ಬಾಂಬು ಸಿಡಿದು ಸಾಯುತ್ತವೆ.

ಹಿಂದಿನಿಂದಲೂ ಕಾಡಿನಲ್ಲಿ ಸಿಗುವ ಜೇನು ತುಪ್ಪವನ್ನು ಸಂಗ್ರಹಿಸುವುದರಲ್ಲಿ ಇವರು ಮುಂದು. ಅದು ಮುಂದುವರಿದುಕೊಂಡು ಬಂದಿದೆ. 'ಪೆರಿಯ' ದಂತಹ ದೊಡ್ಡ ದೊಡ್ಡ ಮರಗಳಲ್ಲಿರುವ ದೊಡ್ಡ ಜೇನನ್ನು ರಾತ್ರೋರಾತ್ರಿ ಶ್ರಮವಹಿಸಿ ತೆಗೆಯುತ್ತಾರೆ. ಜೇನು ಹುಳಕ್ಕೆ ತೆಂಗಿನ ಸಿಪ್ಪೆಯಿಂದ ಹೊಗೆ ಬರಿಸಿ ದೂರಮಾಡಿಸಿ ಜೇನುತುಪ್ಪವನ್ನು ಪ್ಲಾಸ್ಟಿಕ್ ಬಕೇಟು ಅಥವಾ ಇತರೆ ಪಾತ್ರೆಯಲ್ಲಿ ಹಗ್ಗದ ಮುಖೇನ ಕೆಳಗಡೆ ಇಳಿಸುತ್ತಾರೆ. 'ತೊಡುವೆ' 'ಮೊಜಂಟಿ' ಯಂತಹ ಸಣ್ಣಪುಟ್ಟ ಜೇನನ್ನು ಹಗಲಲ್ಲೇ ತೆಗೆಯುತ್ತಾರೆ. ದಶಕದ ಹಿಂದೆ ಯುವಕರೆಲ್ಲಾ ಸೇರಿ ಕಾಡಿಗೆ ಜೇನು ತೆಗೆಯಲು ಹೋಗುತ್ತಿದ್ದುದು ಸಾಮಾನ್ಯ ದೃಶ್ಯವಾಗಿತ್ತು. ಇಂದು ಜೇನು ಸಾಕಾಣಿಕೆಯಲ್ಲಿ ತೊಡಗಿರುವ ಮರಾಟಿಗರು ಜಿಲ್ಲೆಯಾದ್ಯಂತ ಇದ್ದಾರೆ.

**ಬೇಟೆಗೆ ಸಂಬಂಧಿಸಿದ ನಂಬಿಕೆ-ನಿಷೇಧಗಳು**

೦೧. ಬೇಟೆಗೆ ಹೊರಟಾಗ ಯಾರೂ ಎಲ್ಲಿಗೆ ಹೋಗುತ್ತಿರಿ? ಎಂದು ಕೇಳಬಾರದು ಕೇಳಿದರೆ ಅಪಶಕುನವಾದಂತೆ ಎಂಬ ನಂಬಿಕೆ ಮರಾಟಿಗರಲ್ಲಿದೆ.

೦೨. ಬೇಟೆಗೆ ಹೊರಡುವ ಸಂದರ್ಭದಲ್ಲಿ ಕುರ್ದಿ ನೀರು (ಅರಸಿನ ಸುಣ್ಣ ಬೆರೆಸಿದ ನೀರು) ಕೋವಿಗೆ ಚಿಮುಕಿಸುತ್ತಾರೆ. ಇದರಿಂದ ಕೋವಿ ಶುದ್ಧಿಯಾಯಿತು ಎಂಬ ಭಾವನೆಯಿದೆ.

೦೩. ನೆಲದಲ್ಲಿಟ್ಟ ಕೋವಿಯನ್ನು ದಾಟಬಾರದು, ಅಪಶಕುನವಾಗುತ್ತದೆ.

೦೪. ಕೋವಿಯನ್ನು ಹೆಂಗಸರು ಮುಟ್ಟಬಾರದು.

೦೫. ಬೇಟೆಯಾಡಿದ ನಂತರ ಪ್ರಾಣಿ ಅಥವಾ ಪಕ್ಷಿಯ ರಕ್ತವನ್ನು ಕೋವಿಯ ನಳಿಕೆಯ ತುದಿಗೆ ಮುಟ್ಟಿಸಬೇಕು. ಆ ಮೂಲಕ ಕೊಂದದ್ದು ಪಾಪವಾಗುವುದಿಲ್ಲ ಎಂಬ ನಂಬಿಕೆಯಿದೆ.

೦೬. ಬೇಟೆಗೆ ಹೋಗುವ ಸಂದರ್ಭದಲ್ಲಿ ಕಪ್ಪು ಚೀಲವನ್ನೇ (ಗುಂಡು, ಇನ್ನಿತರ ಉಪಕರಣಗಳನ್ನಿರಿಸಲು) ಉಪಯೋಗಿಸಬೇಕು. ರಾತ್ರಿ ಹೊತ್ತಲ್ಲಿ ಕಪ್ಪು ಚೀಲ ಕಾಣುವುದಿಲ್ಲ ಎಂಬ ಕಾರಣವಿರಬಹುದು.

೦೭. ಬೇಟೆಗೆ ಇಬ್ಬರು ಹೋದರೆ ಜೊತೆಯಲ್ಲಿಯೇ ಇರಬೇಕು. ಬೇರೆ ಬೇರೆ ದಿಕ್ಕಿಗೆ ಹೋದರೆ ಆತನನ್ನೇ ಪ್ರಾಣಿ ಎಂದು ಭಾವಿಸಿ ಗಂಡು ಹೊಡೆಯುವ ಸಂಭವವಿದೆ. ಇಂತಹ ಘಟನೆಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಡೆದಿವೆ.

೦೮. ಮುಳ್ಳುಹಂದಿಯನ್ನು ಬೇಟೆಯಾಡಿದರೆ ಅದರ ಮುಳ್ಳನ್ನು ಮನೆಯೊಳಗಡೆ ತರಬಾರದು. ಮುಳ್ಳುಹಂದಿಯ ಮುಳ್ಳು ಮಾಟವಿದ್ದಂತೆ ಎಂಬ ನಂಬಿಕೆಯಿದೆ.

೦೯. ಬೇಟೆಗೆ ಹೋಗುವಾಗ ಕೋವಿಯನ್ನು ಹೆಗಲ ಮೇಲಿರಿಸಬಾರದು. ನಳಿಕೆ ಆಕಾಶದ ಕಡೆಗಿರಬೇಕು. ಕಾಲುದಾರಿಯಲ್ಲಿ ಸಾಲಾಗಿ ಹೋಗುವಾಗ ಅಕಸ್ಮಾತ್ ಎಡವಿದಾಗ ಗುಂಡು ಹೊರಬಂದು ಹಿಂದಿನವನಿಗೆ ಗುಂಡೇಟು ಬೀಳಬಹುದೆಂಬ ಜಾಗೃತೆಯನ್ನು ಕಾಣಬಹುದು.

**೫.೭ ಕರಕುಶಲ ಕಲೆ, ಕಸುಬುಗಳು**

ಶ್ರಮ ಶೀಲತೆ, ಸಾಹಸ ಜೀವನಕ್ಕೆ ಮರಾಟಿಗರು ಹೆಸರಾದವರು. ಜಿಲ್ಲೆಯಲ್ಲಿ ಬೈರರು, ಕೊರಗರು ಕಲಾತ್ಮಕ ಮತ್ತು ನಾಜೂಕಿನ ಕರಕುಶಲ ಕಲೆಗಳನ್ನು ತಲೆತಲಾಂತರದಿಂದ ಬಲ್ಲವರು, ಅದರಲ್ಲಿ ಅವರು ನಿಪುಣರು. ಅದರಿಂದ ಅವರ ಜೀವ ಸಾಗುತ್ತಿತ್ತು. ಮರಾಟಿಗರು ಮಾರಾಟಗಾರರಲ್ಲದಿದ್ದರೂ ತಾವು ಬಳಸಿಕೊಳ್ಳಲು ಅನೇಕ ರೀತಿಯ ಕಲೆಗಳನ್ನು ಬಲ್ಲರು. ಕಾಡಿನಲ್ಲಿ ದೊರಕುವ ಪ್ರತಿಯೊಂದು ಬಳ್ಳಿಗಳಿಂದ ಒಂದೊಂದು ರೀತಿಯ ಪರಿಕರಗಳನ್ನು ತಯಾರಿಸಲು ಶಕ್ತರು. ಕೃಷಿ ಉಪಕರಣಗಳ ಎಲ್ಲಾ ರೀತಿಯ ಮರದ ಹಿಡಿಗಳನ್ನು ತಾವೇ ತಯಾರಿಸಿಕೊಳ್ಳುತ್ತಾರೆ. ಮನೆಯಲ್ಲಿರುವ ಪರಿಕರಗಳೆಲ್ಲವೂ ಪ್ರಕೃತಿಜನ್ಯವಾದವುಗಳೆಂದು ಬೇರೆ ಹೇಳಬೇಕಾಗಿಲ್ಲ. ಆ ಮೂಲಕ ಖರ್ಚಿಲ್ಲದೆ ತಮಗೆ ಬೇಕಾದ ಸಲಕರಣೆಗಳನ್ನು ತಾವೇ ತಯಾರಿಸಿಕೊಳ್ಳುತ್ತಾರೆ.

ಕಾಡಿನಲ್ಲಿ ದೊರಕುವ ಬೆತ್ತ ಮತ್ತು ಇನ್ನಿತರ ಬಳ್ಳಿ (ಮಾದೆರ್, ಚಿಪ್ಪೊಲ್ಟೆ)ಗಳನ್ನು ಬಳಸಿಕೊಂಡು ನಾನಾ ರೀತಿಯ ಬುಟ್ಟಿಗಳನ್ನು ಹೆಣೆದು ತಮ್ಮ ತಮ್ಮ ಮನೆಗೆ ಉಪಯೋಗಿಸುತ್ತಾರೆ. ಗೊಬ್ಬರ, ಮಣ್ಣು ಹೊರಲು ಬೇಕಾದ ಬುಟ್ಟಿಗಳನ್ನು, ಬೆತ್ತ ಅಥವಾ ಬಳ್ಳಿಯನ್ನು ಬಳಸಿಕೊಂಡು ತೊಟ್ಟಿಲು, ಮೊರ (ತಡ್ಪೆ) ಮುಂತಾದ ವಿಶಿಷ್ಟ ರೀತಿಯ ನಾಜೂಕಿನ ಕೆಲಸಗಳನ್ನು ಮಾಡುತ್ತಿದ್ದರು. ಕಾಡಿನಲ್ಲಿರುವ ಪ್ರತಿಯೊಂದು ಮರದ, ಬಳ್ಳಿಗಳ ಹೆಸರುಗಳು ಮತ್ತು ಅವುಗಳ ಬಳಕೆಯನ್ನು ನಿಖರವಾಗಿ ತಿಳಿದಿದ್ದ ಹಿರಿಯರ ಸಂಖ್ಯೆ ಕಡಿಮೆಯಾಗುತ್ತಿದೆ. ಇಂದಿನ ಯುವ ಪೀಳಿಗೆ ಇಂತಹ ಜ್ಞಾನದತ್ತ ಗಮನ ಹರಿಸುತ್ತಿಲ್ಲ. ನಗರ, ಪಟ್ಟಣ ಕೇಂದ್ರಿತ ಬದುಕಿಗೆ ಮಾರುಹೋಗುತ್ತಿದ್ದಾರೆ. ಅವರಿಗೆ ದೇಶಿ ಜ್ಞಾನದ ಬಗ್ಗೆ ದೇಶೀಯ ವಸ್ತು, ಸಲಕರಣೆಗಳ ಬಗೆಗಿನ ಅರಿವನ್ನುಂಟುಮಾಡಬೇಕಾದುದು ಇಂದಿನ ಅಗತ್ಯತೆಗಳಲ್ಲಿ ಒಂದು.



ಹಲಗೆ ಮತ್ತು ನೇಗಿಲು



ಭತ್ತ ಬೇರ್ಪಡಿಸುವ ಪಡಿ

ಹಿಂದಿನ ಕಾಲದಲ್ಲಿ ಮಳೆಗಾಲದ ಸಂದರ್ಭದಲ್ಲಿ ತೋಟದ, ಗದ್ದೆಯ ಕೆಲಸಕಾರ್ಯಗಳನ್ನು ನಿರ್ವಹಿಸುವಾಗ ಗೊರಂಬು (ಗೊರಬೆ)ಗಳು ಅಗತ್ಯತೆ ಬಹಳ ಇತ್ತು. ಬಹುತೇಕ ಕುಟುಂಬದಲ್ಲಿ ಹಿರಿಯರು ಅಂತಹ ಗೊರಂಬು (ತುಳು: ಕೆಡಂಜೊಳು) ಗಳನ್ನು ತಯಾರಿಸಿ ಕೊರತೆಯನ್ನು ನೀಗಿಸುತ್ತಿದ್ದರು. ಹಸಿ ತೆಂಗಿನ ಗರಿಗಳನ್ನು ತೆಗೆದುಕೊಂಡು ಬೆಂಕಿಯಲ್ಲಿ ಬಾಡಿಸಿ ಬೇಕಾದಷ್ಟು ಕತ್ತರಿಸಿಕೊಳ್ಳುತ್ತಿದ್ದರು. ಎಲ್ಲಾ ಗರಿಗಳನ್ನು ಒಂದರ ಮೇಲೆ ಜೋಡಿಸಿ ಡಬ್ಬಳದ (ದೊಡ್ಡ ಗಾತ್ರದ ಸೂಜಿ) ಮೂಲಕ ಹಗ್ಗದಿಂದಲೂ ನೇಯುತ್ತಿದ್ದರು. ಕಾಡಿನಲ್ಲಿ ದೊರಕುವ 'ಕಯ್ಯೊಳು' ಗಿಡದ ಸಿಪ್ಪೆಯ ದಾರವನ್ನೇ ಉಪಯೋಗಿಸುತ್ತಿದ್ದರು. ಈ ದಾರ ಬಹಳ ಗಟ್ಟಿತನದಿಂದ ಕೂಡಿರುತ್ತಿತ್ತು. ಜಡಿಮಳೆ ಬಂದರೂ ಯಾವುದೇ ರೀತಿಯಲ್ಲಿ ನೀರು ಒಳಬಾರದಂತೆ ಬೆಚ್ಚಗಿನ ವ್ಯವಸ್ಥೆ ಈ ಗೊರಬೆಗಳಿಂದ ದೊರಕುತಿತ್ತು. ಮಳೆಗಾಲದ ಗದ್ದೆಯಲ್ಲಿ ನೇಜಿ ಕೀಳುವುದು, ನಾಟಿ ಮಾಡುವುದು, ಅಡಿಕೆ ತೋಟದಲ್ಲಿನ ಕೆಲಸಗಳ ಸಂದರ್ಭದಲ್ಲಿ ಈ ಗೊರಬೆಗಳು ಸಹಾಯಕವಾಗಿತ್ತು. ಇಂದು ಗೊರಬೆಗಳೇ ಇಲ್ಲ. ಮಾರುಕಟ್ಟೆಯಲ್ಲಿ ನಾನಾ ರೀತಿಯ ಪ್ಲಾಸ್ಟಿಕ್ ಕವರುಗಳು ಬಂದಿವೆ. ಒಂದು ಕಾಲದಲ್ಲಿ ಜಿಲ್ಲೆಯ ಬಹುತೇಕ ಮರಾಟಿಗರು ತೆಂಗಿನ ಗರಿಯಿಂದ ತಯಾರಿಸಿದ ತಟ್ಟಿಗಳನ್ನು ಉಪಯೋಗಿಸಿ ಕಟ್ಟಿದ ಗುಡಿಸಲುಗಳಲ್ಲಿ ವಾಸಮಾಡಿದವರು. ಯಾವುದೇ ರೀತಿಯ ಗೋಡೆಯ ಮನೆಗಳು ಇರಲಿಲ್ಲ. ನೆಲದಿಂದ ಗುಡಿಸಲಿನ ಛಾವಣಿಯ ತನಕ ಎರಡು ಮೂರು ತಟ್ಟಿಗಳನ್ನು ಜೋಡಿಸಿ ಅದರ ಮೇಲೆ ಹಲಗೆಯನ್ನಿಟ್ಟು ಕಟ್ಟುತ್ತಿದ್ದರು. ಗುಡಿಸಲು ಒಳಗಡೆಯೂ ಈ ತಟ್ಟಿಗಳು ರೂಮುಗಳನ್ನು ಬೇರ್ಪಡಿಸುತ್ತಿದ್ದವು. ಇಂದಿಗೂ ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ತೆಂಗಿನ ಗರಿಯಲ್ಲಿ ಹೆಣೆದ ಈ ತಟ್ಟಿಗಳು ಬಹುಪಯೋಗಕ್ಕೆ ಬಂದಿರುವುದನ್ನು ಕಾಣಬಹುದು. ಮನೆಯ ಬಹುತೇಕ ಆಚರಣೆ ಸಮಾರಂಭದ ಸಂದರ್ಭದಲ್ಲಿ ಮಾಡುವ ಚಪ್ಪರಕ್ಕೆ ತೆಂಗಿನ ಗರಿಯ ತಟ್ಟಿ ಬೇಕೇ ಬೇಕು. ತೆಂಗಿನ ಗರಿಯನ್ನು ಇಡಿಯಾಗಿ ನೀರಿನಲ್ಲಿ ಒಂದುವಾರ ನೆನೆಸಿ, ಮತ್ತೆ ನೀರಿನಿಂದ ತೆಗೆದು ಹೆಣೆಯುತ್ತಾರೆ. ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ಒಂದು ತಟ್ಟಿಗೆ ಒಂದು ರೂಪಾಯಿಯಂತೆ ಮಾರಾಟ ಮಾಡುವುದನ್ನು ಕಂಡಿದ್ದೇನೆ. ಗಂಡಸರು ಮತ್ತು ಹೆಂಸಗರು ಹೆಚ್ಚಾಗಿ ರಾತ್ರಿಯ ಬಿಡುವಿನ ಸಮಯದಲ್ಲಿ ಅಥವಾ ಮಧ್ಯಾಹ್ನದ ಬಿಡುವಿನ ಸಮಯದಲ್ಲಿ ತಟ್ಟಿ ಹೆಣೆಯುವ ಕಾಯಕದಲ್ಲಿ ತೊಡಗುತ್ತಾರೆ.

ಮರದ ಪೀಠೋಪಕರಣಗಳನ್ನು ತಯಾರಿಸುವಲ್ಲಿಯೂ ಮರಾಟಿಗರು ನೈಪುಣ್ಯತೆಯನ್ನು ತೋರಿದ್ದಾರೆ. ಮನೆಗಳಿಗೆ ಬೇಕಾಗುವ ಮಂಚ, ಕುರ್ಚಿ, ಮೇಜು, ಕಪಾಟು, ಬಾಗಿಲು, ಕಿಟಕಿ ಹೀಗೆ ಎಲ್ಲಾ ತರಹದ ಪೀಠೋಪಕರಣಗಳನ್ನು ಆಯಾ ಊರಿನಲ್ಲಿ ಮನೆ ಮನೆಗೆ ಹೋಗಿ ತಯಾರಿಸಿ ಕೊಡುತ್ತಾರೆ. ಈ ಕಾಯಕದಲ್ಲಿ ಉತ್ತಮ ಸಾಧನೆ ಮಾಡಿದ ಮರಾಟಿಗರು ಅನೇಕರಿದ್ದಾರೆ. ಇತಿಹಾಸದಲ್ಲಿ ಇವರ ಕೆಲಸದ ಬಗೆಗಿನ ಪ್ರಶಂಸೆಯೂ ಕೂಡ ದಾಖಲಾಗಿದೆ. 'ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ' ಗ್ರಂಥದಲ್ಲಿ ಕಾಸರಗೋಡಿನ ಮಂಜೇಶ್ವರ 'ದೇವಸ್ಥಾನದ ಮರದ ಕೆತ್ತನೆಗಳಲ್ಲಿ ಮರಾಟ ಜಾತಿಯ ಅಣ್ಣಪ್ಪನು ಮಾಡಿದ ಕಂಬಗಳ ಕೆಲಸ ಒಳ್ಳೆಯದಾಗಿದ್ದು ಅದನ್ನು ದೇವಸ್ಥಾನದ ಮುಂದುಗಡೆ ಇಟ್ಟಿರುತ್ತಾರೆ'. ಎಂಬ ಉಲ್ಲೇಖವಿದೆ. ಇದು ಸುಮಾರು ಶಾ.ಶ.೧೭೭೭ರ ದಶಕದಲ್ಲಿ ಮಾಡಿದಂತಹ ಕೆಲಸಗಳು. (ಮಂಜೇಶ್ವರ ಗಣಪತಿ ರಾವ್ ಐಗಳ, ೧೯೨೩ ಪು.೩೧೮) ವ್ಯವಸಾಯಕ್ಕೆ ಬೇಕಾದ ನೊಗ ನೇಗಿಲು, ಹಲಗೆ ತಯಾರಿಸುವಲ್ಲಿ ಮರಾಟಿಗರು ಕಲಾತ್ಮಕತೆಯನ್ನು ಪ್ರದರ್ಶಿಸಿದ್ದಾರೆ.

## ೫.೮ ಕೃಷಿ ಕ್ಷೇತ್ರದಲ್ಲಿ ಮರಾಟಿಗರು

ವಲಸೆ ಬಂದ ಆರಂಭದಲ್ಲಿ ಮರಾಟಿಗರು ಜಿಲ್ಲೆಯ ಬೆಟ್ಟ, ಗುಡ್ಡ ಪ್ರದೇಶಗಳಲ್ಲಿ 'ಕುಮೇರಿ ಬೇಸಾಯದ' ಮೂಲಕ ಜೀವನ ಸಾಗಿಸುತ್ತಿದ್ದರು. ಕಾಲಕ್ರಮೇಣ ಕೆಲವರು ಕಾಡು ಕಡಿದು ಅಡಿಕೆ ತೋಟಗಳನ್ನು ಮಾಡಿಕೊಂಡರೆ, ಬಹುತೇಕ ಮರಾಟಿಗರು ಕೂಲಿ ಕೆಲಸ, ಒಕ್ಕಲು ತನ (ಚಾಲಗೇಣಿ)ದಲ್ಲಿ ತೊಡಗಿಸಿಕೊಂಡರು. 'ಕುಮೇರಿ' ಬೇಸಾಯ ಮಾಡುತ್ತಾ ಸಾಹಸಮಯ ಜೀವನ ನಡೆಸುತ್ತಿದ್ದ ಮರಾಟಿಗರಿಗೆ ಕಾಡುಗಳ ನಾಶದಿಂದಾಗಿ ನೆಲೆ ಕಂಡುಕೊಳ್ಳಲು ಕಷ್ಟವಾಯಿತು ಎಂದು ಹೇಳಬೇಕು ಮತ್ತು ನಿರಂತರ ಬದಲಾವಣೆಯತ್ತ ಮುಖ ಮಾಡಿರುವ ಸಮಾಜದ ಸಹಜ ಪ್ರಕ್ರಿಯೆಗಳಿಂದ ಮರಾಟಿಗರೂ ಕೂಡ ಪರಿವರ್ತನೆಯ ಹಾದಿ ಹಿಡಿದಿರುವುದರಲ್ಲಿ ಯಾವುದೇ ತಪ್ಪಿಲ್ಲ.

ಕೂಲಿಕಾರರಾಗಿ ಜಿಲ್ಲೆಯ ಗೌಡ, ಬ್ರಾಹ್ಮಣ ಬಂಟ ಹೀಗೆ ಇನ್ನಿತರ ಸಮುದಾಯಗಳ ತೋಟ, ಗದ್ದೆಗಳಲ್ಲಿ ಕೆಲಸ ಮಾಡಿಕೊಂಡು ಬಂದರು. ಜಿಲ್ಲೆಯಲ್ಲಿ ಕೆಲಸ ಕಡಿಮೆಯಾದಾಗ ಘಟ್ಟ ಪ್ರದೇಶಗಳ ಕಡೆ ಮುಖಮಾಡಿದರು. ಇಂದಿಗೂ ಅನೇಕ ಮರಾಟಿ ಹಿರಿಯರು ತಾವು ಘಟ್ಟದ ಮೇಲೆ ಹೋಗಿ ಕೂಲಿಕೆಲಸ ಮಾಡಿದ ಶ್ರಮ, ಸಾಹಸದ ಬಗ್ಗೆ ತಮ್ಮ ನೆನಪುಗಳನ್ನು ಮೆಲುಕು ಹಾಕುತ್ತಾರೆ. ಆಯಾ ಪ್ರದೇಶಕ್ಕೆ ಹತ್ತಿರವಾದ ಇತರ ಘಟ್ಟ ಪ್ರದೇಶಗಳಿಗೆ ಹೋಗಿ ಕಾಫಿ, ಏಲಕ್ಕಿ ಎಸ್ಟೇಟ್‌ಗಳಲ್ಲಿ ದುಡಿದರು. ಹಾಗೆಯೇ ದಕ್ಷಿಣ ಕನ್ನಡ ಜಿಲ್ಲೆಯಿಂದ ನೂರಾರು ಮರಾಟಿಗರು ಈ ರೀತಿಯ ಕೂಲಿ ಕೆಲಸಗಾರರಾಗಿ ಮಡಿಕೇರಿ (ಕೊಡಗು ಜಿಲ್ಲೆ) ಕೊಪ್ಪ, ನರಸಿಂಹರಾಜಪುರ, ಶೃಂಗೇರಿ, (ಚಿಕ್ಕಮಗಳೂರು) ಜಿಲ್ಲೆ ಮತ್ತು ತೀರ್ಥಹಳ್ಳಿ (ಶಿವಮೊಗ್ಗ ಜಲ್ಲೆ) ಪ್ರದೇಶಗಳಿಗೆ ಹೋಗಿ ಅಲ್ಲಿಯೇ ನೆಲೆ ಕಂಡುಕೊಂಡಿದ್ದಾರೆ.

ಒಂದು ಕುಟುಂಬದಲ್ಲಿ ಗಂಡ-ಹೆಂಡತಿ ಇಬ್ಬರೂ ದುಡಿಯಲು ತೋಟ ಗದ್ದೆಗೆ ಹೋಗುತ್ತಾರೆ ಮತ್ತು ಮಕ್ಕಳನ್ನು ಸಣ್ಣ ಪುಟ್ಟ ಕೆಲಸಗಳಿಗಾಗಿ ತಮ್ಮ 'ದಣಿ'ಯ ಮನೆಯಲ್ಲಿರಿಸುತ್ತಾರೆ. ಕೂಲಿಕಾರರಾಗಿ ಪ್ರತಿಯೊಂದು ಕೆಲಸಗಳಲ್ಲಿಯೂ ಮರಾಟಿಗರು ಶ್ರದ್ಧೆ, ನಿಷ್ಠೆಗೆ ಹೆಸರಾದವರು. ಯಾವತ್ತೂ ಯಜಮಾನನಿಗೆ ಅಪಕಾರ ಎಸಗಿದವರಲ್ಲ. ಅಡಿಕೆ ತೋಟಗಳಲ್ಲಿ ಅಡಿಕೆ ತೆಗೆಯುವುದು, ಔಷಧಿ ಸಿಂಪಡಿಸುವುದು, ಅಗತೆ ಮಾಡುವುದು, ಅಡಿಕೆ ಮರದ ಬುಡದ ಮಣ್ಣು ತೆಗೆದು ಸೊಪ್ಪು ಗೊಬ್ಬರ ಹಾಕುವುದು ಈ ಎಲ್ಲಾ ಕೆಲಸಗಳನ್ನು ಸಲೀಸಾಗಿ ಮಾಡುತ್ತಾರೆ. ರಾತ್ರಿ ಸಮಯದಲ್ಲಿ ಅಡಿಕೆ ಸಿಪ್ಪೆ ಸುಲಿಯುವುದರ ಮೂಲಕ ನಿರಂತರ ದುಡಿಮೆಯಲ್ಲಿ ತೊಡಗಿದ ಶ್ರಮಜೀವಿಗಳು ಮರಾಟಿಗರು. ಹೆಂಗಸರು ಶ್ರೀಮಂತರ ಮನೆಗೆಲಸದಿಂದ ಹಿಡಿದು, ಹುಲ್ಲು, ಸೊಪ್ಪು ತರುವುದು, ಅಡಿಕೆ ಹೆಕ್ಕುವುದು, ಗದ್ದೆಗಳಲ್ಲಿ ನೇಜಿ ಕೀಳುವುದು, ನೆಡುವಂತಹ ಕೆಲಸಗಳನ್ನು ಮಾಡುತ್ತಾರೆ. ಹೀಗೆ ಕುಟುಂಬದಲ್ಲಿ ಎಲ್ಲರೂ ಸೋಮಾರಿಗಳಾಗದೇ 'ಕಾಯಕವೇ ಕೈಲಾಸ' ಎಂಬಂತೆ ಪ್ರತಿದಿನ ಕಾಯಕದ ಮೂಲಕವೇ ಅನ್ನ ತಿಂದು ಬದುಕಿದವರು.

ಕೂಲಿಯಾಳುಗಳಾಗಿ ದುಡಿದು ತಿನ್ನುವ ಬದುಕನ್ನು ಕಂಡು ಕೊಂಡ ಇವರು ಕ್ರಮೇಣ ಪರಿವರ್ತನೆಯ ಹಾದಿಯಲ್ಲಿ ಗೌಡ/ಬ್ರಾಹ್ಮಣ/ಬಂಟ ಹಾಗೂ ಇನ್ನಿತರ ಜಾತಿಯ ಧನಿಕರ ಜಮೀನುಗಳನ್ನು (ಗದ್ದೆ) ಗೇಣಿಗೆ ಪಡೆದುಕೊಂಡು

ಕೃಷಿ ಮಾಡಲಾರಂಬಿಸಿದುದು ಇವರ ಪಾಲಿಗೆ ಒಂದು ಸ್ಥಿತ್ಯಂತರ ಹೆಜ್ಜೆಯಾಗಿದೆ. ಜಿಲ್ಲೆಯಲ್ಲಿ ಭೂಸುಧಾರಣಾ ಕಾನೂನು ಜಾರಿಯಾಗುವುದಕ್ಕಿಂತ ಮೊದಲಿದ್ದ ಊಳಿಗಮಾನ್ಯ ವ್ಯವಸ್ಥೆಯಡಿಯಲ್ಲಿ ಈ ಒಕ್ಕಲುತನವಿತ್ತು. ಧನಿಕರ ಭೂಮಿಯನ್ನು ಒಪ್ಪಂದದ ಮೂಲಕ ಷರತ್ತುಗಳೊಂದಿಗೆ ನಿರ್ದಿಷ್ಟ ಮೊತ್ತದ ಗೇಣಿಗೆ ಪಡೆದು ಬೇಸಾಯ ಮಾಡುವಂತಹುದಕ್ಕೆ 'ಒಕ್ಕಲುತನ' ಎಂದು ಕರೆಯುತ್ತಾರೆ. ಒಪ್ಪಂದದಂತೆ ಷರತ್ತುಗಳನ್ನು ಮೀರಿದರೆ ತಕ್ಷಣ ಒಕ್ಕಲೆಬ್ಬಿಸುತ್ತಿದ್ದರು. ಒಕ್ಕಲಲ್ಲಿದ್ದವರು ಬರಿಕೈಯಲ್ಲಿ ದೂರಸಾಗಲೇಬೇಕಿತ್ತು. ಬಹುತೇಕ ಮರಾಟಿಗರು ನಿಷ್ಠೆಯಿಂದ ದುಡಿದು 'ತಮಗೆ ಬಂದಿದ್ದು ಸಾಕು' ಎಂಬ ಧ್ಯೇಯದೊಂದಿಗೆ ರಾಜಿಯಾಗುತ್ತಿದ್ದರು. ಧಣಿಗೆ ಕೊಡುವಷ್ಟನ್ನು ಕೊಡುತ್ತಿದ್ದರು. ಇದರಲ್ಲಿ ಯಾವುದೇ ರೀತಿಯಲ್ಲಿ ಜಗಳ ವೈಷಮ್ಯಕ್ಕೆ ಆಸ್ಪದ ಕೊಡುತ್ತಿರಲಿಲ್ಲ. ಹಾಗಾಗಿ ಮರಾಟಿಗರಿಗೂ ಜಿಲ್ಲೆಯ ಇತರ ಸಮುದಾಯದವರ ಮಧ್ಯೆ ಒಂದು ಒಳ್ಳೆಯ ಭಾಂದವ್ಯ ಏರ್ಪಟ್ಟಿತ್ತು ಎಂದು ಅನೇಕ ಹಿರಿಯ ವಕ್ತೃ ಭಾಂದವರು ಹೇಳುತ್ತಾರೆ. ವೈಷಮ್ಯದಿಂದ ಕೋರ್ಟು ಮೆಟ್ಟಿಲೇರಿದ ಪ್ರಕರಣಗಳೂ ಇವೆ ಎಂದು ಹೇಳಲು ಮರೆಯುವುದಿಲ್ಲ. ಈ ಸಂದರ್ಭಗಳಲ್ಲಿ ಇತರೆ ಸಮುದಾಯಗಳಿಂದ ಅನೇಕ ಮರಾಟಿಗ ಕುಟುಂಬಸ್ಥರು ಶೋಷಣೆಗೂ ಒಳಗಾಗಿದ್ದರು. ಎಷ್ಟೇ ಶೋಷಣೆಗೆ ಒಳಗಾಗಿದ್ದರೂ ಅವನ್ನೆಲ್ಲಾ ನುಂಗಿಕೊಂಡು ಜೀವನವನ್ನು ಮುಂದೆ ಸಾಗಿಸುತ್ತಿದ್ದರು. ಜಿಲ್ಲೆಯಲ್ಲಿ ಯಾವಾಗ ಭೂಮಸೂದೆ ಕಾನೂನು ಜಾರಿಯಾಯಿತೋ ಆಗ ಅನೇಕ ಮರಾಟಿಗರು 'ಉಳುವವನೇ ಹೊಲದೊಡೆಯ'ರಾದರು. ಈ ರೀತಿಯಲ್ಲಿ ಜಿಲ್ಲೆಯಲ್ಲಿ ಅನೇಕ ಮರಾಟಿಗರು ಶೋಷಣೆಯಿಂದ ಮುಕ್ತಿ ಹೊಂದಿದರು ಎಂದು ಹೇಳಬಹುದು.

ಸರಕಾರದಿಂದ ಮತ್ತು ತಮ್ಮ ಸ್ವಂತ ಪರಿಶ್ರಮದಿಂದ ಪಡೆದಂತಹ ಸಣ್ಣ ಪ್ರಮಾಣದ ಜಮೀನಿನಲ್ಲಿ ಗದ್ದೆಯನ್ನು ಮಾಡಿ ಅಕ್ಕಿ ಬೆಳೆಯುವುದರಲ್ಲಿ ಮರಾಟಿಗರು ತೃಪ್ತಿಪಟ್ಟುಕೊಂಡರು. ಪರಂಪರಾಗತವಾಗಿ ಕುಮೇರಿ ಬೇಸಾಯದಲ್ಲಿ ಅಕ್ಕಿಗೆ ಪ್ರಥಮ ಪ್ರಾಶಸ್ತ್ಯ ನೀಡಿದ ಇವರು ಹೊಲ, ಗದ್ದೆಗಳನ್ನು ನಿರ್ಮಿಸಿ ಅಲ್ಲಿಯೂ ಅಕ್ಕಿ ಬೆಳೆಯಲಾರಂಭಿಸಿದರು. ಇವರು ಮೊದಲಿನಿಂದಲೂ ಸಾವಯವ ಕೃಷಿ (ಸಹಜ ಕೃಷಿ)ಗೆ ಒತ್ತುಕೊಟ್ಟವರು. ಸಹಜವಾಗಿಯೇ ಕಾಡಿನ ಪರಿಸರದಲ್ಲಿರುವ ಇವರಿಗೆ ಸಾವಯವ ಕೃಷಿ ಪದ್ಧತಿ ಅನುಕೂಲಕರವಾಗಿತ್ತು. ಗದ್ದೆಗೆ ಬೇಕಾದ ಗೊಬ್ಬರವನ್ನು ತಾವೇ ಸಾಕಿ ಸಲಹಿದ ಜಾನುವಾರುಗಳ ಮುಖೇನ ಪಡೆಯುತ್ತಿದ್ದರು. ಇಂದಿಗೂ ಜಿಲ್ಲೆಯ ಬಹುತೇಕ ಮರಾಟಿ ಕುಟುಂಬದವರು ರಾಸಾಯನಿಕ ಗೊಬ್ಬರವನ್ನು ಉಪಯೋಗಿಸುವುದಿಲ್ಲ.

ಜಿಲ್ಲೆಯಲ್ಲಿ (ತುಳುನಾಡು) ಬೇಸಾಯಗಾರನಿಗೆ ಒಂದು ಒಳ್ಳೆಯ ಹೆಸರಿದೆ. ಮನ್ನಣೆಯಿದೆ. ಇದು ಪರಂಪರೆಯಿಂದ ಬಂದಿರುವಂಥದ್ದು. ಮಣ್ಣಿನ ಮಕ್ಕಳಾಗಿ ಮಣ್ಣಿನಲ್ಲಿ ಹಗಲು ರಾತ್ರಿಯೆನ್ನದೆ ದುಡಿಯುತ್ತಾರೆ. ಇಡೀ ಮಣ್ಣಿನಲ್ಲಿ ಮಣ್ಣು ಕೆಸರು ಎಲ್ಲದರಲ್ಲಿಯೂ ತಮ್ಮ ಪ್ರೀತಿಯನ್ನು, ಗೌರವವನ್ನು ನೀಡಲು ಮರೆಯುವುದಿಲ್ಲ. ತನ್ನ ಜೀವನದ ಸರ್ವಸ್ವವನ್ನು ಮಣ್ಣಿನಿಂದ ಪಡೆಯಲು ಶ್ರಮಿಸುತ್ತಲೇ ಇರುತ್ತಾರೆ.

ಜಿಲ್ಲೆಯಲ್ಲಿನ ಕೃಷಿ ಭೂಮಿಯನ್ನು ಮೂರು ವಿಭಾಗಗಳಾಗಿ ವಿಂಗಡಿಸಬಹುದು. ಬೆಟ್ಟು, ಮಜಲು ಮತ್ತು ಬೈಲು ಗದ್ದೆಗಳು. ಬೆಟ್ಟು ಗದ್ದೆಯನ್ನು ಮುಂಗಾರು ಮಳೆಯ ನೀರಿನಾಶ್ರಯವನ್ನು ಕೇಳುತ್ತದೆ. ಅಲ್ಲಿ ನೀರಿನ ತೇವಾಂಶ ತುಂಬ ಕಡಿಮೆಯಿದ್ದು, ಮಳೆಗಾಲದ ಒಂದು ಬೆಳೆಯನ್ನು ಸರಿಯಾಗಿ ಬೆಳೆಯುವ ಭರವಸೆಯೂ

ಇರುವುದಿಲ್ಲ. ಮರಾಟಿಗರು ಇಂತಹ ಪ್ರದೇಶಗಳಲ್ಲಿಯೇ ಕುಮೇರಿ ಬೇಸಾಯವನ್ನು ಮಾಡುತ್ತಾ ಬಂದವರು.

ಮಜಲು ಮಧ್ಯಮ ಭೂ ಪ್ರದೇಶ, ಮುಂಗಾರು ಬೆಳೆ ಪಡೆದ ನಂತರವೂ ಮಜಲು ಪ್ರದೇಶದಲ್ಲಿ ನೀರಿನ ತೇವಾಂಶವಿದ್ದು ಉದ್ದು, ಹುರುಳಿ, ಎಳ್ಳಿನಂತಹ ಕಡಿಮೆ ಅವಧಿಯ ಧಾನ್ಯಗಳನ್ನು ಎರಡನೇ ಬೆಳೆಯಾಗಿ ಬೆಳೆಯಲು ಅನುಕೂಲವಾಗುತ್ತದೆ.

ಬೈಲು ಪ್ರದೇಶ ಮಳೆಯ ನೀರಿಗೆ ಹೊರತಾಗಿಯೂ, ಕೆರೆ, ತೋಪು, ತೊರೆಗಳಿಂದ ನೀರು ಹರಿಸಿ ಕೃಷಿ ಮಾಡಬಹುದಾದ ಜವುಗು ಭೂಮಿ, ಇಂತಹ ಪ್ರದೇಶದ ಗದ್ದೆಗಳಲ್ಲಿ ಕಾಲು ಹೂತು ಹೋಗುವಷ್ಟು ಕೆಸರು ಕೂಡಿದ ಮಣ್ಣಿರುತ್ತದೆ.

**ವಾರ್ಷಿಕ ಬೆಳೆಗಳು**

ಸಾಮಾನ್ಯವಾಗಿ ಹಿಂದಿನ ಕಾಲದಿಂದಲೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಎಲ್ಲಾ ವ್ಯವಸಾಯಗಾರರು ಏಣೆಲು, ಸುಗ್ಗಿ ಮತ್ತು ಕೊಳಕೆ ಎಂಬ ಮೂರು ರೀತಿಯ ಕಾಲಮಾನದ ಬೆಳೆಗಳನ್ನು ಬೆಳೆಯುತ್ತಾರೆ. ಈ ಮೂರು ಬೆಳೆಗಳನ್ನು ವಾರ್ಷಿಕವಾಗಿ ಪಡೆಯಬೇಕಾದರೆ ಸಮೃದ್ಧವಾದ ನೀರಾವರಿ ವ್ಯವಸ್ಥೆ ಅತೀ ಮುಖ್ಯ.

ಬೆಟ್ಟು ಗದ್ದೆ ಏಣೆಲು ಬೆಳೆಗೆ ಮಾತ್ರವಾದರೆ, ಮಜಲು ಗದ್ದೆಯಲ್ಲಿ ಏಣೆಲು (ಕಾರ್ತಿ) ಬೆಳೆಯ ಬಳಿಕವೂ ಬೆಳೆಯನ್ನು ನೀಡಲು ಶಕ್ತವಾಗಿರುತ್ತದೆ. ಬತ್ತದ ಬೆಳೆ ಸಾಮಾನ್ಯವಾಗಿ ೬ ತಿಂಗಳ ಕಾಲಾವಧಿಯನ್ನು ಹೊಂದಿರುತ್ತದೆ. ಮೂರು ತಿಂಗಳು ಬೀಜ ಬಿತ್ತಿ 'ನೇಜಿ'ಯನ್ನು ಪಡೆದರೆ, ಉಳಿದ ಮೂರು ತಿಂಗಳು ಕಿತ್ತು ನೆಟ್ಟ ನೇಜಿ ಗದ್ದೆಯಲ್ಲಿ ಸರಿಯಾಗಿ ಬೆಳೆದು ತೆನೆ ಹಿಡಿದು ಪೈರು ಮಾಗಲು ತಗಲುತ್ತದೆ. ಏಣೆಲು ಬೆಳೆಯನ್ನು ತೆಗೆಯುವ ಸಂದರ್ಭದಲ್ಲಿ ಕೆಲವೊಂದು ತಳಿಗಳನ್ನು ಮಾತ್ರ ಬಿತ್ತುತ್ತಾರೆ. ಅನುಭವದ ಮೂಲಕ ಕಂಡುಂಡ ಬೇಸಾಯಗಾರರು ಏಣೆಲು ಬೆಳೆಯಲ್ಲಿ 'ಕಯಮೆ', 'ಐಆರ್‌ಎಲ', 'ತೊನ್ನೂರು', ಜಯ, ಶಕ್ತಿ, 'ಕಲ್ಚಾರ್', 'ಜ್ಯೋತಿ' ಮೊದಲಾದ ಹೆಸರಿನಿಂದ ಕೂಡಿದ ದೇಸಿ ತಳಿಗಳನ್ನೇ ಉಪಯೋಗಿಸುತ್ತಾರೆ. ಸುಗ್ಗಿ ಬೆಳೆಯಲ್ಲಿ 'ತೊನ್ನೂರು' 'ಜಯ' ತಳಿಯನ್ನು ಬಳಸಿದರೆ ಕೊಳಕೆ ಬೆಳೆಯಲ್ಲಿ 'ರಾಜ ಕಯಮೆ' 'ಜಯ' 'ಪದ್ಮ', 'ಶಕ್ತಿ' ಮೊದಲಾದ ದೇಸೀಯ ತಳಿಗಳ ಭತ್ತವನ್ನೇ ಬೀಜಕ್ಕಾಗಿ ಉಪಯೋಗಿಸುತ್ತಾರೆ.

**ನೀರಾವರಿ ವ್ಯವಸ್ಥೆ**

ಜಿಲ್ಲೆಯ ಮರಾಟಿಗರು ಕೆರೆ ಬಾವಿ ಇನ್ನಿತರ ನೀರಿನಾಶ್ರಯಗಳಿಂದ ಕೃಷಿ ಭೂಮಿಗೆ ಮತ್ತು ತೋಟ-ಗದ್ದೆಗಳಿಗೆ ನೀರು ಹಾಯಿಸಲು ನೀರಿನ ಆಳವನ್ನು ಹೊಂದಿಕೊಂಡು ಬೇರೆ ಬೇರೆ ರೀತಿಯನ್ನು ಅನುಸರಿಸುತ್ತಾರೆ. ಇಂದು ಅನೇಕರು ವಿವಿಧ ಯಂತ್ರಗಳ ಮೊರೆ ಹೋಗಿದ್ದಾರೆ. ಸರಕಾರದಿಂದ ಸಬ್ಸಿಡಿ ಮೂಲಕ ನೀರೆತ್ತುವ ಯಂತ್ರಗಳು ಇವರ ಕೈ ಸೇರಿವೆ.

ಪನೆ:- (ಏತ) ಬಾವಿಯ ಬಳಿ ಎರಡು ಹೊಂಗಾರಕನ ಮರಗಳನ್ನು ನೆಡುವರು. ಈ ಮರಗಳ ಮಧ್ಯೆ ಸುಮಾರು ೨೦ ಅಂಡಿ ಎತ್ತರಕ್ಕೆ ಉದ್ದನೆಯ ಅಡ್ಡ ಮರ (ಬೆರ್ಮ್‌ರ)ವನ್ನು 'ನುಗಪಣೆ'ಯ ಮೂಲಕ ಜೋಡಿಸುತ್ತಾರೆ. ಅದು

ಸಲೀಸಾಗಿ ಮೇಲೆ ಕೆಳಗೆ ಚಲಿಸುವಂತೆ ಕೀಲಿಯನ್ನು ಹೊಂದಿಸುತ್ತಾರೆ. ಬೆರ್ಮರದ ಒಂದು ತುದಿಗೆ (ಬಾವಿಗೆ ಹೊಂದಿಕೊಂಡಂತೆ) ಮರದ ಅಥವಾ ಬಿದಿರಿನ ಗತಿ (ಗಳ)ಯನ್ನು ಕಟ್ಟುತ್ತಾರೆ. 'ಗತಿ'ಯ ಕೆಳಬದಿಗೆ ಎರಡು ತೂತು ಮಾಡಿ ನೀರು ಮೊಗೆಯಲು 'ಮರಾಯಿ'ಯನ್ನು ಜೋಡಿಸುತ್ತಾರೆ. ನೀರು ಮೊಗೆಯುವಲ್ಲಿ ಭತ್ತದ ಬೈಹುಲ್ಲನ್ನು ಮಡಚಿ ಬಾವಿಯ ದಂಡೆಗೆ ಜೋಡಿಸಿ ತಾಳೆಯ ಮರದಿಂದ ತಯಾರಿಸಿದ ಭರಣಿ (ತಾಳೆ ಮರದ ತುಂಡನ್ನು ಇಬ್ಭಾಗ ಮಾಡಿ ಅರ್ಧ ವೃತ್ತದ ಮಧ್ಯ ದೋಣಿಯಂತಿರುವ ವಸ್ತು)ಯನ್ನು ಹೊಂದಿಸುತ್ತಾರೆ. ನೀರು ಮೇಲಕ್ಕೆತ್ತಲು ಬಾವಿಯ ಮಧ್ಯೆ ನಿಲ್ಲುವುದಕ್ಕೆ ಮರದ ಎರಡು ತುಂಡುಗಳನ್ನು ಇಡುತ್ತಾರೆ. ಒಂದು ಬದಿಗೆ ಕಟ್ಟಿದ ದಪ್ಪಗಿರುವ ಹಗ್ಗವನ್ನು ಇಬ್ಬರು ಹಿಡಿದು ಪಕ್ಕದಲ್ಲಿರುವ ೬ ಅಡಿ ಆಳದ ಹೊಂಡಕ್ಕೆ ಹಾರಿದಾಗ ಬಾವಿಯಲ್ಲಿ ಮುಳುಗಿದ 'ಮರಿಗೆ'ಯ ನೀರು ಮೇಲೆ ಬರುವುದು.

ಜಿಲ್ಲೆಯಲ್ಲಿ ಇಂದು ಅನೇಕ ಸಣ್ಣ ಪ್ರಮಾಣದ ಅಡಿಕೆ ತೋಟ-ಗದ್ದೆ ತೋಟವಿರುವವರು ಬಹು ಸಂಖ್ಯೆಯಲ್ಲಿದ್ದಾರೆ. ಕೂಲಿಕೆಲಸದ ಬಿಡುವಿನ ವೇಳೆಯಲ್ಲಿ ತಮ್ಮ ತೋಟಗಳಲ್ಲಿ ದುಡಿಯುತ್ತಾರೆ. ಇಳಿಜಾರು ಪ್ರದೇಶಗಳಲ್ಲಿರುವವರು ಮೇಲಿನ ಗುಡ್ಡ ಝರಿಗಳಿಂದ  ಬರುವ ಸಹಜ ನೀರನ್ನು ಒಡ್ಡು, ಕೆರೆ ಕಟ್ಟಿ ಸಂಗ್ರಹ ಮಾಡುತ್ತಾರೆ. ಸಾಂಪ್ರದಾಯಿಕವಾಗಿ ಮಣ್ಣು ಕಲ್ಲು ಸೇರಿಸಿ ತಡೆ ಗೋಡೆ ನಿರ್ಮಿಸಿ ತೂಬು (ಪೈಪ್) ತುಳು: ತೂಂಬು) ಗಳ ಮೂಲಕ ತೋಟಗಳಿಗೆ ನೀರನ್ನು ಹಾಯಿಸುತ್ತಾರೆ. ಬೈನೆ ಮರದ ಹಾಳೆ ಅಥವಾ ಅಡಿಕೆ ಮರದ ಹಾಳೆಯನ್ನು ಉಪಯೋಗಿಸಿ ಅಡಿಕೆ, ತೆಂಗು, ಬಾಳೆ ಇನ್ನಿತರ ಬೆಳೆಗಳ ಬುಡಕ್ಕೆ ನೀರು ಹಾಯಿಸುತ್ತಾರೆ. ಒಡ್ಡು, ಕಟ್ಟೆ, ಕೆರೆಗಳನ್ನು ಸಾಂಪ್ರದಾಯಿಕ ರೀತಿಯಲ್ಲಿ ನಿರ್ಮಿಸುತ್ತಿರುವುದನ್ನು ಕಾಣಬಹುದು. ಅದನ್ನು ಬೇಸಿಗೆ ಕಾಲದಲ್ಲಿ ಪ್ರತಿ ವರ್ಷ ನಿರ್ಮಾಣ ಮಾಡುತ್ತಾರೆ. ಮಣ್ಣನ್ನು ಹಾಕಿ ಗೋಡೆಯ ರೀತಿಯಲ್ಲಿ ನಿರ್ಮಾಣ ಮಾಡುತ್ತಾರೆ. ಅಡಿಕೆ ಮರದ ದಿಂಡನ್ನು ತೆಗೆದು ಅಥವಾ ಕೊಳೆಯಿಸಿ ತೂಬನ್ನಾಗಿ ಇಡುತ್ತಾರೆ. ಅದರ ಮೂಲಕ ಸಮಪ್ರಮಾಣದಲ್ಲಿ ನೀರು ಹರಿದು ಬರುತ್ತದೆ. ಇತ್ತೀಚೆಗೆ ಜಿಲ್ಲೆಯ ಕೆಲವೊಂದು ಗ್ರಾಮಗಳಲ್ಲಿ ಸರ್ಕಾರಿ ಯೋಜನೆಯ ಮೂಲಕ ಕೆರೆಗಳಿಗೆ ತಡೆಗೋಡೆ ನಿರ್ಮಿಸಿ ಕೊಟ್ಟಿವೆ. ಆದರೆ ಅವೆಲ್ಲವೂ ಕಳಪೆ ಕಾಮಗಾರಿಯಿಂದ ಕೂಡಿದ್ದು ನೀರನ್ನು ತಡೆಹಿಡಿಯುವಲ್ಲಿ ವಿಫಲವಾಗಿದೆ ಎಂದು ವಕ್ತೃಗಳು ಹೇಳುತ್ತಾರೆ.

ಸಮತಟ್ಟಾದ ಪ್ರದೇಶಗಳಲ್ಲಿರುವ ಅಡಿಕೆ ತೋಟಗಳಿಗೆ ನೀರೆತ್ತುವ ಪಂಪುಗಳ ಸಹಾಯದಿಂದ ನೀರುಣಿಸುತ್ತಾರೆ. ಸರ್ಕಾರ ಸಬ್ಸಿಡಿ ಮೂಲಕ ವಿತರಿಸಿದ ಪಂಪುಗಳು ಅರ್ಧ ದಾರಿಯಲ್ಲಿ ಇತರ ಬಹುಸಂಖ್ಯಾತ ಸಮುದಾಯದವರ ಪಾಲಾಗಿರುವ ಉದಾಹರಣೆಗಳಿವೆ.

ಮರಾಟಿಗರ ಹೆಸರಿಗೆ ಬಂದಿರುವ ಪಂಪನ್ನು ಅವರಿಗೆ ಸಾರಾಯಿ ಕುಡಿಸಿ, ನೂರು ಇನ್ನೂರು ರೂಗಳನ್ನು ಕೊಟ್ಟು ಸಹಿ ಮಾಡಿಸಿಕೊಂಡು ಏಳೆಂಟು ಸಾವಿರಕ್ಕೆ ಡೀಸೆಲ್ ಪಂಪಗಳನ್ನು ಪಡೆದವರು ಬಹಳ ಮಂದಿ. ಈ ರೀತಿಯಾಗಿ ಬಡವರು ಸರಕಾರದ ಸವಲತ್ತುಗಳಿಂದ ವಂಚಿತರಾಗುತ್ತಿರುವುದು ಇಂದೂ ಕಾಣಬಹುದಾಗಿದೆ.ಶ್ರಮ ಜೀವಿಗಳಾದ ಬುಡಕಟ್ಟು ಜನರು ತಮ್ಮ ಬಾವಿ, ಕೆರೆಗಳಿಂದ ನೀರನ್ನು ಕೊಡ, ಬಿಂದಿಗೆಗಳ ಮೂಲಕ ಸೇದಿ

ಅಡಿಕೆ, ತೆಂಗಿನ ಮರಗಳನ್ನು ಬೆಳೆಸಿದವರು ಅನೇಕರು. ಜಿಲ್ಲೆಯಲ್ಲಿ ಮಳೆಗಾಲದಲ್ಲಿ ಅವ್ಯಾಹಕವಾಗಿ ಬಿರಸು ಮಳೆ ಬಂದರೆ, ಅದೇ ಬೇಸಿಗೆ ಕಾಲದಲ್ಲಿ ಕುಡಿಯಲಿಕ್ಕೂ ನೀರಿಗಾಗಿ ತಾತ್ಸಾರ ಪಡಬೇಕಾದ ಪರಿಸ್ಥಿತಿ ಇದೆಯೆಂದರೆ ನಂಬಲಸಾಧ್ಯ. ಆದರೆ ಅದು ಕಟುಸತ್ಯವೆಂದು ಹೇಳಲೇಬೇಕು.

**೫.೯ ಭಾಷೆ**

ಮನುಷ್ಯನಿಗೂ ಪ್ರಾಣಿಗೂ ಇರುವ ವ್ಯತ್ಯಾಸಗಳಲ್ಲಿ ಅತೀ ಮುಖ್ಯವಾಗಿರುವುದು ಮಾತು. ಮಾತು ಬರುವ ಶಕ್ತಿಯಿಂದಲೇ ಮಾನವನ ಬೆಳವಣಿಗೆ, ತಾಂತ್ರಿಕತೆ ಎಲ್ಲವೂ ಉಂಟಾಗಿವೆ. ಭಾಷೆಯೇ ಇಲ್ಲವೆಂದ ಮೇಲೆ ಒಬ್ಬರು ಹೇಳಿದ್ದನ್ನು ಇನ್ನೊಬ್ಬರು ಅರ್ಥಮಾಡಿಕೊಳ್ಳುವುದಾದರೂ ಹೇಗೆ? ಮಾನವನ ಇಂದಿನ ಬೆಳವಣಿಗೆಗೆ ಮಾತನಾಡುವ ಶಕ್ತಿಯೇ ಮೂಲ ಅಡಿಪಾಯ. ಭಾಷೆಗಳಿಲ್ಲದ ಯಾವುದೇ ಸಮುದಾಯ, ಜನಾಂಗ ಜಗತ್ತಿನಲ್ಲಿ ಎಲ್ಲಿಯೂ ಇರಲಾರದು. ಭಾಷೆಯನ್ನು ಸಂಸ್ಕೃತಿಯ 'ಪ್ರಧಾನ ಮೌಲಿಕ ವಾಹಕ' 'ಸಮಾಜ ಮತ್ತು ಸಂಸ್ಕೃತಿಯ ಕನ್ನಡಿ', 'ವ್ಯಷ್ಟಿ ಮತ್ತು ಸಮಷ್ಟಿಯ ಉಸಿರು' ಎಂದೆಲ್ಲಾ ಹೇಳಲಾಗಿದೆ.

ವ್ಯಕ್ತಿ ತನ್ನ ಸುಖದುಃಖಗಳನ್ನು ಮತ್ತೊಬ್ಬನಿಗೆ ತಿಳಿಸುವ ಮಾಧ್ಯಮವೇ ಭಾಷೆ. ಭಾಷೇಯ ಮೂಲಕ ವ್ಯಕ್ತಿ-ವ್ಯಕ್ತಿಗಳ ಮಧ್ಯೆ ಪರಸ್ಪರ ಸಮೀಪವಾಗಿ ಭ್ರಾತೃತ್ವ ಬೆಳೆಯುತ್ತದೆ. ವಿಶಾಲವಾದ ನಮ್ಮ ಭಾರತದಲ್ಲಿ ನೂರಾರು ಭಾಷೆಗಳಿವೆ. ಸಂಶೋಧಕರ ಪ್ರಕಾರ ಪ್ರತಿ ೨೦ ಕಿ.ಮೀ.ಗೇ ಒಂದು ಭಾಷೆಯಲ್ಲಿಯೇ ಭಿನ್ನತೆ ಕಂಡುಬರುವ ಈ ಉಪಖಂಡದಲ್ಲಿ ಎಲ್ಲಾ ಭಾಷಿಕರು ಸಹೃದಯತೆಯಿಂದ ಜೀವನ ಮಾಡುತ್ತಿದ್ದಾರೆ. ಭಾಷೆಗಳಲ್ಲಿ ತಾರತಮ್ಯ ಭಾವಗಳನ್ನು ಗಣಿಸಬಾರದು. ಭಟ್ಟಾಕಳಂಕದೇವ ಹೇಳುವಂತೆ 'ಸರ್ವ ಭಾಷಾಮಯೀ ಸರಸ್ವತಿ'! ಎಲ್ಲಾ ಭಾಷೆಗಳೂ ಸರಸ್ವತಿಯ ಸ್ವರೂಪಗಳೇ ಎಲ್ಲಾ ಭಾಷೆಗಳ ಉದ್ದೇಶಗಳೂ ಒಂದೇ.

ಸಮಾಜದ ಶಾಬ್ದಿಕ ಪ್ರತೀಕದಂತಿರುವ ಭಾಷೆ ಪ್ರತಿಯೊಂದು ಸಮಾಜ, ಸಮುದಾಯದಲ್ಲಿ ಆಯಾ ಕಾಲ ಮತ್ತು ಸಂದರ್ಭಕ್ಕನುಗುಣವಾಗಿ ರೂಪ ಪಡೆದಿರುವುದು ಕಂಡುಬರುತ್ತದೆ. ಸ್ವವೈಶಿಷ್ಟ್ಯತೆ ಎನ್ನುವುದು ಎಲ್ಲಾ ನಾಡು, ನುಡಿ, ಸಮಾಜ, ಧರ್ಮ, ಸಮುದಾಯ, ಜನಾಂಗದ ಕುರುಹಾಗಿದೆ. ಅದು ಪ್ರತ್ಯಕ್ಷ, ಪರೋಕ್ಷವಾಗಿ ಕಂಡುಬರುತ್ತದೆ. ಪ್ರತ್ಯಕ್ಷವಾಗಿ ಸುಲಭವಾಗಿ ಗುರುತಿಸುವುದೇ ನಾವು ಅವರಾಡುವ ಭಾಷೆಯಿಂದ.

''ಸಮಾಜ ಶಾಸ್ತ್ರದ ದೃಷಿಯಲ್ಲಿ ಭಾಷೆ ಸಾಮಾಜಿಕ ವ್ಯವಹಾರಕ್ಕೆ ಕೇವಲ ಒಂದು ಸಾಧನ. ಈ ದೃಷ್ಟಿಯಿಂದ ಒಂದೇ ಭಾಷೆಗೆ ಒಂದು ವಿಶೇಷ ಸ್ಥಾನಮಾನ ಕೊಡುವುದು, ಒಂದು ಭಾಷೆಯನ್ನು ಅಭಿಮಾನದಿಂದ ನೋಡುತ್ತಾ ಇತರ ಭಾಷೆಗಳನ್ನು ಖಂಡಿಸುವುದು ಸರಿಯಲ್ಲ. ಸಂಘ ಜೀವನದಲ್ಲಿ ವ್ಯವಹಾರ ಸುಗಮವಾಗಬೇಕಾದರೆ ಮಾನವರ ಬೇರೆ ಬೇರೆ ಸಾಂಸ್ಕೃತಿಕ ವರ್ಗಗಳಲ್ಲಿ ಪರಸ್ಪರ ಸಂಬಂಧ ಬೆಳೆಯಬೇಕಾದರೆ ಭಾಷೆಯೇ ಮುಖ್ಯ ಸಾಧನ. ಒಂದು ದೇಶದ ಅಥವಾ ಪ್ರಾಂತ್ಯದ ಜನ ಎಷ್ಟು ಭಾಷೆಗಳನ್ನು ಕಲಿಯಬೇಕೆಂಬುದನ್ನು ಈ ದೃಷ್ಟಿಯಿಂದ ಪರಿಶೀಲಿಸಬೇಕಾಗುತ್ತದೆ.'' ಭಾರತವು ವಿವಿಧ ಭಾಷಾವರ್ಗದಿಂದ ಕೂಡಿದ ದೇಶವಾಗಿದೆ. ಬಿಟ್ಟು ಆಡಳಿತ ದೃಷ್ಟಿಯಿಂದ ಬೇರೆ ಬೇರೆಯಾಗಿ ಕಂಡು ಬಂದರೂ ಸಾಮಾಜಿಕವಾಗಿ ಒಗ್ಗಟ್ಟನಿಂದಿದ್ದಾರೆ. ಭಾರತ ದೇಶದೊಳಗೆ ಇರುವವರೆಲ್ಲರೂ

ಭಾರತೀಯರು

ದಕ್ಷಿಣ ಕನ್ನಡ ಜಿಲ್ಲೆಯ ಭಾಷೆಗಳ ಬಗ್ಗೆ ಹಿರಿಯ ಭಾಷಾ ವಿದ್ವಾಂಸರಾದ ಮರಿಯಪ್ಪ ಭಟ್ಟರು ತುಳು, ಕನ್ನಡ, ಮರಾಠಿ, ಮಲಯಾಳಂಗಳಲ್ಲಿಯೂ ಪ್ರಾದೇಶಿಕ ಉಪಭಾಷೆಗಳಿರುವುದನ್ನು ವಿವರಿಸುತ್ತಾ ''ಭಾಷೆಯ ಮಟ್ಟಿಗೆ ದಕ್ಷಿಣ ಕನ್ನಡ ಒಂದು ವಿವಿಧ ವಸ್ತು ಪ್ರದರ್ಶನ ಶಾಲೆಯಂತಿದೆ'' ಎಂದು ಹೇಳುತ್ತಾರೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ತುಳು ಭಾಷೆಯು ಮೂಲ ದ್ರಾವಿಡದಿಂದ ಒಡೆದು ಬಂದ ಭಾಷೆಯಾಗಿ ಉಳಿದರೆ, ಕನ್ನಡ, ಗೌಡ ಕನ್ನಡ (ಸುಳ್ಯ ಪರಿಸರ) ಹವ್ಯಕ ಕನ್ನಡ ಮುಂತಾದ ಕನ್ನಡದ ಉಪಭಾಷೆಗಳು ಒಂದೆಡೆಯಾದರೆ ಕೊಂಕಣಿ, ಮಲಯಾಳಂ, ಬ್ಯಾರಿ, ಮರಾಠಿ, ತಮಿಳು ಮುಂತಾದ ಭಾಷೆಗಳನ್ನಾಡುವ ಸಮೂಹಗಳು ಜಿಲ್ಲೆಯಾದ್ಯಂತ ಇವೆ.

ದಕ್ಷಿಣ ಕನ್ನಡ ಜಿಲ್ಲೆಯ ಮರಾಟಿಗರು ಮರಾಠಿ ಭಾಷೆ ಮಾತನಾಡುತ್ತಿರುವುದರಿಂದ ಇಂದಿಗೂ ಅವರನ್ನು 'ಮರಾಟಿ ನಾಯ್ಕ'ರು (ನ್ಯಾಕರು) ಎಂದು ಇತರ ಸಮುದಾಯದವರು ಸಂಭೋದಿಸುತ್ತಾರೆ. ಇವರ ಮರಾಠಿ ಭಾಷೆಯು ಮರಾಠಿಯ ಒಂದು ಉಪಭಾಷೆಯಾಗಿದೆ. ಇತರೆ ಭಾಷೆಗಳ ಪ್ರಭಾವ ಇದರ ಮೇಲಾಗಿರುವುದು ಮೇಲ್ನೋಟದಲ್ಲಿಯೇ ಕಂಡುಬರುತ್ತದೆ. ವಕ್ತೃ ಮಾಹಿತಿಯ ಪ್ರಕಾರ ಮರಾಟಿಗರು ಜಿಲ್ಲೆಗೆ ಕಾಸರಗೋಡು ಪ್ರದೇಶದ ಮೂಲಕ ಬಂದವರು, ಕಾಸರಗೋಡು ತುಳುನಾಡಿನ ಪ್ರಮುಖ ಪ್ರಾಂತ್ಯವೇ ಆಗಿತ್ತು. ಮರಾಟಿಗರಿಗೆ ಪುರೋಹಿತರಾಗಿರುವ ಕರ್ಹಾಡ ಬ್ರಾಹ್ಮಣರೂ ಕೂಡ ಪ್ರಥಮದಲ್ಲಿ ಕಾಸರಗೋಡು ಪ್ರದೇಶಕ್ಕೆ ಬಂದವರೆಂದು ಸಂಶೋಧನೆಗಳು ದೃಢಪಡಿಸಿವೆ. ಕರ್ಹಾಡ ಬ್ರಾಹ್ಮಣರ ಹತ್ತಿರ ಹತ್ತಿರದಲ್ಲಿಯೇ ಮರಾಟಿಗರು ವಾಸಿಸುತ್ತಿದ್ದಾರೆ. ರಾಧಾಕೃಷ್ಣ ಬೆಳ್ಳೂರು ಅವರು ತಮ್ಮ ''ಕಾಸಡರಗೋಡಿನ ಕರ್ಹಾಡ ಉಪಭಾಷೆ'' ಎಂಬ ಎಂ.ಫಿಲ್ ಪ್ರಬಂಧದಲ್ಲಿ ''ಪರಿಶಿಷ್ಟ ಪಂಗಡದ ಮರಾಠೀ ನಾಯ್ಕರೂ ಕರ್ಹಾಡ ಬ್ರಾಹ್ಮಣರೊಂದಿಗೆ ಇಲ್ಲಿಗೆ ವಲಸೆ ಬಂದವರು. ಇವರು ಕರ್ಹಾಡರಂತೆಯೇ ಮರಾಠಿಯ ಉಪಭಾಷೆಯೊಂದನ್ನು ಆಡುತ್ತಿದ್ದು, ಇದು ಕನ್ನಡಕ್ಕಿಂತ ಹೆಚ್ಚು 'ತುಳುವಿನ' ಪ್ರಭಾವಕ್ಕೆ ಒಳಗಾಗಿದೆ.'' ಎಂದು ತಿಳಿಸಿದ್ದಾರೆ.

ಮನುಷ್ಯನ ಚಿಂತನ ಶಕ್ತಿ ಮತ್ತು ವ್ಯವಹಾರ ಬೆಳೆದಂತೆಲ್ಲಾ ಅವನಾಡುವ ಭಾಷೆಯಲ್ಲಿ ಅವನು ಹೇಳಬೇಕಾದ ವಿಷಯಕ್ಕೆ ಸಂಬಂಧಿಸಿದ ಶಬ್ದಗಳು ಇಲ್ಲದಿದ್ದಾಗ ಮತ್ತೊಂದು ಭಾಷೆಯಿಂದ ಅವನ್ನು ಎರವಲು ಪಡೆಯುವುದು ಸಹಜ. ಇದರಲ್ಲಿ ಮಡಿವಂತಿಕೆ ಮಾಡಿದರೆ ಯಾವುದೇ ಭಾಷೆಯು ಬೆಳೆಯಲು ಕಷ್ಟಸಾಧ್ಯವಾಗುತ್ತದೆ. ಮರಾಟಿಗರ ಮರಾಠಿ ಒಂದು ಉಪಭಾಷೆಯಾಗಿದ್ದು ಲಿಖಿತ ಸಾಹಿತ್ಯಗಳು ಇಲ್ಲ ಎಂದೇ ಹೇಳಬೇಕು. ಇದ್ದರೂ ಅದು ಬೆರಳೆಣಿಕೆಯದು. ಜನಪದ ನೆಲೆಯಲ್ಲಿ ಅನೇಕ ಕತೆಗಳು, ಹಾಡುಗಳು, ಒಗಟು, ಗಾದೆಗಳು ಎಲ್ಲವೂ ಕನ್ನಡ, ತುಳು, ಮಲಯಾಳಂಗಳಿಂದ ಅನುವಾದಿಸಿದವು, ಆಯಾ ಪ್ರಾದೇಶಿಕ ವ್ಯವಹಾರಿಕ ಭಾಷೆಗಳ ಮೌಖಿಕ ಸಾಹಿತ್ಯಗಳು ಮರಾಟಿಗರ ಮರಾಠಿ ಭಾಷೆಗೆ ತರ್ಜುಮೆಗೊಂಡಿರುವುದು ಬಿಟ್ಟರೆ, ಮರಾಠಿ ಭಾಷೆಯಲ್ಲಿ ಹೇಳಿಕೊಳ್ಳುವಂತಹ ಸಾಹಿತ್ಯಗಳೇನೂ ದೊರಕುವುದಿಲ್ಲ. ಇಂದಿನ ತಲೆಮಾರಿನಲ್ಲಿ ಸಾಹಿತ್ಯಗಳೆಲ್ಲವೂ ಕನ್ನಡ ಭಾಷೆಯಲ್ಲಿರುವುದು

ಗಮನೀಯ.

**ಸಂಪರ್ಕ ಭಾಷೆ**

ಮರಾಟಿಗರು ಮಹಾರಾಷ್ಟ್ರದ ಸಂಸ್ಕೃತಿಯನ್ನು ಪಡೆದುಕೊಂಡು ಬಂದರೂ ತುಳುವರಲ್ಲಿ ಒಂದಾಗಿದ್ದಾರೆ. ಭೌಗೋಳಿಕ ಅಂಶಕ್ಕೂ ಮಿಗಿಲಾಗಿ ಸಾಮಾಜಿಕ ಅಂಶಗಳು ಭಾಷಾ ಭಿನ್ನತೆಗೆ ಕಾರಣವಾಗುವ ಸಾಧ್ಯತೆ ಇದೆ. ಜಾತಿ, ವರ್ಗ, ವಿದ್ಯೆ, ಅಂತಸ್ತು ಒಂದು ಭಾಷೆಯ ಮೇಲೆ ಬೀರುವ ಪ್ರಭಾವ ಉಂಟುಮಾಡುವ ಭಿನ್ನತೆಯು ಕೂಡ ಗಮನಾರ್ಹವಾದುದು. ಓರ್ವ ಅಕ್ಷರ ಕಲಿತು ಉದ್ಯೋಗ ಹಿಡಿದು ಮುಂದುವರಿದಂತೆಲ್ಲಾ ಆತನಲ್ಲಿನ ಭಾಷೆ ವ್ಯತ್ಯಾಸವನ್ನು ಗುರುತಿಸಬಹುದು. ಇಂದು ಜಾತಿಯ ಆಧಾರದ ಮೇಲೆ ಉಪಭಾಷೆಯನ್ನು ಸೂಚಿಸುವ ಪ್ರವೃತ್ತಿ ಹೆಚ್ಚುತ್ತಿದೆ. ಇದನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಮರಾಟಿಗರು ಮರಾಠಿ ಭಾಷೆಯನ್ನು ಮಾತನಾಡಿದರೆ ಹವ್ಯಕರು-ಹವ್ಯಕ ಕನ್ನಡ, ಒಕ್ಕಲಿಗ ಗೌಡರು-ಗೌಡ ಕನ್ನಡ ಬಂಟರು-ತುಳು ಹೀಗೆ ಮುಂದುವರಿಯುತ್ತದೆ.

ಮರಾಟಿಗರು ಸಂಪರ್ಕ ಭಾಷೆಯಾಗಿ ತುಳು ಮತ್ತು ಕನ್ನಡವನ್ನು ಬಳಸುತ್ತಿದ್ದಾರೆ. ವಲಸೆ ಬಂದ ಆರಂಭದಲ್ಲಿ ಕನ್ನಡಕ್ಕಿಂತ ಹೆಚ್ಚಾಗಿ ತುಳು ಭಾಷೆಯನ್ನು ಹೆಚ್ಚಾಗಿ ಅಥವಾ ಅನಿವಾರ್ಯವಾಗಿ ಸಂಪರ್ಕ ಭಾಷೆಯಾಗಿ ಬಳಸಿಕೊಂಡಿದ್ದಾರೆ ಎಂದು ಹೇಳಬಹುದು. ಇಂದಿಗೂ ಜಿಲ್ಲೆಯಲ್ಲಿ ಅನೇಕರಿಗೆ ಕನ್ನಡ ಭಾಷೆ ಮಾತನಾಡಲು ಬರುವುದಿಲ್ಲ. ತುಳು ಅಥವಾ ಮರಾಠಿಯಲ್ಲಿಯೇ ಮಾತನಾಡುತ್ತಾರೆ. ಇದರಿಂದ ಇವರು ಕನ್ನಡ ಭಾಷೆಗಿಂತ ಹೆಚ್ಚಾಗಿ 'ತುಳು'ವನ್ನು ನೆಚ್ಚಿಕೊಂಡಿದ್ದಾರೆ ಎಂಬುದು ತಿಳಿದುಬರುತ್ತದೆ. ಬದಲಾದ ಸಮಾಜದಲ್ಲಿ ಮರಾಟಿಗರ ಭಾಷೆಯಲ್ಲಿಯೂ ಬದಲಾವಣೆಯಾಗಿದೆ. ಇಂದಿನ ತಲೆಮಾರಿನಲ್ಲಿ ಬಹುಸಂಖ್ಯಾತರ ಮಾತೃಭಾಷೆ -'ತುಳು' ಆಗಿದೆ. ಅನೇಕ ವಿದ್ವಾಂಸರು ಅದನ್ನು ಗುರುತಿಸಿದ್ದಾರೆ. ''ಪಾದೆಕಲ್ಲು ವಿಷ್ಣುಭಟ್ ಅವರು ಮರಾಟಿಗರ ಭಾಷೆಯ ಬಗ್ಗೆ ಈ ರೀತಿ ಹೇಳುತ್ತಾರೆ''. ಬೇರೆಡೆಯಿಂದ ಇಲ್ಲಿಗೆ ಬಂದ ಜನವರ್ಗಗಳು ಕ್ರಮೇಣ ತಮ್ಮ ಭಾಷೆಯನ್ನು ಮರೆತು ಇಲ್ಲಿಯ ಬಹು ಜನಗಳ ಭಾಷೆಯಾದ ತುಳುವನ್ನು ಸ್ವೀಕರಿಸುವುದಕ್ಕೆ ಇಲ್ಲಿ ಉದಾಹರಣೆಗಳಿವೆ. ಆದರೆ ಈ ಪರಿವರ್ತನೆ ಯಾವುದೇ ಒತ್ತಡ ಅಥವಾ ಬಲಾತ್ಕಾರದಿಂದಾದುದಲ್ಲ. ಸಹಜವಾಗಿ ನಡೆದ ವಿಧ್ಯಮಾನ. ಈ ರೀತಿ ಭಾಷೆಯನ್ನು ಬದಲಿಸಿಕೊಂಡರೂ ಆ ಜನಾಂಗದ ವ್ಯಕ್ತಿಗಳು ಹೆಚ್ಚಾಗಿ ನೆಲೆಸಿರುವಲ್ಲಿ ಅವರ ಮೂಲ ಭಾಷೆ ಉಳಿದಿದೆ. ಉದಾಹರಣೆಗೆ ಮರಾಠೀ ಮಾತೃ ಭಾಷೆಯ ನಾಯ್ಕರ ಎಷ್ಟೋ ಕುಟುಂಬಗಳು ಇಂದು ತುಳು ಮಾತನ್ನು ಅಂಗೀಕರಿಸಿವೆ. ಆ ಕುಟುಂಬಗಳವರಿಗೆ ಕೆಲವು ತಲೆಮಾರುಗಳಿಂದ ಮರಾಠಿ ಬರುತ್ತಿಲ್ಲ. ಆದರೆ ಮರಾಠಿಯನ್ನೇ ಆಡುವ ಕುಟುಂಬಗಳು ಸಾಕಷ್ಟು ಸಂಖ್ಯೆಯಲ್ಲಿವೆ.

ಮರಾಟಿಗರ ಮರಾಠಿ ಭಾಷೆ ಕೂಡ ಪ್ರಾದೇಶಿಕ ಭಿನ್ನತೆಯಿಂದ ಕೂಡಿದೆ. ದಕ್ಷಿಣ ಕನ್ನಡದಲ್ಲಿ ಮಾತನಾಡುವ ಮರಾಠಿ ಭಾಷೆಗೂ ಮಡಿಕೇರಿ ಪ್ರದೇಶದಲ್ಲಿ ವಾಸವಾಗಿರುವ ಮರಾಟಿಗರ ಮರಾಠಿ ಭಾಷೆಗೂ ವ್ಯತ್ಯಾಸಗಳು ಕಂಡುಬರುತ್ತವೆ. ಜಿಲ್ಲೆಯಲ್ಲಿನ ಮರಾಠಿ ಭಾಷೆಗೂ ಮೂಲ ಮಹಾರಾಷ್ಟ್ರದ ಮರಾಠಿ ಭಾಷೆಗೂ ವ್ಯತ್ಯಾಸವಿದೆ.

ಅಲೆಮಾರಿತನ, ವಲಸೆ ಸಂದರ್ಭದಲ್ಲಿ ಇತರ ಭಾಷೆಗಳ ಪ್ರಭಾವ ಆಗಿರುವುದನ್ನು ತಿಳಿಯಬಹುದು.

ಈ ಕೆಳಗೆ ಮರಾಟಿಗರ ಮರಾಠಿ ಭಾಷೆ, ಮೂಲ ಮರಾಠಿ ಭಾಷೆ, ತುಳು ಜೊತೆಗೆ ಕನ್ನಡ ಪದಗಳನ್ನು ನೀಡಲಾಗಿದೆ.

ಅಂಗವಾಚಕಗಳು

| ಮರಾಟಿಗರ ಮರಾಠಿ | ಮರಾಠಿ | ತುಳು | ಕನ್ನಡ |
|---|---|---|---|
| ಪಾಯಿ | ಪಾಯ | ಪಾದೆ | ಅಂಗಾಲು |
| ಇರ್ದೆ | ಛಾಲೆ | ತಿಗಲೆ | ಎದೆ |
| ಡೋಲೋ | ಹೋಳೆ | ಹಣ್ಣೀ | ಕಣ್ಣು |
| ಕಾಣ್ | ತಾಣ್ | ಕೆಬಿ | ಕಿವಿ |
| ಶಕ್ಕಲೆ | ಡೊಕೆ | ತರೆ | ತಲೆ |
| ಥೊಂಡ್ | ಥೊಂಡ್ | ಬಾಯಿ | ಬಾಯಿ |
| ದಾಂತ್ | ದಾಂತ್ | ಕೂಲಿ | ಹಲ್ಲು |
| ಮಿಸೋನ್ | ಮೀಸೆ | ಮೀಸೆ | ಮೀಸೆ |
| ಕೇನ್ಸ್ | ಕೆಸ್ | ಕೂಜಲ್ | ಕೂದಲು |

ಸಂಬಂಧವಾಚಕಗಳು

| | | | |
|---|---|---|---|
| ಬಾಬಾ | ವಡಿಲ | ಅಮ್ಮೆ | ಅಪ್ಪ |
| ಬಾಯಿ | ಆಯಿ | ಅಪ್ಪೆ | ಅಮ್ಮ |
| ಬಾಯಿಲ್ | ಬಾಯಿಕೋ | ಬುಡೆದಿ | ಹೆಂಡತಿ |
| ಗೋವು | ನವರಾ | ಕಂಡನಿ | ಗಂಡ |
| ಚೆಡು ದಾಕ್‌ಲೆ | ಪೂರಗಿ | ಪೊಣ್ಣು | ಹೆಣ್ಣುಮಗು |
| ಜಿಲ್ಲೊ ದಾಕ್‌ಲೆ | ಪೊರಗಾ | ಆಣ್ | ಗಂಡು ಮಗು |
| ಲೇಂಕ್ | ಮುಲಗಿ | ಮಗಳ್ | ಮಗಳು |

ನಾಮಪದಗಳು

| | | | |
|---|---|---|---|
| ಘುರ್ | ಘುರ್ | ಇಲ್ಲ್ | ಮನೆ |
| ಕುದಿಕ್ಕೊ | | ಕುದಿಕ್ಕ | ನರಿ |
| ನಾರೊಶ್ | ನಾರಳ್ | ತಾರಾಯಿ | ತೆಂಗಿನಕಾಯಿ |
| ಡುಕೊರು | ಡೂಕರ | ಪಂಜಿ | ಹಂದಿ |
| ಕೊಮ್ಡೊ | ಕೊಮಡಿ | ಕೋರಿ | ಕೋಳಿ |

ಕ್ರಿಯಾ ಪದಗಳು

| | | | |
|---|---|---|---|
| ದಾಕಲೆ ರಡ್ತ್ತ | ಬಾಳ ರಡಾಯಿ ತಾಯಿ | ಬಾಲೆ ಬುಲಿಪುಂಡು | ಮಗು ಅಳುತ್ತಿದೆ |
| ತೂ ಜೆ ವೂನ್ | ಜೆವಣಕರ್ | ಮನಸ್ ಮಾನ್ಪು | ಊಟಮಾಡು |
| ಪಾತ್ರ ದೊವುಂಜೆ | ಟಾಂಡೆ ಧೋ | ಪಾತ್ರಿ ದೆಕ್ಕ್ಲ | ಪಾತ್ರೆತೊಳೆ |

ಸರ್ವನಾಮಗಳು

| | | | |
|---|---|---|---|
| ತೂ | ತೋ | ಆಯೆ | ಅವನು |
| ತೆ | ತೇ | ಆಳ್ | ಅವಳು |
| ಮಿ | ಮೀ | ಎನ್ | ನಾನು |
| ತೂ | ತೂ | ಈ | ನೀನು |

ಉಡುಪುಗಳು

| | | | |
|---|---|---|---|
| ಲಂಗೋ | ಪರಕರ | ಲಂಗೊ | ಲಂಗ |
| ಸುಡ್ಕೊ | ಸಾಡಿ | ಸೀರೆ | ಸೀರೆ |
| ರವಿಕೆ | ಜಂಪರ | ರವುಕೆ | ರವಿಕೆ (ಕುಪ್ಪಸ) |
| ಕಾಪಡ್ | ಶಾನಸಾಡಿ | ಎಡ್ಡೆಸೀರೆ | ಒಳ್ಳೆಯ ಸೀರೆ |

ಸಂಖ್ಯಾವಾಚಕಗಳು

| | | | |
|---|---|---|---|
| ಎಕ್ | ಏಕ್ | ಒಂಜಿ | ಒಂದು |
| ದೋನ್ | ದೋನ್ | ರಡ್ಡ್ | ಎರಡು |
| ತೀನ್ | ತೀನ್ | ಮೂಜಿ | ಮೂರು |
| ಚಾರ್ | ಚಾರ್ | ನಾಲ್ | ನಾಲ್ಕು |
| ಪಾಂಚ್ | ಪಾಂಚ್ | ಐನ್ | ಐದು |
| ಸೊಂಬೆರ್ | ಸೊ | ನೂದು | ನೂರು |

ಬಹುಸಂಖ್ಯಾತ ವರ್ಗದ ಭಾಷೆಯ ಪ್ರಭಾವ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ತುಳು ಬಹುಸಂಖ್ಯಾತ ವರ್ಗದ ಭಾಷೆ. ಜಿಲ್ಲೆಯ ಬಹುಸಂಖ್ಯಾತ ಸಮುದಾಯಗಳೆಂದರೆ ಬಂಟರು, ಈಡಿಗರು (ಬಿಲ್ಲವರು) ಇವರ ಮಾತೃ ಭಾಷೆ ತುಳು. ತುಳು ಭಾಷೆಗೆ ಲಿಪಿ ಇಲ್ಲದಿದ್ದರೂ (ಮಲಯಾಳಂ ಲಿಪಿ ತುಳು ಲಿಪಿಯಾಗಿತ್ತು ಎಂಬ ವಾದವೂ ಇದೆ) ಮೌಖಿಕ ಸಾಹಿತ್ಯ ಭಂಡಾರ ಅಗಾಧವಾಗಿದೆ. ತುಳು ಜಿಲ್ಲೆಯಲ್ಲಿ ವ್ಯವಹಾರಿಕ ಭಾಷೆಯಾಗಿಯೇ ಮುಂದುವರೆದಿದೆ. ರಾಜ್ಯದ ಆಡಳಿತ ಭಾಷೆಯಾದ ಕನ್ನಡ ಪ್ರಾದೇಶಿಕ ಭಿನ್ನತೆ (ಮಂಗಳೂರು ಕನ್ನಡ) ಯಿಂದ ಕೂಡಿದೆ. ಜಿಲ್ಲೆಯಲ್ಲಿ ಮರಾಟಿಗರ ಮೇಲೆ ಅತ್ಯಂತ

ಪ್ರಭಾವ ಬೀರಿದ ಭಾಷೆ ತುಳು. ಆರಂಭದ ಹಂತದಿಂದಲೇ ಪ್ರಾದೇಶಿಕ ಭಾಷೆಯಾದ ತುಳು ಸಂಪರ್ಕಕ್ಕೆ ಅನಿವಾರ್ಯವಾಯಿತು. ಮರಾಟಿಗರಿಗೆ ಇಂದಿಗೂ ಕೆಲವೊಂದು ಹಳ್ಳಿಗಳಲ್ಲಿ ಈ ಸಮುದಾಯದ ಅನೇಕ ಹಿರಿಯರಿಗೆ ತುಳು ಮತ್ತು ಮರಾಠಿ ಭಾಷೆ ಬರುತ್ತದೆಯೇ ವಿನಃ ಕನ್ನಡ ಭಾಷೆ ಬರುವುದಿಲ್ಲ. ಎರಡನೆಯದಾಗಿ ಕನ್ನಡ ಭಾಷೆ ಸಹಜವಾಗಿಯೇ ಪ್ರಭಾವ ಬೀರಿದೆ, ಕಚೇರಿ ವ್ಯವಹಾರ, ವಿದ್ಯಾಭ್ಯಾಸಗಳಲ್ಲೂ ಕನ್ನಡ ಭಾಷೆಯ ಮೂಲಕವೇ ನಡೆಯುತ್ತಿರುವುದರಿಂದ ಕನ್ನಡ ಸಲೀಸಾಗಿ ಬಂದಿದೆ. ಇಂದಿನ ಯುವ ಪೀಳಿಗೆಯಲ್ಲಿ ಬಹುಸಂಖ್ಯಾತರು ತುಳು ಮಾತೃಭಾಷೆಯನ್ನು ಹೊಂದಿದ್ದಾರೆ. ಕ್ರಮೇಣ ಮರಾಠಿ ಭಾಷೆಯನ್ನು ಹಿಂದೆ ತಳ್ಳುತ್ತಿದ್ದಾರೆ ಎಂದೆನಿಸುತ್ತಿದೆ. ಕಾರಣ ಅವರ ಪರಿಸರ ತುಳು ಭಾಷಿಕ ವರ್ಗದಿಂದ ಸುತ್ತುವರೆದಿರುವುದು ಮತ್ತು ವ್ಯವಹಾರಕ್ಕಾಗಿ ತುಳು/ಕನ್ನಡ ಬೇಕಾಗಿರುವುದು. ಜಿಲ್ಲೆಯಲ್ಲಿ ದಟ್ಟವಾಗಿ ಮರಾಟಿಗರೇ ವಾಸಿಸುತ್ತಿರುವ ಕೆಲವೊಂದು ಪ್ರದೇಶಗಳಲ್ಲಿ ಮರಾಠಿ ಭಾಷೆಯನ್ನೇ ಬಳಸುತ್ತಿದ್ದಾರೆ. ಸುಳ್ಯ ತಾಲೂಕಿನ ಆಲೆಟ್ಟಿ, ಪುತ್ತೂರಿನ ಏಣಿತಡ್ಕ, ಬಂಟ್ವಾಳದ ವಿಟ್ಲ, ಅಡ್ಯನಡ್ಕ, ಕೇಪು ಮುಂತಾದ ಗ್ರಾಮಗಳಲ್ಲಿ ಇಂದೂ ಪ್ರತಿಯೊಬ್ಬ ಮರಾಟಿಗನೂ ಮರಾಠಿ ಭಾಷೆಯಲ್ಲಿಯೇ ವ್ಯವಹರಿಸುವುದು ಕಂಡುಬರುತ್ತದೆ. ಮರಾಟಿಗರ ಸಂಪರ್ಕದಿಂದವ ಮರಾಠಿ ಭಾಷೆಯನ್ನು ಬಲ್ಲ ಇತರೆ ಸಮುದಾಯದವರೂ ಅನೇಕರಿದ್ದಾರೆ.

**ಸಾಂಸ್ಕೃತಿಕ ಶಿಕ್ಷಣ ಕ್ಷೇತ್ರಕ್ಕೆ ಮರಾಟಿಗರ ಕೊಡುಗೆ**

ವಲಸೆ ಬಂದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೆಲೆಸಿದಾಗಿನಿಂದ ಜಿಲ್ಲೆಯ ಎಲ್ಲಾ ಕ್ಷೇತ್ರಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡವರು ಮರಾಟಿಗರು. ಪ್ರತಿಯೊಂದು ಕೆಲಸ ಕಾರ್ಯಗಳಲ್ಲಿ ನಿಷ್ಠೆ, ನಂಬಿಕೆ, ನಿಷ್ಪಾರ್ಥ ಮನೋಭಾನೆಗಳನ್ನು ಹೊಂದಿದ ಇವರು ಎಲ್ಲಾ ಕ್ಷೇತ್ರಗಳಲ್ಲಿ ತಳದಿಂದ ಮೆಟ್ಟಲಾಗಿ ಮೇಲೇರಿ ಬಂದವರು ಜಿಲ್ಲೆಯಲ್ಲಿ ಅನೇಕ ಪ್ರತಿಭಾವಂತರು, ಸುಶಿಕ್ಷಿತರು, ಸಾಂಸ್ಕೃತಿಕ ಸಾಧಕರು ಇದ್ದಾರೆ. ಅವರೆಲ್ಲಾ ಎಲೆ ಮರೆಯ ಕಾಯಿಯಂತೆ ಇದ್ದಾರೆ. ಅವರಿಗೆ ಪ್ರೋತ್ಸಾಹ ದೊರೆಯುತ್ತಿಲ್ಲ. ಜಿಲ್ಲೆಯ ಜನಪದ ಕಲೆಯೆಂದರೆ ಯಕ್ಷಗಾನ ದೇಶ-ವಿದೇಶಗಳಲ್ಲಿ ಹೆಸರುವಾಸಿಯಾದ ಯಕ್ಷಗಾನ ಕ್ಷೇತ್ರದಲ್ಲಿ ಅನೇಕ ಮರಾಟಿಗರು ಸಾಧನೆ ಮಾಡಿದ್ದಾರೆ. ಮಾತೃಭಾಷೆ ಬೇರೆಯಾಗಿದ್ದರೂ ತುಳು, ಕನ್ನಡ ಭಾಷೆಯನ್ನು ತಮ್ಮದು ಎಂಬ ಭಾವನೆಯೊಂದಿಗೆ ಕಲಿತು ಯಕ್ಷಗಾನ ಕಲಾವಿದರಾಗಿ ಹೆಸರುವಾಸಿಯಾದವರು ಪಕಳಕುಂಜ ಕೃಷ್ಣನಾಯ್ಕ, ಬೆಳಾಲ್ ಶಾಂತಪ್ಪ ನಾಯ್ಕ, ದಾಸರಬೈಲು ಚನಿಯ ನಾಯ್ಕ ಪ್ರಮುಖರು.

**ಪಕಳಕುಂಜ ಕೃಷ್ಣನಾಯ್ಕ**

ಬೆಳ್ತಂಗಡಿ ತಾಲೂಕಿನಲ್ಲಿ ವಾಸವಾಗಿರುವ ಪಕಳಕುಂಜ ಕೃಷ್ಣನಾಯ್ಕರು ಕುಣಿತ ಮತ್ತು ಬಣ್ಣದ ವೇಷಗಳಿಗೆ ಹೆಸರು ಪಡೆದವರು. ವೃತ್ತಿಪರ ಯಕ್ಷಗಾನ ಮೇಳದಲ್ಲಿ ಸುಮಾರು ಮೂವತ್ತೆರಡು ವರ್ಷಗಳ ಕಾಲ ಯಕ್ಷಗಾನ ಕಲಾವಿದರಾಗಿ ದುಡಿದವರು. ಶುಂಭಾಸುರ, ಹಿಡಿಂಬ, ಕಾಲನೇಮಿ, ಮೈರಾವಣ, ಹಿಡಿಂಬಿ, ಶೂರ್ಪನಖಿ, ಅಜಮುಖಿ ಮೊದಲಾದ ವೇಷಗಳಲ್ಲಿ ಜನ ಮನ್ನಣೆ ಗಳಿಸಿದವರು. ಯಕ್ಷಗಾನದ ಸೇವೆಗಾಗಿ ಕರ್ನಾಟಕ ರಾಜ್ಯ ಪ್ರಶಸ್ತಿ

ಪುರಸ್ಕೃತರು. ಶೇಣಿ ಗೋಪಾಲಕೃಷ್ಣ ಭಟ್ ವಿಶ್ವಸ್ತ ಮಂಡಳಿಯು ಪ್ರತಿ ವರ್ಷ ನೀಡುತ್ತಿರುವ ಶೇಣಿ ಪ್ರಶಸ್ತಿಗೆ ತೆಂಕುತಿಟ್ಟಿನ ಪ್ರಸಿದ್ಧ ಬಣ್ಣದ ವೇಷದಾರಿ ಪಕಳಕುಂಜ ಕೃಷ್ಣನಾಯ್ಕರು ಭಾಜನರಾಗಿದ್ದಾರೆ.

**ಬೆಳಾಲ್ ಸಾಂತಪ್ಪ ನಾಯ್ಕ**

ಸುಮಾರು ಹದಿನಾರು ವರ್ಷಗಳ ಕಾಲ ಯಕ್ಷಗಾನದಲ್ಲಿ ಕಲಾವಿದರಾಗಿ ಸೇವೆ ಸಲ್ಲಿಸಿದ ಬೆಳಾಲ್ ಸಾಂತಪ್ಪ ನಾಯ್ಕರು ಮೂಲತಃ ಪುತ್ತೂರಿನ ಉಪ್ಪಿನಂಗಡಿಯಲ್ಲಿ ಜನಿಸಿದವರು. ಯಕ್ಷಗಾನದ ದಿಗ್ಗಜರೆಂದು ಕರೆಯಲ್ಪಡುವ ಕುರಿಯ ವಿಠಲ ಶಾಸ್ತ್ರಿಗಳ ನೇತೃತ್ವದ ಶ್ರೀ ಧರ್ಮಸ್ಥಳ ಯಕ್ಷಗಾನ ಮೇಳದಲ್ಲಿ ಸೇರಿ ಅನೇಕ ಸ್ತ್ರೀ ವೇಷದಲ್ಲಿ ಮಿಂಚಿದವರು. ಇವರು ಧರ್ಮಸ್ಥಳ, ಮೂಲ್ಕಿ, ಸುರತ್ಕಲ್ ಯಕ್ಷಗಾನ ಮೇಳಗಳಲ್ಲಿ ಕಲಾವಿದರಾಗಿದ್ದರು.

**ದಾಸರ ಬೈಲು ಚನಿಯ ನಾಯ್ಕ**

'ಯಕ್ಷಗಾನದ ಕೋಗಿಲೆ' ಎಂಬ ಹೆಸರನ್ನು ಪಡೆದ ದಾಸರ ಬೈಲು ಚನಿಯ ನಾಯ್ಕರು ಮುಲತಃ ಕಾಸರಗೋಡು ಜಿಲ್ಲೆಯವರು. ಹುಟ್ಟಿದ್ದು ಕಾಸರಗೋಡು ಆದರೂ ತನ್ನ ಜೀವಮಾನವನ್ನು ಕಳೆದುದು ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲೂಕಿನಲ್ಲಿ. ಯಕ್ಷಗಾನದ ಭಾಗತಿಕೆಯಲ್ಲಿ ಹೆಸರು ಪಡೆದ ಇವರು ಧರ್ಮಸ್ಥಳ ಮತ್ತು ಮಡಿಕೇರಿಯ ಚೌಡೇಶ್ವರಿ ಮೇಳಗಳಲ್ಲಿ ದುಡಿದಿದ್ದಾರೆ. ೧೯೯೭ರ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ ಚನಿಯ ನಾಯ್ಕರಿಗೆ ಜಿಲ್ಲೆಯ ವಿವಿಧ ಸಂಘ ಸಂಸ್ಥೆಗಳು ಸನ್ಮಾನಗಳು ಸಂದಿವೆ.

ಒಟ್ಟಾರೆಯಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮರಾಟಿಗರು ಯಕ್ಷಗಾನವನ್ನು ತುಂಬಾ ಪ್ರೀತಿ ಗೌರವಗಳಿಂದ ಕಾಣುತ್ತಲೇ ಬಂದಿದ್ದಾರೆ. ಗ್ರಾಮೀಣ ಪ್ರದೇಶಗಳಲ್ಲಿ ಜರುಗುತ್ತಿರುವ ತಾಳಮದ್ದಳೆಗಳಲ್ಲಿ ಬಹಳಷ್ಟು ಮಂದಿ ಮರಾಟಿಗರು ಭಾಗವಹಿಸುತ್ತಲೇ ಇರುತ್ತಾರೆ. ಇನ್ನುಳಿದಂತೆ ಕಾಸರಗೋಡು, ಉಡುಪಿ ಪ್ರದೇಶಗಳಲ್ಲಿ ಅನೇಕರು ಯಕ್ಷಗಾನ ಕ್ಷೇತ್ರದ ಸಾಧಕರು ಇದ್ದಾರೆ. ಹಿಂಕ್ಲಾಡಿ ಮಾಧವ ನಾಯ್ಕ, ಬಾಳಕಟ್ಟು ರಾಧಕೃಷ್ಣ ನಾಯ್ಕ, ಮಹಾಬಲ ನಾಯ್ಕ ಬೇಳಂಜ ಕಾರ್ಕಳ, ಉಪ್ಪೂರು ನಾರಾಯಣ ನಾಯ್ಕ, ಬೇಳಂಜೆ ಸುಂದರ ನಾಯ್ಕ, ಬಿ.ಗಣಪತಿ, ಪೆರ್ಲ ಬದಿಕುಂಞಪ್ಪ, ಸುಳ್ಯಪದವು ಚನಿಯಪ್ಪ, ಬಟ್ಯಾಜೆ ರಾಮನಾಯ್ಕ ಶ್ರೀಧರ ಪಡ್ರೆ ಹೀಗೆ ಕರಾವಳಿ ಕರ್ನಾಟಕದಲ್ಲಿ ಯಕ್ಷಗಾನಕ್ಕೆ ಕೊಡುಗೆ ನೀಡಿದವರು ಬಹಳಷ್ಟು ಮಂದಿ ಇದ್ದಾರೆ. ಆದರೆ ಇತ್ತೀಚಿನ ಯುವ ಪೀಳಿಗೆ ಮಾತ್ರ ಯಕ್ಷಗಾನದಿಂದ ದೂರ ಸರಿಯುತ್ತಿರುವುದು ವಿಷಾದನೀಯ. ಕರ್ನಾಟಕದ ಗಂಡುಕಲೆಯೆಂದೇ ಬಿಂಬಿತವಾದ ಯಕ್ಷಗಾನದಲ್ಲಿ ಯುವ ಪೀಳಿಗೆ ಆಸಕ್ತಿ ವಹಿಸುವಂತೆ ಮಾಡುವ ಕರ್ತವ್ಯ ಹಿರಿಯ ಮರಾಟಿಗರದು.

ಶಿಕ್ಷಣ ಕ್ಷೇತ್ರದಲ್ಲಿ ಅನೇಕ ಮಂದಿ ಮರಾಟಿಗರು ಹಿಂದಿನಿಂದಲೂ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ಪುತ್ತೂರಿನ ಬಿ.ಐತಪ್ಪ ನಾಯ್ಕರು ರಾಷ್ಟ್ರ ಪ್ರಶಸ್ತಿ ಪುರಸ್ಕೃತ ಮುಖ್ಯೋಪಾಧ್ಯಾಯರು. ಶಾಲಾ ಸಂಕೀರ್ಣಗಳಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ, ಕಲಿಕೆಯ ಕನಿಷ್ಟ ಮಟ್ಟದ ಜಿಲ್ಲಾ ಸಂಪನ್ಮೂಲ ವ್ಯಕ್ತಿಯಾಗಿ, ಜಿಲ್ಲಾ ಗುಡ್ಡಗಾಡು ಸಮುದಾಯಗಳ ಮಕ್ಕಳಿರುವ ಶಾಲೆಗಳ ಶಿಕ್ಷಕರ ತರಬೇತಿಗೆ ಜಿಲ್ಲಾ ಮಟ್ಟದ ಸಂಪನ್ಮೂಲ ವ್ಯಕ್ತಿಯಾಗಿ ಕಾರ್ಯನಿರ್ವಹಿಸಿದ ಅನುಭವ ಇವರಿಗಿದೆ. ಶಿಕ್ಷಣ ಇಲಾಖೆಯ ರಾಜ್ಯ ಪಠ್ಯ ಪುಸ್ತಕ ರಚನಾ ಸಮಿತಿಯ ಸದಸ್ಯರಾಗಿ, ರಾಜ್ಯ ಪಠ್ಯ

ಪುಸ್ತಕ ಪುನರ್ ಪರಿಶೀಲನೆ ಸಮಿತಿಯ ಸದಸ್ಯರಾಗಿ, ರಾಜ್ಯ ಪ್ರೌಢ ಶಾಲಾ ಪಠ್ಯವಸ್ತು ಪರಿಶೀಲನಾ ತಜ್ಞರ ಸಮಿತಿ ಸದಸ್ಯರಾಗಿ, ೭ನೇ ತರಗತಿ ಮೌಲ್ಯಮಾಪನ ಕಾರ್ಯದ ಮುಖ್ಯಸ್ಥರಾಗಿ, ದಕ್ಷಿಣ ಕನ್ನಡ ಜಿಲ್ಲಾ ಡಯಟ್ ಸಲಹಾ ಸಮಿತಿಯ ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ.

ಸದಾ ಕ್ರಿಯಾಶೀಲರಾಗಿ ಸೇವೆ ಸಲ್ಲಿಸುತ್ತಿರುವ ಬಿ.ಐತಪ್ಪ ನಾಯ್ಕರು ಅನಾಥ ಮತ್ತು ಬಡ ಮಕ್ಕಳನ್ನು ದತ್ತು ಸ್ವೀಕಾರ ಮಾಡಿ ಅವರಿಗೆ ವಿದ್ಯಾಭ್ಯಾಸ ಕೊಡಿಸುತ್ತಿದ್ದಾರೆ. ಶಿಕ್ಷಕರಾಗಿ ಶ್ರೀಯುತರ ಶ್ರದ್ಧೆ, ಪರಿಶ್ರಮ, ನಿಸ್ವಾರ್ಥ, ಸೇವೆಗಾಗಿ ತಾಲೂಕು, ಜಿಲ್ಲಾ, ರಾಜ್ಯ ಮತ್ತು ರಾಷ್ಟ್ರ ಪ್ರಶಸ್ತಿಗಳ ಗೌರವವನ್ನು ಪಡೆದಿದ್ದಾರೆ.

**ಜಾನಪದ ಗಾಯಕರಾಗಿ ಗೋಪಾಲ ನಾಯ್ಕ**

ದಕ್ಷಿಣ ಕನ್ನಡ ಜಿಲ್ಲಾಯ ಆರಾಧನೆ ಆಚರಣೆಗಳಲ್ಲಿ ಒಂದು 'ಸಿರಿ ಆಚರಣೆ' ಶೋಷಿತ ಮಹಿಳೆಯರ ಧ್ವನಿಯೆಂದೇ ಪರಿಗಣಿಸಲ್ಪಟ್ಟ 'ಸಿರಿ' ಆಚರಣೆಯಲ್ಲಿ ಕುಮಾರನಾಗಿ ಭಾಗವಹಿಸುವವರು ಶ್ರೀ ಮಾಚಾರು ಗೋಪಾಲ ನಾಯ್ಕರು. ಬೆಳ್ತಂಗಡಿ ತಾಲೂಕಿನ ನಿಡ್ಗಲ್ ಎಂಬಲ್ಲಿ ಜರುಗುವ ಸಿರಿಜಾತ್ರೆಯ ಸಂದರ್ಭದಲ್ಲಿ 'ಕುಮಾರ'ನಾಗಿ ಭಾಗವಹಿಸುವವರು ಮಾಚಾರು ಗೋಪಾಲ ನಾಯ್ಕರು. ಜಾತ್ರೆಯ ಸಂದರ್ಭದಲ್ಲಿ ಮಾಚಾರು ಗೋಪಾಲ ನಾಯ್ಕರು ಹಾಕಿದ ಸಿರಿ ಪಾಡ್ದನ ಮಹಾಕಾವ್ಯವು ಗ್ರಂಥರೂಪದಲ್ಲಿ ಪ್ರಕಟಗೊಂಡಿದೆ. ಫಿನ್‌ಲ್ಯಾಂಡಿನ ರಾಷ್ಟ್ರೀಯ ಪ್ರಾಧ್ಯಾಪಕರಾದ ಪ್ರೊ.ಲಾರಿ ಹಾಂಕೊ, ಮಂಗಳೂರು ವಿಶ್ವವಿದ್ಯಾಲಯದ ಪ್ರೊ.ಬಿ.ಎ.ವಿವೇಕ ರೈ ಮತ್ತು ಪ್ರೊ.ಚಿನ್ನಪ್ಪ ಗೌಡರ ತಂಡ ವೈಜ್ಞಾನಿಕ ಪರಿಕರಗಳನ್ನು ಉಪಯೋಗಿಸಿ, ಬಹುಮುಖಿ ದಾಖಲಾತಿ ವಿಧಾನಗಳ ಮೂಲಕ ಮಾಚಾರು ಗೋಪಾಲ ನಾಯ್ಕರು ಹಾಡಿನ ಸಿರಿ ಸಂಧಿಯನ್ನು ಶಾಶ್ವತವಾನ್ನಾಗಿಸಿದ್ದಾರೆ.

ನಿಡ್ಗಲ್ ಸಿರಿ ಜಾತ್ರೆಯಲ್ಲಿ ಪ್ರತಿ ವರ್ಷ ಗೋಪಾಲ ನಾಯ್ಕರ ನೇತೃತ್ವದಲ್ಲಿ ಸುಮಾರು ೭೦-೮೦ ಸಿರಿ ಮಹಿಳೆಯರು ಭಾಗವಹಿಸುತ್ತಾರೆ. ಆ ಮೂಲಕ ಶೋಷಿತ ಮಹಿಳೆಯರು ಇಲ್ಲಿ ನಿರಾಳರಾಗುತ್ತಾರೆ. ಸಿರಿ ಮಹಿಳೆಯರ ದೈಹಿಕ, ಮಾನಸಿಕ ಮತ್ತು ಕೌಟುಂಬಿಕ ತೊಂದರೆಗಳನ್ನು ವಿಚಾರಿಸಿ ಮಾನಕವಾಗಿ ಧೈರ್ಯವಂತರನ್ನಾಗಿಸುವತ್ತ ಮಾರ್ಗದರ್ಶನ ನೀಡುತ್ತಾರೆ, ಗೋಪಾಲ ನಾಯ್ಕರು. ಸಿರಿ ಸಂಧಿಯು ಸುಮಾರು ೧೫,೭೮೩ ಸಾಲುಗಳನ್ನು ಹೊಂದಿದ್ದು ಈ ಮಹಾಕಾವ್ಯವನ್ನು ಒಂಭತ್ತು ದಿನಗಳ ಅವಧಿಯಲ್ಲಿ ಗೋಪಾಲ ನಾಯ್ಕರು ಹಾಡಿದ್ದಾರೆ. ಇವರ ಸೇವೆಗಾಗಿ ಸ್ಥಳೀಯ ಅನೇಕ ಸಂಘ, ಸಂಸ್ಥೆಗಳು ಸನ್ಮಾನ ನೀಡಿವೆ. ೧೯೯೩ರಲ್ಲಿ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ರಾಜ್ಯ ಪ್ರಶಸ್ತಿ ಮಾಚಾರು ಗೋಪಾಲ ನಾಯ್ಕರಿಗೆ ಲಭಿಸಿದೆ.

**ಕೊನೆ ಟಿಪ್ಪಣಿಗಳು**

೦೧. ಗಣನಾಥ ಎಕ್ಕಾರು, ದಕ್ಷಿಣ ಕನ್ನಡ ಜಿಲ್ಲೆಯ ಜನಪದ ಆಟಗಳು, ಪು-೧೪

೦೨. ಗಣನಾಥ ಎಕ್ಕಾರು, ಪು-೫೮

೦೩. ಪೀಟಲ್.ಜೆ.ಕ್ಲಾಸ್, ತುಳುವ ದರ್ಶನ, ಪು-೨೩೧

೦೪. ಸುಂದರಲಾಲ್ ಬಹುಗುಣ, ತರಂಗ, ಪು-೫೮

೦೫. ಎಂ.ನಂಜಮ್ಮಣ್ಣಿ, ಭಾರತೀಯ ಸಾಮಾಜಿಕ ಸಂಘ ಸಂಸ್ಥೆ, ಪು-೨೬

೦೬. ಪಾದೆಕಲ್ಲು ವಿಷ್ಣುಭಟ್ಟ, ತುಳುವರಿವರು, ಪು-೭

* * * * *

ಅಧ್ಯಾಯ - ೬

# ವರ್ತಮಾನದಲ್ಲಿ ಮರಾಟಿಗರು

೬.೧. ಕೀಳರಿಮೆಯ ಪರಕೀಯ ಪ್ರಜ್ಞೆ

೬.೨. ಶಿಕ್ಷಣ ಮತ್ತು ಉದ್ಯೋಗ

೬.೩. ಸಾಂಸ್ಕೃತಿಕ ಮತ್ತು ಸಾಮಾಜಿಕ ಬದಲಾವಣೆ

೬.೪. ಬುಡಕಟ್ಟುಗಳ ಮುಂದಿರುವ ಸಮಸ್ಯೆ ಸವಾಲುಗಳು

೬.೫. ಸಂಘಟನೆಗಳು

ಬುಡಕಟ್ಟು ಸಮುದಾಯಗಳು ದಿನೇ ದಿನೇ ಸಂದಿಗ್ಧ ಪರಿಸ್ಥಿತಿಯತ್ತ ಮುಖಮಾಡಿವೆ. ಆಧುನೀಕರಣಕ್ಕೆ ಒಳಗಾಗಿ ತಮ್ಮ ಸಾಂಸ್ಕೃತಿಕ ಪ್ರತ್ಯೇಕತೆಯನ್ನು ಉಳಿಸಿಕೊಳ್ಳಲು ಹೆಣಗಾಡುತ್ತಿರುವುದು ಮತ್ತು ತಾವು ಇದುವರೆಗೂ ನಡೆದುಕೊಂಡು ಬಂದಂಥ ಆಚಾರ-ವಿಚಾರ, ಪದ್ಧತಿ ನಂಬಿಕೆಗಳನ್ನು ದೂರಿಕರಿಸುವುದು. ಈ ಎರಡು ಪ್ರಮುಖ ಕಾರಣಗಳು ರಾಜ್ಯದ ಒಟ್ಟು ಸಮುದಾಯಗಳ ಮುಂದಿರುವ ಸಂದಿಗ್ಧತೆಗಳು, ಇದಕ್ಕೆ ದಕ್ಷಿಣ ಕನ್ನಡ ಜಿಲ್ಲೆಯ ಮರಾಟಿಗರೂ ಹೊರತಾಗಿಲ್ಲ. ಮೂಲತಃ ಬುಡಕಟ್ಟಿನ ಸಮುದಾಯದ ಇವರು ಕ್ರಮೇಣ ಆಧುನಿಕ ಬದುಕಿಗೆ ಸ್ಥಿತ್ಯಂತರಗೊಳ್ಳುತ್ತಿರುವುದು ಅಧ್ಯಯನದಿಂದ ತಿಳಿದುಬರುತ್ತದೆ. ಸಹಜ ಪರಿವರ್ತನೆಯ ಹಾದಿಯಲ್ಲಿ ತಮ್ಮ ಹಿಂದಿನ ಮತ್ತು ಮುಂದಿನ ಹಾದಿಯನ್ನು ಹಾಗೂ ಮುಂದಿನ ಭವಿಷ್ಯದ ಬಗ್ಗೆ ಮರಾಟಿಗರೆಲ್ಲರೂ ಅರಿತುಕೊಳ್ಳ ಬೇಕಿದೆ. ಆ ಮೂಲಕ ಸಮಾಜದಲ್ಲಿ ತಮ್ಮ ಇರುವಿಕೆಯನ್ನು ಅಸ್ತಿತ್ವವನ್ನು ದೃಢಪಡಿಸಬೇಕಿದೆ. ಕಾಡನ್ನು ತಮ್ಮ ಬದುಕಿನ ಮೂಲ ನೆಲೆಯಾಗಿಸಿಕೊಂಡು ಬಂದ ಮರಾಟಿಗರಲ್ಲಿ ಇಂದು ಅನೇಕ ಗುರುತರವಾದ ಬದಲಾವಣೆಗಳನ್ನು ಕಾಣಬಹುದು. ಸಾಮಾಜಿಕ, ಆರ್ಥಿಕ, ಧಾರ್ಮಿಕ, ಹೀಗೆ ಎಲ್ಲಾ ರೀತಿಯಲ್ಲಿ ತಮ್ಮನ್ನು ಹೊರ ಜಗತ್ತಿಗೆ ತೆರೆದು ಕೊಳ್ಳುವ ತವಕದಲ್ಲಿರುವಂತೆ ಕಂಡುಬರುತ್ತಿಲ್ಲ. ಸಾಮಾಜಿಕವಾಗಿದ್ದ ಬಾಲ್ಯವಿವಾಹದಂತಹ ಪಿಡುಗುಗಳು ಮರಾಟಿಗರಲ್ಲಿ ಇಂದು ಕಂಡುಬರಲು ಸಾಧ್ಯವಿಲ್ಲ. ಧಾರ್ಮಿಕ ಆಚರಣೆಗಳಲ್ಲಿ ಪ್ರಮುಖವಾದ ಗೋಂದೋಳು ಪೂಜೆ, ಭೈರವ ಪೂಜೆಗಳಲ್ಲಿ ಇತರ ಸಮುದಾಯದ ಮೇಲೆ ಪ್ರಭಾವ ಬೀರಿರುವುದು ಉಲ್ಲೇಖನಿಯ. ಶಿಕ್ಷಣದಲ್ಲಿ ಮುಂದುವರಿಯುತ್ತಾ ಉದ್ಯೋಗಳನ್ನು ಅರಸುತ್ತಾ ಹೊಗುತ್ತಿದ್ದಾರೆ.

ಜೀವನಕ್ಕೆ ಆಧಾರವಾಗಿದ್ದ 'ಕುಮೇರಿ' ಕೃಷಿಯನ್ನು ಬಹುತೇಕ ಎಲ್ಲಾ ಮರಾಟಿಗರು ಬಿಟ್ಟು ಬಿಟ್ಟಿದ್ದಾರೆ. ಆ ಮೂಲಕ ಕಾಲದ ಕರೆಯಂತೆ ಇತರ ಕಸುಬು-ವ್ಯವಹಾರ-ಉದ್ಯೊಗಗಳತ್ತ ಮುಖ ಮಾಡಿರುವುದನ್ನು ಕಾಣಬಹುದು.

ಬುಡಕಟ್ಟು ಜನತೆ ಮತ್ತು ಸಮಾಜ ಕುರಿತಂತೆ ಸಿದ್ಧರೂಪದ ಅಭಿಪ್ರಾಯಗಳೆನಿದ್ದವು ಅದೆಲ್ಲಾ ಇಂದು ಬೆಲೆ ಕಳೆದುಕೊಳ್ಳುತ್ತದೆ. ಇಂದು ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ಧಾರ್ಮಿಕವಾಗಿ ಸ್ಥಿತ್ಯಂತರಗಳು ನಡೆದರೂ ಇಂದಿನ ಸಮಾಜದ ಇನ್ನೊಂದು ನೆಲೆಯಲ್ಲಿ ಇನ್ನೂ ಶೋಷಣೆಗೆ ಒಳಪಡುತ್ತಿದ್ದಾರೆ. ಅಂಕಿ ಅಂಶಗಳ ಪ್ರಕಾರ

ಬುಡಕಟ್ಟುಗಳು ಬಹುತೇಕ ಜನ ಆರ್ಥಿಕವಾಗಿ ಹಿಂದುಳಿದವರಾಗಿದ್ದಾರೆ. ಒಂದು ಕಾಲದಲ್ಲಿ ಅವರಿಗೆ ಮನೆಯಂತಿದ್ದ ಅರಣ್ಯ ಮತ್ತು ಅರಣ್ಯವಾಸ ಕೇವಲ ನೆನಪುಗಳಷ್ಟೆ. ದಕ್ಷಿಣ ಕನ್ನಡ ಜಿಲ್ಲೆಯ ಮರಾಟಿಗರ ಸ್ಥಿತ್ಯಂತರಗಳತ್ತ ನೋಟ ಹರಿಸಿದಾಗ, ಅನೇಕ ಬದಲಾವಣೆಗಳು, ಸಮಸ್ಯೆಗಳು, ಸವಾಲುಗಳು ಕಂಡುಬರುತ್ತವೆ.

**ಕೀಳರಿಮೆಯ ಪರಕೀಯ ಪ್ರಜ್ಞೆ**

ಬುಡಕಟ್ಟುಗಳಲ್ಲಿ ಎಲ್ಲರ ಕಣ್ಣಿಗೂ ಮೊದಲು ಕಾಣಿಸುವ ಮುಖ್ಯಸಂಗತಿ ಎಂದರೆ ಸರಳತೆ. ಇವರ ಸರಳ ಬದುಕು ಪ್ರಕೃತಿಗೆ ತುಂಬಾ ಹತ್ತಿರವಾದುದು. ಸಾಮಾನ್ಯವಾದ ಉಡುಗೆ-ತೊಡುಗೆಯಲ್ಲಿಯೇ ಇರುತ್ತಾರೆ. ಇದನ್ನು ಇತರೆ ಸಮುದಾಯಗಳು ಅನುಮಾನಸ್ಪದವಾಗಿ ಅಥವಾ ಕೀಳಾಗಿ ಕಾಣುತ್ತಲೆ ಬಂದಿದ್ದಾರೆ. ಇಂದಿಗೂ ಬುಡಕಟ್ಟು ಜನರು ಎಂದಾಗ ಒಂದು ರೀತಿಯ ತಾತ್ಸಾರ ಮನೋಭಾವನೆಯನ್ನು ವ್ಯಕ್ತಪಡಿಸುತ್ತಾರೆ. ನೇರ ನಡೆ ನುಡಿಯ ಬಿಚ್ಚುಮನಸ್ಸಿನ, ಸತ್ಯಕ್ಕೆ ಹತ್ತಿರವಿರುವ ಬದುಕೇ ಬುಡಕಟ್ಟು ಜನರನ್ನು ಇತರರಿಂದ ದೂರವಾಗಿಸಿದೆ. ಜೊತೆಗೆ ಸ್ಪೃಶ್ಯ, ಅಸ್ಪೃಶ್ಯವೆಂಬ ಪಿಡುಗು ಇವರನ್ನು ಸಮಸ್ಯೆಗಳ ಸರಮಾಲೆಗೆ ಸೇರಿಸುತ್ತದೆ. ಹಾಗಾಗಿ ಕೀಳರಿಮೆ, ಮತ್ತು ಪರಕೀಯತೆ ಬುಡಕಟ್ಟು ಜನರ ಒಂದು ಮಹತ್ವದ ಸಮಸ್ಯೆಯಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯನ್ನು ಗಮನಿಸಿದಾಗ ಬುಡಕಟ್ಟುಗಳ ಪಟ್ಟಿಯಲ್ಲಿರುವ ಕೊರಗ, ಮಲೆಕುಡಿಯ, ಮತ್ತು ಮರಾಟಿ ಸಮುದಾಯಗಳು ಕೀಳರಿಮೆ, ಪರಕೀಯತೆಯಿಂದ ಹೊರತಾಗಿಲ್ಲ. ಈ ಎಲ್ಲಾ ಸಮುದಾಯಗಳು ಬಡತನದಲ್ಲಿದ್ದು ತಮ್ಮಲ್ಲಿಯೇ ತಾವು 'ಕೀಳು ಸಂಸ್ಕೃತಿಯವರು' 'ಅನಾಗರಿಕರು' ಎಂಬ ಪರಕೀಯ ಪ್ರಜ್ಞೆ ಇಂದಿಗೂ ಇರುವುದು ಕಂಡುಬರುತ್ತದೆ. ಹಿರಿಯ-ಕಿರಿಯರೆಲ್ಲರನ್ನು ಏಕವಚನದಲ್ಲಿ ಸಂಭೋದಿಸುತ್ತಾರೆ. ಜಿಲ್ಲೆಯಲ್ಲಿ ಕೊರಗ -ಮಲೆಕುಡಿಯರನ್ನು ಇಂದಿಗೂ ಮನೆಯೊಳಗೆ ಸೇರಿಸುವದಿಲ್ಲ. ಇಪ್ಪತ್ತೊಂದನೆ ಶತಮಾನದಲ್ಲಿ ಹೀಗಿದೆ ಸ್ಥಿತಿ ಜನಸಾಮಾನ್ಯನಾದರೆ ಒಳಗೆ ಸೇರಿಸದೆ ಇತರೆ ಸಮುದಾಯದವರು ಅದುವೆ ಕೊರಗ, ಬೈರ, ಮಲೆಕುಡಿಯ, ಹೊಲೆಯರಲ್ಲಿನ ಉನ್ನತ ಹುದ್ದೆಯಲ್ಲಿರುವ ಅಧಿಕಾರಿ, ಶಾಸಕನಾಗಿದ್ದರೆ ಎರಡು ಮಾತಿಲ್ಲದೇ ಮನೆಯೊಳಗೆ ಕರೆದು ಉಪಚರಿಸುತ್ತಾರೆ. ಆಗ ಇವರು ನಂಬುವ ಭೂತ, ಜೋತಿಷ್ಯ, ದೇವರು ಅಡ್ಡಬರುವದಿಲ್ಲ. ಮೈಲಿಗೆಯ ಪ್ರಶ್ನೆ ಬರುವದಿಲ್ಲ.

ಸದಾ ಪರಿವರ್ತನೆಯತ್ತ ಮುಖ ಮಾಡಿರುವ ಮರಾಟಿ ಬುಡಕಟ್ಟು ಏಳು-ಬೀಳುಗಳ ಜೊತೆ ತಮ್ಮ ಅಸ್ತಿತ್ವದ ಬಗೆಗೆ ಹೋರಾಡುತ್ತಲೇ ಬಂದಿದೆ. ಜಿಲ್ಲೆಯ ಬುಡಕಟ್ಟುಗಳಲ್ಲಿ ಇತರ ಬುಡಕಟ್ಟುಗಳಿಂದ ಒಂದು ಹೆಜ್ಜೆ ಮುಂದೆ ಈ ಬುಡಕಟ್ಟಿದೆ. ಅಸ್ಮಿತೆಯನ್ನು ಒಂದುಕಡೆ ಉಳಿಸಿಕೊಂಡು ಬರುತ್ತಾ ಇನ್ನೊಂದೆಡೆ ಅಭಿವೃದ್ಧಿಯತ್ತ ಸಾಗುತ್ತಿದೆ. ಶೈಕ್ಷಣಿಕವಾಗಿ, ಔದ್ಯೋಗಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಸಮಾಜದಲ್ಲಿ ತನ್ನ ಛಾಪು ಮೂಡಿಸಲು ಪ್ರಯತ್ನಿಸುತ್ತಿದೆ.

**ಶಿಕ್ಷಣ ಮತ್ತು ಉದ್ಯೋಗ**

ಶಿಕ್ಷಣ ಕ್ಷೇತ್ರದಲ್ಲಿ ಮರಾಟಿಗರು ಪರಿವರ್ತನೆಯ ಹಾದಿಯನ್ನು ತುಳಿಯುತ್ತಿದ್ದಾರು. ವಲಸೆ ಬಂದ ಸಂದರ್ಭದಲ್ಲಿ ಕೆಲವೇ ಮಂದಿ ಶಿಕ್ಷಣವನ್ನು ಪಡೆದಿದ್ದರು, ಆ ನಂತರದ ಸಂದರ್ಭದಲ್ಲಿ ತಮ್ಮ ಜೀವನೋಪಾಯದ ಸಲುವಾಗಿ ಶಿಕ್ಷಣವನ್ನು ಪಡೆಯಲಿಲ್ಲ ಎಂದು ಬಹುತೇಕ ವಕ್ತೃಗಳು ಕಾರಣ ಕೊಡುತ್ತಾರೆ. ತಮ್ಮ ನೆಲೆಯನ್ನು ಭದ್ರಪಡಿಸುವುದು ಮತ್ತು ಆಹಾರ ಸಂಗ್ರಹಿಸುವುದು ಈ ಎರಡು ಮಹತ್ವದ ಕಾರಣಗಳಿಂದಾಗಿ ಶಿಕ್ಷಣ ಪಡೆಯಲು ಹಿಂಜರಿಕೆಯಾಗಿರುವುದನ್ನು ಒಪ್ಪಿಕೊಳ್ಳುತ್ತಾರೆ. ಶಿಕ್ಷಣದಿಂದ ಏನೂ ಸಾಧಿಸಲು ಸಾಧ್ಯವಿಲ್ಲ ಎಂದೂ, ದುಡಿಮೆಯಿಂದ ಹೊಟ್ಟೆ ತುಂಬಿದರೆ ಸಾಕೆನ್ನುವ ಸೀಮಿತ ಉದ್ದೇಶಗಳು ಇವರಲ್ಲಿತ್ತು. ಕ್ರಮೇಣ ಅನೇಕರು. ಸಹಜ ಪಾರಂಪರಿಕ ಕೃಷಿ ಪದ್ಧತಿ 'ಕುಮೇರಿ ಕೃಷಿ'ಗೆ ವಿಮುಖರಾದಾಗ ಅನೇಕ ರೀತಿಯಲ್ಲಿ ಕಷ್ಟಕಾರ್ಪಣ್ಯಗಳನ್ನು ಎದುರಿಸಬೇಕಾಯಿತು. ಮುಖ್ಯವಾಗಿ ಅಕ್ಷರ ಜ್ಞಾನ ಇಲ್ಲದಿರುವುದು. ಮತ್ತು ವ್ಯವಹಾರಿಕ ಜ್ಞಾನದ ಕೊರತೆಯಿಂದ ಕಾನೂನು, ಕೋರ್ಟುಗಳಲ್ಲಿ ತಮಗೆ ಸೋಲಾಗಿರುವುದನ್ನು ಮನಗಂಡು ಶಿಕ್ಷಣಕ್ಕೆ ಒತ್ತು ಕೊಡಲು ಪ್ರಾರಂಭಿಸಿದರು. ೧೯ನೇ ಶತಮಾನದವರೆಗೂ ತಮ್ಮ ಭೂಮಿಯಲ್ಲಿ ಕೃಷಿ ಮಾಡಿಡಿದರೆ ಮಾತ್ರ ತಮ್ಮ ಜೀವನ ಸಾಗುವುದು, ಎಂಬ ಸೀಮಿತ ಮನೋಭಾವನೆಯನ್ನು ಹೊಂದಿದ್ದ ಮರಾಟಿಗರು ಇತರ ಸಮುದಾಯಗಳತ್ತ ಶಿಕ್ಷಣದ ಬಗೆ ಅರಿತುಕೊಂಡು ತಮ್ಮ ಮಕ್ಕಳನ್ನು ಶಿಕ್ಷಣ ಕ್ಷೇತ್ರದಲ್ಲಿ ಮುಂದೆ ಬರುವಂತೆ ಪ್ರೇರೇಪಿಸಿದರು.

ಸ್ವಾತಂತ್ರ್ಯಾನಂತರ ಒಟ್ಟು ತುಳುನಾಡಿನಲ್ಲಿ ಅನೇಕ ಮರಾಟಿ ಸಂಘಗಳು ತಲೆಯೆತ್ತಿದವು. ಗಡಿಪ್ರದೇಶ ಪೆರ್ಲದಲ್ಲಿ 'ಶಾರದಾ ಮರಾಠಿ ಹಾಸ್ಟೇಲು' ಹಲವು ಮಹನೀಯರ ಶ್ರಮದಿಂದ ಪ್ರಾರಂಭಿಸಲ್ಪಟ್ಟಿತು. ಪಡ್ರೆ ಗ್ರಾಮದ ಮುದಳೆಗುಂಡಿ ಬಿ. ಗೋವಿಂದ ನಾಯ್ಕ ಈ ಹಾಸ್ಟೇಲಿನ ಮೇಲ್ವಿಚಾರಕರಾಗಿದ್ದರು.

೧೯೮೧ರ ಜನಗಣತಿ ಪ್ರಕಾರ ಮರಾಟಿಗರ ಅನಕ್ಷರಸ್ಥರ ಪ್ರಮಾಣ ಶೇ ೩೫.೩೫ ಇತ್ತು (ಶೇ ೪೫.೧೩ ಗಂಡಸರು ಮತ್ತು ೨೫.೫೩ ಹೆಂಗಸರು). ಇತ್ತೀಚಿನ ದಿನಗಳಲ್ಲಿ ಮರಾಟಿಗರೆಲ್ಲರೂ ಶಿಕ್ಷಣಕ್ಕೆ ಹೆಚ್ಚಿನ ಪ್ರಾಧಾನ್ಯತೆ ಕೊಡುತ್ತಿರುವುದು ಸಂತೋಷದ ಸಂಗತಿಯಾಗಿದೆ. ಬೆರಳೆಣಿಕೆಯಲ್ಲಿ ಐ.ಎ.ಎಸ್, ಐ.ಪಿ.ಎಸ್, ಐ.ಎಫ್.ಎಸ್ ನಂತಹ ದೇಶದ ಆಡಳಿತ ಸೇವೆಯ ಹುದ್ದೆಯಲ್ಲಿ ಈ ಸಮುದಾಯದವರಿದ್ದಾರೆ. ಹೆಚ್ಚಿನವರು ಪದವಿಪೂರ್ವ ಮತ್ತು ಪದವಿ ಶಿಕ್ಷಣವನ್ನು ಮುಗಿಸಿ ಬ್ಯಾಂಕ್, ರೈಲ್ವೆ, ಕೈಗಾರಿಕೆ ಇತ್ಯಾದಿ ಕ್ಷೇತ್ರಗಳಲ್ಲಿ ಸೇವೆಸಲ್ಲಿಸುತ್ತಿದ್ದಾರೆ. ಶಿಕ್ಷಣ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಾ ಅಪೂರ್ವ ಸಾಧನೆಯನ್ನು ಮಾಡಿದವರಿದ್ದಾರೆ. ಪುತ್ತೂರಿನ ಶ್ರೀ ಬಿ. ಐತಪ್ಪ ನಾಯ್ಕರು ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದು ರಾಷ್ಟ್ರ ಪ್ರಶಸ್ತಿ ಪುರಸ್ಕೃತರಾಗಿದ್ದಾರೆ.

ಜಿಲ್ಲೆಯಲ್ಲಿ ಪ್ರತಿಭಾನ್ವಿತ ಮರಾಟಿ ಮಕ್ಕಳಿದ್ದಾರೆ. ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ವೃತ್ತಿಪರ ಶಿಕ್ಷಣಕ್ಕೆ ಬೇಕಾಗುವ ಲಕ್ಷ, ಲಕ್ಷ ರೂಗಳನ್ನು ಕೊಟ್ಟು ಶಿಕ್ಷಣ ಪಡೆಯಲು ಆರ್ಥಿಕವಾಗಿ ಅಶಕ್ತರಾಗಿದ್ದಾರೆ. ಮೀಸಲಾತಿ ಇದ್ದರೂ ಯಾವುದೇ ರೀತಿಯಲ್ಲಿ ಪ್ರಯೋಜನಕ್ಕೆ ಬರುತ್ತಿಲ್ಲ. ಈ ಸಮುದಾಯದಲ್ಲಿ ಮುಂದುವರೆದ, ಶ್ರೀಮಂತರೆನಿಸಿಕೊಂಡವರು ಆ ಬಗೆಗೆ ಚಿಂತಿಸದೇ ಇರುವುದು ದೊಡ್ಡ ದುರಂತವಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಬಹುತೇಕ ವಕ್ತೃಗಳು ಈ ಮಾತಿಗೆ ದನಿಗೂಡಿಸುತ್ತಾರೆ. ''ನಾಯಿಗ್ ನಾಯಿ ಪಗೆ, ಜಾತಿಗ್ ಜಾತಿ

ಪಗೆ'' ಎಂಬ ನಾಣ್ನುಡಿಯನ್ನು ಹೇಳುತ್ತಾರೆ. ಯಾವತ್ತು ನಾಯಿಗೆ ನಾಯಿ ವೈರಿಯಾದಂತೆ ಜಾತಿಗೆ ಜಾತಿ ವೈರಿಯಾಗಿರುತ್ತದೆ. ಹಾಗೆಯೇ ಶ್ರೀಮಂತರೆನಿಸಿದವರು ಇತರ ಬಡವರ ಬಗ್ಗೆ ಚಿಂತಿಸುವುದಿಲ್ಲ ಎಂಬುದು ಇದರ ತಾತ್ಪರ್ಯ. ಶಿಕ್ಷಣದಲ್ಲಿ ಮುಂದುವರೆಯಲು ಇನ್ನೊಂದು ಸಮಸ್ಯೆ ಎದುರಾಗುವುದು ದುಷ್ಚಟ. ಇಂದಿನ ಯುವಕರು ದೂಮಪಾನ ಮದ್ಯಪಾನಗಳ ಚಟಕ್ಕೆ ಬಲಿಯಾಗಿ ವಿದ್ಯಾಭ್ಯಾಸದಲ್ಲಿ ಮುಂದುವರಿಯದೇ ಇರುವುದನ್ನೂ ಕಾಣಬಹುದಾಗಿದೆ. ಇಂತಹ ಯುವ ಜನಾಂಗಕ್ಕೆ ಹಿತವಚನ ನೀಡಿ ಸರಿದಾರಿಗೆ ತರುವಲ್ಲಿ ಸಮುದಾಯದ ಮಹನೀಯರು ಗಮನಹರಿಸಬೇಕಾಗಿದೆ.

**ಕೃಷಿ ಮತ್ತು ಆರ್ಥಿಕತೆ**

ಜಿಲ್ಲೆಯಲ್ಲಿ ಬಹು ಸಂಖ್ಯಾತ ಮರಾಟಿಗರು ಕೃಷಿಕರು ಅಥವಾ ಕೂಲಿಕಾರರು. ಮೂಲದಲ್ಲಿ ಸಾಂಪ್ರದಾಯಿಕ ಕೃಷಿ (ಕುಮೇರಿ ಕೃಷಿ ) ಯನ್ನೇ ನಂಬಿಕೊಂಡು ಬಂದ ಮರಾಟಿಗರು ಇತ್ತೀಚಿನ ದಿನಗಳಲ್ಲಿ ಇತರೆ ವಿವಿಧ ಬೆಳೆಗಳನ್ನು ಬೆಳೆಯುವ ಗಟ್ಟಿ ಮನಸ್ಸು ಮಾಡುತ್ತಿದ್ದಾರೆ. ಬಹುತೇಕ ಕುಟುಂಬಗಳು ಮಧ್ಯಮ ವರ್ಗದವರು ಮತ್ತು ಹಿಂದುಳಿದವರು. ಕೆಲವೇ ಕೆಲವು ಎಕರೆ ಭೂಮಿಯಲ್ಲಿ ತಮ್ಮ ಬದುಕು-ಸಂಸಾರವನ್ನು ಕಟ್ಟಿಕೊಳ್ಳುವಲ್ಲಿ ಸಂತೃಪ್ತರು. ಸ್ವಾತಂತ್ರ್ಯಾನಂತರದಲ್ಲಿ ಸರಕಾರದ ಅನೇಕ ಯೋಜನೆಗಳು ಸಮರ್ಪಕ ರೀತಿಯಲ್ಲಿ ಬುಟಕಟ್ಟು ಜನರಿಗೆ ತಲುಪಿಲ್ಲ. ಸರಕಾರದ ಯೋಜನೆಯಿಂದ ಜಿಲ್ಲೆಯಲ್ಲಿ ಅನೇಕ ಮರಾಟಿ ಕುಟುಂಬಗಳಿಗೆ 'ದರ್ಖಾಸ್ತು ಭೂಮಿ'ಯಾಗಿ ಒಂದೆರಡು ಎಕ್ರೆ ಜಮೀನು ದೋರಕುವಂತಾಯಿತು. ಆ ಭೂಮಸೂದೆ ಕಾಯಿದೆಯಿಂದಲೂ ಜಮೀನು ದೊರಕಿತು. ಇತ್ತೀಚೆಗೆ ರಾಜ್ಯ ಸರಕಾರವು ಅಕ್ರಮ ಜಮೀನನ್ನು ಸಕ್ರಮಗೊಳಿಸುವಲ್ಲಿ ಮುತುವರ್ಜಿವಹಿಸಿರುವುದರಿಂದ ಕಾಡಿನ ಅಂಚಿನಲ್ಲಿದ್ದವರಿಗೆ ನೆಲೆ ದೊರಕಿದಂತಾಯಿತು. ಈ ಎಲ್ಲಾ ಕಾರಣ, ಸ್ಥಿತ್ಯಂತರಗಳಿಂದ ಮರಾಟಿಗರ ವರಮಾನದಲ್ಲಿ ಹೆಚ್ಚಳವುಂಟಾಯಿತು. ಆರ್ಥಿಕವಾಗಿ ಕುಗ್ಗಿ ಹೋಗಿದ್ದವನಿಗೆ ಜೀವನಕ್ಕೆ ಒಂದು ದಾರಿ ತೋರಿಸಿದಂತಾಯಿತು. ಜಿಲ್ಲೆಯ ಬಹುತೇಕ ಮರಾಟಿಗರು ಅಡಿಕೆ ಬೆಳೆಗಾರರು ಅಥವಾ ಅಡಿಕೆ ತೋಟಗಳಲ್ಲಿ ಕೂಲಿಕಾರರು. ಇತ್ತೀಚೆಗೆ ಅಡಿಕೆ ಬೆಳೆ ಕುಸಿತ ಕಂಡಾಗ ತಡವಾಗಿ ಎಚ್ಚೆತ್ತುಕೊಂಡು ವೆನಿಲ್ಲಾ ಬೆಳೆಯನ್ನು ಬೆಳೆದರೆ ಆ ಸಮಯಕ್ಕಾಗಲೇ ವೆನಿಲ್ಲಾ ಬೆಲೆ ನೆಲ ಕಚ್ಚಿತ್ತು. ಹಾಗಾಗಿ ವಿವೇಚನಾ ರಹಿತ ಕೃಷಿ ಅಥವಾ ದೂರದೃಷ್ಟಿಯಿಲ್ಲದ ಕೃಷಿ ಪದ್ಧತಿಯಿಂದ ಅನೇಕ ಕೃಷಿಯಲ್ಲಿ ಸೋಲು ಕಾಣುತ್ತಿದ್ದಾರೆ. ಇಂದಿಗೂ ಬಹುತೇಕ ಮರಾಟಿಗರು ಸಹಜ ಕೃಷಿ ಅಥವಾ ಸಾಂಪ್ರದಾಯಿಕ ಕೃಷಿಯನ್ನೇ ಮಾಡುತ್ತಿದ್ದಾರೆ. ಕೃಷಿಯಲ್ಲಿ ಪರಿವರ್ತನೆಯೆಂದರೆ, ಆರಂಭದಲ್ಲಿದ್ದ ಹೊಲ-ಗದ್ದೆಗಳು ಇಂದು ಕಾಣುತ್ತಿಲ್ಲ. ಅವೆಲ್ಲ ಅಡಿಕೆ ಬೆಳೆಗಾಗಿ ಹೋಗಿವೆ. ಕಾರಣ ಅಡಿಕೆ ಬೆಲೆ ಏರುತ್ತಿರುವುದು. ಇಲ್ಲಿ ದುರಂತವೆಂದರೆ ಹೊಲ-ಗದ್ದೆಗಳಲ್ಲಿ ಕೃಷಿ ಮಾಡುವ ಸಂದರ್ಭದಲ್ಲಿ ತಿನ್ನಲು-ಉಣ್ಣಲು ಧಾರಾಳವಾಗಿ ಆಹಾರ ದೊರೆಯುತ್ತಿದ್ದರೆ, ವಾಣಿಜ್ಯ ಬೆಳೆ ಅಡಿಕೆ ಕೃಷಿಯಲ್ಲಿ ಆಹಾರ ಇಲ್ಲದಂತಾಯಿತು. ದುಬಾರಿ ಬೆಲೆಗೆ ಅಕ್ಕಿ, ಭತ್ತ ತರುವಂಥ ಪರಿಸ್ಥಿತಿ ಬಂದೊದಗಿದುದು ಒಂದು ದುರಂತ. ಇದು ಜಿಲ್ಲೆಯ ಎಲ್ಲಾ ಸಮುದಾಯದವರಿಗಾದ ಕಹಿ ಅನುಭವ. ನೀರಿನಾಶ್ರಯವಿಲ್ಲದ ಜಮೀನುಗಳಲ್ಲಿ ಗೇರು ಮರಗಳನ್ನು ನೆಟ್ಟು ಫಸಲು ಪಡೆದರು. ಇತ್ತೀಚೆಗೆ ವಾಣಿಜ್ಯ ಬೆಳೆಯಾದ 'ರಬ್ಬರ್'ಗೆ ಮಾರುಹೋಗಿದ್ದಾರೆ. ಹಾಗೆಯೆ ಶುಂಠಿ ಬೆಳೆಯನ್ನು ಮಾಡುತ್ತಿದ್ದಾರೆ.

ಜಿಲ್ಲೆಯ ಗ್ರಾಮೀಣ ಪ್ರದೇಶಗಳಲ್ಲಿ ಮರಾಟಿಗರಿಗೆ ಆರ್ಥಿಕತೆಯ ಮೂಲಗಳೆಂದರೆ ಅಡಿಕೆ ಬೆಳೆ, ಭತ್ತ, ಕಾಳುಮೆಣಸು, ಬಾಳೆ, ಕೊಕ್ಕೊ, ಇತ್ಯಾದಿ. ಇದು ಮಧ್ಯಮ ವರ್ಗದ ಕುಟುಂಬದದ್ದಾದರೆ, ಇತರರು ಪ್ರತಿದಿನ ಅಡಿಕೆ ತೋಟ, ಹೊಲ-ಗದ್ದೆ, ಮರದ ಕೆಲಸ, ಕಟ್ಟಡ ಕೆಲಸ ಹೀಗಿ ಎಲ್ಲಾ ರೀತಿಯ ಕೆಲಸಗಳಲ್ಲಿ ಕೂಲಿಕಾರರಾಗಿ ದುಡಿಯುತ್ತಿದ್ದಾರೆ. ಬಹುತೇಕ ಮರಾಟಿ ಮಹಿಳೆಯರು ಬೀಡಿ ಕಟ್ಟುವ ಗೃಹಕೈಗಾರಿಕೆ ಯಲ್ಲಿರುವುದು ಗಮನಿಸಬೇಕಾದ ಸಂಗತಿಯಾಗಿದೆ. ಜಿಲ್ಲೆಯಲ್ಲಿ ಲಕ್ಷಾಂತರ ಬೀಡಿ ಕಾರ್ಮಿಕರು ತಮ್ಮ ಮನೆ ಕೆಲಸದ ಜೊತೆಗೆ ಬೀಡಿ ಕಟ್ಟಿ ಸಂಸಾರ ಮಾಡುತ್ತಿದ್ದಾರೆ. ಬೆಳಗಿನಿಂದ ರಾತ್ರಿ ೧೨ ಗಂಟೆಯ ತನಕ ದೀಪಗಳನ್ನಿರಿಸಿಕೊಂಡು ಬೀಡಿ ಕಟ್ಟುವ ಕಾಯಕದಲ್ಲಿ ನಿರತರಾಗಿರುವ ದೃಶ್ಯ ಜಿಲ್ಲೆಯಲ್ಲಿ ಸರ್ವೇಸಾಮಾನ್ಯ. ಇದರಿಂದ ಬಹುತೇಕ ಮಹಿಳೆಯರು ತುಂಬಾಕಿನ ವಾಸನೆ ಸೇವನೆಯಿಂದ ಹೃದಯರೋಗದಂತಹ ಭೀಕರ ಕಾಯಿಲೆಗಳಿಗೆ ತುತ್ತಾಗಿದ್ದಾರೆ. ಹಸಿವು ಇಲ್ಲದಿರುವುದು, ಕೆಮ್ಮು, ಅಶಕ್ತತೆ, ಹೃದಯ ಬೇನೆಯಂತಹ ಕಾಯಿಲೆಗಳು ಬೀಡಿ ಕಟ್ಟುವ ಮಹಿಳೆಯರಿಗೆ ಎದುರಾಗುತ್ತಿವೆ. ಇನ್ನೊಂದು ಕಡೆ ಬೀಡಿಗಿರುವ ಬೆಲೆ ಮತ್ತು ಮಧ್ಯವರ್ತಿಗಳ ಹಾವಳಿಯಿಂದ ತತ್ತರಿಸುವಂತಾಗಿದೆ. ಮಳೆಗಾಲ ಪ್ರಾರಂಭವಾದರೆ ಸರಿಯಾಗಿ ಬೀಡಿ ಎಲೆಗಳು ದೊರಕದೆ ಕೆಲಸ ಸಾಗುವುದಿಲ್ಲ. ಅಂತಹ ಸಂದರ್ಭದಲ್ಲಿ ಇತರೆ ಕೆಲಸಗಳ ಮೊರೆಹೋಗಬೇಕಾಗುತ್ತದೆ. ಬೀಡಿ ಉದ್ಯಮ ನಿಂತುಹೋದರೆ ಲಕ್ಷಾಂತರ ಮಹಿಳೆಯರು ಅತಂತ್ರ ಸ್ಥಿತಿಗೊಳಗಾಗುತ್ತಾರೆ.

**ಸಾಂಸ್ಕೃತಿಕ ಮತ್ತು ಸಾಮಾಜಿಕ ಬದಲಾವಣೆಗಳು**

ಸಾಂಸ್ಕೃತಿಕ ಆಚರಣೆಗಳು ಅನೇಕ ರೀತಿಯಲ್ಲಿ ಬದಲಾವಣೆಯನ್ನು ಕಂಡಿದೆ. ಪರಂಪರಾಗತವಾಗಿ ಆಚರಿಸಿಕೊಂಡು ಬಂದಂಥ ಆಚರಣೆಗಳ ಉದ್ದೇಶ ಬದಲಾಗದಿದ್ದರೂ ಆಚರಿಸುವ ವಿಧಿ-ವಿಧಾನಗಳಲ್ಲಿ ಬಾಹ್ಯ ಪರಿವರ್ತನೆಗೆ ಒಳಗಾಗಿವೆ. ಇದಕ್ಕೆ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಯೂ ಒಂದು ಕಾರಣವಾಗಿದೆ. ಒಂದು ಕಾಲದಲ್ಲಿ ಏಳೆಂಟು ದಿನಗಳವರಿಗೆ ಆಡಂಬರದಿಂದ ಕೂಡಿದ ಮದುವೆ ಸಮಾರಂಭಗಳು ಇಂದು ಒಂದೆರಡು ದಿನಗಳಿಗೆ ಸೀಮಿತವಾಗಿವೆ. ಮದುವೆಯಲ್ಲಿ ಚಾಚೂ ತಪ್ಪದೇ ಆಚರಿಸಿಕೊಂಡು ಬರುತ್ತಿದ್ದ ಸಂಪ್ರದಾಯಗಳಿಗೆ ಇಂದು ಇತಿಶ್ರೀ ಹಾಡಲಾಗಿದೆ. ಬಹುಸಂಖ್ಯಾತ ಸಮುದಾಯಗಳ ಅನುಕರಣೆಗಳು ಯಾವುದೇ ಸಂಘರ್ಷವಿಲ್ಲದೆ ನೇರವಾಗಿ ಮರಾಟಿಗರ ಸಾಂಸ್ಕೃತಿಕ ಜಗತ್ತನ್ನು ಪ್ರವೇಶಿಸುತ್ತಿವೆ. ಮರಾಟಿ ಯುವ ಪೀಳಿಗೆ ಸರಿಯಾದ ಮಾರ್ಗದರ್ಶನದ ಕೊರತೆಯನ್ನು ಎದುರಿಸುತ್ತಿದೆ. ಗೋಂದೋಳು ಪೂಜೆ ಆಚರಣೆಗಳು ಆಡಂಬರದ ಆಚರಣೆಗೆ ಒಳಗಾಗಿವೆ. ಭೈರವ ಪೂಜೆಯಲ್ಲಿ ಕೆಲವೇ ಮಂದಿ ಭಾಗವಹಿಸಿ ಭಕ್ತಿ ಗೌರವಗಳೊಂದಿಗೆ ಆಚರಿಸುತ್ತಿದ್ದುದು ಇಂದು ಸಂಪೂರ್ಣ ಬದಲಾಗಿದೆ. ಒಂದು ಔತಣ ಕೂಟವಾಗಿ ಪರಿವರ್ತಿತವಾಗುತ್ತಿರುವುದು ಗಮನಿಸಬೇಕಾದ ವಿಷಯವಾಗಿದೆ. ಸಾಮಾಜಿಕವಾಗಿ ಬೆಳವಣಿಗೆಯೂ ಈ ರೀತಿಯ ಪರಿವರ್ತನೆಗಳಿಗೆ ಕಾರಣವಾಯಿತು. ಅವಿಭಕ್ತ ಕುಟುಂಬಗಳಿದ್ದುದು ವಿಭಕ್ತ ಕುಟುಂಬಗಳಾಗಿ ಬದಲಾವಣೆಯನ್ನು ಕಂಡು ಆರ್ಥಿಕವಾಗಿ ಅಭಿವೃದ್ಧಿ ಪಥದತ್ತ ಕೊಂಡೊಯ್ಯಿತು. ಶಿಕ್ಷಣ ದೊರೆತುದರಿಂದ ಯುವ ಪೀಳಿಗೆ ಕೆಲವೊಂದು ಮೂಢನಂಬಿಕೆ, ಸಂಪ್ರದಾಯಗಳನ್ನು ಸಾರಾಸಗಟಾಗಿ ತಿರಸ್ಕರಿಸುವ ಧೈರ್ಯ ಮಾಡಿತು ಎಂದು ಹೇಳಬೇಕು. ವಿಭಕ್ತ ಕುಟುಂಬಗಳಾಗಿ ಪ್ರತ್ಯೇಕ ಆದಾಯವನ್ನು ಗಳಿಸಿ ಆರ್ಥಿಕತೆಯ ಹೊಸ

ಮೂಲಗಳಾದವು. ಆ ಮೂಲಕ ಸರ್ಕಾರಿ ಉದ್ಯೋಗ, ಖಾಸಗಿ ಉದ್ಯೋಗ, ವ್ಯಾಪಾರ, ಗುಡಿಕೈಗಾರಿಕೆಗಳತ್ತ ಮರಾಟಿಗರ ದೃಷ್ಟಿ ಹರಿಯಿತು.

ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಪರಿವರ್ತನೆಗಳು ಮರಾಟಿಗರಿಗೆ ಸಮಾಜದಲ್ಲಿ ತಮ್ಮ ಅಸ್ತಿತ್ವವನ್ನು ಸ್ಥಾಪಿಸಲು ಅನುವು ಮಾಡಿಕೊಟ್ಟವು. ಮೂಲತಃ ಬುಡಕಟ್ಟು ಸಮುದಾಯವಾದ ಮರಾಟಿಗರಿಗೆ ಇತರ ಸಮುದಾಯಗಳೊಂದಿಗೆ ಕೊಡು-ಕೊಳ್ಳುವಿಕೆ ಸಹಜವಾಗಿ ಉಂಟಾಯಿತು. ಒಂದು ಕಾಲದಲ್ಲಿ ಮರಾಟಿಗರ ಗೋಂದೋಳು ಆಚರಣೆಯನ್ನು ದೂರದಿಂದ ಇಣುಕಿ ನೋಡಿ ಕೀಳಾಗಿ ಕಂಡ ಸಮುದಾಯಗಳು ಇಂದು ಭಾಗವಹಿಸುವುದಲ್ಲದೇ ತಮ್ಮ ಮನೆಯಲ್ಲೂ ನೆರವೇರಿಸಬೇಕೆನ್ನುವ ಅಭಿಲಾಷೆ ವ್ಯಕ್ತಪಡಿಸುತ್ತಿರುವುದು ಪರಿವರ್ತನೆಗಳಲ್ಲಿ ಒಂದು. ತುಳುವ ಸಂಸ್ಕೃತಿಯನ್ನು ಬೇಗನೆ ಮರಾಟಿಗರು ಒಪ್ಪಿಕೊಂಡರೆ, ತುಳುವರು ಮರಾಟಿಗರ ಸಂಸ್ಕೃತಿಯನ್ನು ಒಪ್ಪಿಕೊಳ್ಳಲು ನೂರಾರು ವರ್ಷಗಳೇ ಬೇಕಾಯಿತು.

ವಲಸೆಬಂದ ಆರಂಭದಲ್ಲಿ ಮರಾಟಿಗರು ಮರಾಠಿ ಭಾಷೆ (ಉಪಭಾಷೆ)ಯಲ್ಲಿಯೇ ಮಾತನಾಡುತ್ತಿದ್ದರು. ಕುಟುಂಬದಿಂದ ಹೊರಗೆ ವ್ಯವಹಾರಕ್ಕಾಗಿ ಇತರೆ ಬಹುಸಂಖ್ಯಾತ ಸಮುದಾಯಗಳು ಭಾಷೆಯನ್ನು ನೆಚ್ಚಿಕೊಳ್ಳಲೇಬೇಕಾಯಿತು. ಕಾಲ ಕ್ರಮೇಣ ಜಿಲ್ಲೆಯಲ್ಲಿ ಅನೇಕ ಕುಟುಂಬಗಳು ತಮ್ಮ ಮಾತೃಭಾಷೆಯನ್ನೇ ಮರೆಯುವಂತಾಯಿತು. ಇಂದಿನ ಯುವ ಪೀಳಿಗೆಯು ಮಾತೃ ಭಾಷೆ ತುಳು ಮತ್ತು ಕನ್ನಡ. ಮರಾಟಿ ಮನೆ ಭಾಷೆಯಾಗಿಯೂ ಉಳಿದಿಲ್ಲ ಎಂಬುದು ಅಧ್ಯಯನದ ಮೂಲಕ ತಿಳಿದುಬರುತ್ತದೆ. ಈ ರೀತಿಯ ಭಾಷಿಕ ಪರಿವರ್ತನೆಯಾಗುವುದು ಕೆಲವೇ ಕೆಲವು ಸಮುದಾಯಗಳಲ್ಲಿ.

### ರಾಜಕೀಯ ಕ್ಷೇತ್ರದಲ್ಲಿ ಮರಾಟಿಗರು

ಪ್ರಸ್ತುತ ಸಂದರ್ಭದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಯಾವ ವಿಧಾನಸಭಾ ಕ್ಷೇತ್ರ ಅಥವಾ ಸಂಸದರ ಕ್ಷೇತ್ರವಾಗಲೀ ಪರಿಶಿಷ್ಟ ವರ್ಗದವರಿಗೆ ಮೀಸಲಿಲ್ಲ. ವರ್ಷದಿಂದ ವರ್ಷಕ್ಕೆ ಮರಾಟಿಗರ ಮತ್ತು ಒಟ್ಟು ಬುಡಕಟ್ಟು ಜನಸಂಖ್ಯೆ ಜಿಲ್ಲೆಯಲ್ಲಿ ಹೆಚ್ಚಳವನ್ನು ಕಾಣುತ್ತದೆ. ಆದರೆ ಜನಸಂಖ್ಯೆ ಆಧಾರವನ್ನು ಕಡೆಗಣಿಸಲಾಗಿದೆ. ಜಿಲ್ಲೆಯ ಸುಳ್ಯ ವಿಧಾನ ಸಭಾ ಕ್ಷೇತ್ರ ಆರಂಭವಾದಾಗ ಎರಡನೇ ಸಲ ಮರಾಟಿಗರೇ ಆದ ಶ್ರೀ ಸುಬ್ಬಯ್ಯ ನಾಯ್ಕರು ಆಯ್ಕೆ ಯಾಗಿದ್ದರು. ಪರಿಶಿಷ್ಟ ಪಂಗಡಕ್ಕೆ ಮೀಸಲಿದ್ದ ಸುಳ್ಯ ಕ್ಷೇತ್ರವನ್ನು ರದ್ದು ಮಾಡಿ ಕೊಡಗು ಜಿಲ್ಲೆಯ ವಿರಾಜಪೇಟೆ ತಾಲೂಕಿಗೆ ವರ್ಗಾಯಿಸಲಾಗಿದೆ. ಸುಳ್ಯ ಕ್ಷೇತ್ರವನ್ನು ಪರಿಶಿಷ್ಟ ಜಾತಿಗೆ ಮೀಸಲಿರಿಸಲಾಯಿತು. ಈಗ ಅದನ್ನು ಕೂಡ ವರ್ಗಾವಣೆ ಮಾಡಲು ಮುಂದುವರಿದ ಸಮುದಾಯಗಳಿಂದ ತೆರೆಮರೆಯಲ್ಲಿ ಪಿತೂರಿ ನಡೆದಿದೆ. ಆ ನಿಟ್ಟಿನಲ್ಲಿ ಹೋರಾಟಕ್ಕೂ ಸಿದ್ಧ ಎಂದು ಪತ್ರಿಕಾ ಹೇಳಿಕೆ ಕೊಡಲಾಗುತ್ತಿದೆ. ಪ್ರಸ್ತುತ ಸುಳ್ಯ ವಿಧಾನ ಸಭಾ ಕ್ಷೇತ್ರದಲ್ಲಿ ಪರಿಶಿಷ್ಟ ಜಾತಿಗೆ ಮೀಸಲಿದೆ.

೨೦೦೧ರ ಜನಗಣತಿ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪರಿಶಿಷ್ಟ ವರ್ಗದ ಜನಸಂಖ್ಯೆ ಈ ಕೆಳಗಿನಂತಿದೆ.

| ಕ್ರ.ಸಂ | ತಾಲೂಕು | ಪ.ವರ್ಗಗಳ ಜನಸಂಖ್ಯೆ |
|---|---|---|
| ೦೧. | ಸುಳ್ಯ | ೧೦,೭೭೬ |
| ೦೨. | ಪುತ್ತೂರು | ೧೩,೦೫೬ |
| ೦೩. | ಬಂಟ್ವಾಳ | ೧೪,೮೪೯ |
| ೦೪. | ಬೆಳ್ತಂಗಡಿ | ೧೨,೭೧೬ |
| ೦೫. | ಮಂಗಳೂರು | ೧೧,೫೩೬ |

ಸುಳ್ಯ, ಪುತ್ತೂರು ಮತ್ತು ಬೆಳ್ತಂಗಡಿ ಒಂದೊಂದು ವಿಧಾನಸಭಾ ಕ್ಷೇತ್ರಗಳನ್ನು ಹೊಂದಿವೆ. ಬಂಟ್ವಾಳ ಎರಡು (ಬಂಟ್ವಾಳ ಮತ್ತು ವಿಟ್ಲ) ವಿಧಾನಸಭಾ ಕ್ಷೇತ್ರಗಳನ್ನು ಹೊಂದಿದ್ದರೆ ಮಂಗಳೂರು ಮೂರು (ಮಂಗಳೂರು, ಸುರತ್ಕಲ್ ಮತ್ತು ಉಳ್ಳಾಲ) ವಿಧಾನಸಭಾ ಕ್ಷೇತ್ರಗಳನ್ನು ಹೊಂದಿದೆ. ಆದರೆ ಯಾವುದೇ ಪರಿಶಿಷ್ಟ ಪಂಗಡದ ಇಷ್ಟು ಜನಸಂಖ್ಯೆಗೆ ಒಂದೇ ಒಂದು ವಿಧಾನ ಸಭಾ ಕ್ಷೇತ್ರವನ್ನು ಮೀಸಲಾಗಿರಿಸದೇ ಇರುವುದು ವಿಷಾದನೀಯವಾಗಿದೆ. ಆರಂಭದಲ್ಲಿ ಕೆಲವೇ ಕೆಲವು ಬುಡಕಟ್ಟುಗಳನ್ನು ಗುರುತಿಸಿ ಶೇ ೩ರಷ್ಟು ಮೀಸಲಾತಿಯನ್ನು ಸರಕಾರ ಒದಗಿಸಿತು. ಆದರೆ ಕಾಲಕ್ರಮೇಣ ಬುಡಕಟ್ಟುಗಳನ್ನು ಗುರುತಿಸಿ ಪ್ರಸಕ್ತ ಸರಕಾರದ ಪಟ್ಟಿಯಲ್ಲಿ ಸುಮಾರು ೫೦ ಬುಡಕಟ್ಟುಗಳಿವೆ. ಸಹಜವಾಗಿ ಜನಸಂಖ್ಯೆ ಎರಡು ಮೂರರಷ್ಟು ಹೆಚ್ಚಳ ಕಂಡಿದೆ. ಆದರೆ ಶೇಕಡವಾರು ಮೀಸಲಾತಿಯಲ್ಲಿ ಯಾವುದೇ ರೀತಿಯಲ್ಲಿ ಹೆಚ್ಚಳವಾಗಿಲ್ಲ.

ಜಿಲ್ಲೆಯಲ್ಲಿ ಇಂದು ಕೆಲವು ಜಿಲ್ಲಾ ಪಂಚಾಯತ್, ತಾಲೂಕು ಪಂಚಾಯತ್ ಮತ್ತು ಗ್ರಾಮಪಂಚಾಯತ್‌ಗಳಲ್ಲಿ ಮರಾಟಿಗರು ಸದಸ್ಯರಾಗಿರುವುದು ಬಿಟ್ಟರು ರಾಜಕೀಯದಲ್ಲಿ ಹೆಚ್ಚು ಮುಂದುವರಿದಿಲ್ಲ.

**ಬುಡಕಟ್ಟುಗಳ ಮುಂದಿರುವ ಸಮಸ್ಯೆ-ಸವಾಲುಗಳು**

ಈ ಮೊದಲೇ ಪ್ರಸ್ತಾಪಿಸಿರುವಂತೆ ಭಾರತದ, ಕರ್ನಾಟಕದ ವಿವಿಧ ಪ್ರದೇಶಗಳಲ್ಲಿರುವ ಬುಡಕಟ್ಟುಗಳು ಒಂದೇ ಅಲ್ಲ. ಅವರ ಜೀವನ ಕ್ರಮ, ಆಚಾರ-ವಿಚಾರ, ಲೋಕದೃಷ್ಟಿ ಹೀಗೆ ಒಟ್ಟು ಸಂಸ್ಕೃತಿ ಭಿನ್ನವಾಗಿವೆ. ಹಾಗಿರುವಾಗ ಎಲ್ಲಾ ಬುಡಕಟ್ಟುಗಳಿಗೆ ಒಂದೇ ಅಭಿವೃದ್ಧಿ ನೀತಿ ರೂಪಿಸಿರುವುದು ಎಷ್ಟರ ಮಟ್ಟಿಗೆ ಸರಿ? ಕರ್ನಾಟಕದ ಬುಡಕಟ್ಟುಗಳ ಅಭಿವೃದ್ಧಿಗಿರುವ ಲ್ಯಾಂಪ್ಸ್ (ಅರಣ್ಯ ಉತ್ಪನ್ನಗಳನ್ನು ಮಾರಲು ಅನುಕೂಲ ಮಾಡಿಕೊಡುವ ಸಹಕಾರಿ ಸಂಘ) ಮತ್ತು ಆಶ್ರಯ ಶಾಲೆ (ಬುಡಕಟ್ಟು ಮಕ್ಕಳಿಗೆ ಮೀಸಲಿರುವ ವಸತಿ ಶಾಲೆ) ಇತ್ಯಾದಿ ಕಾರ್ಯಕ್ರಮಗಳಿವೆ. ಅಭಿವೃದ್ಧಿಗಾಗಿ ಇರುವ ಕಾರ್ಯಗಳು ನಿಜವಾಗಿ ಬುಡಕಟ್ಟುಗಳನ್ನು ಉದ್ಧಾರ ಮಾಡಲು ಇನ್ನೂ ಸಾಧ್ಯವಾಗಿಲ್ಲ, ಬದಲಾಗಿ ಬುಡಕಟ್ಟುಗಳು ಮತ್ತು ಶೋಷಣೆಗೆ ಒಳಪಟ್ಟಿವೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮರಾಟಿ ಮತ್ತು ಮಲೆಕುಡಿಯರ ಅಭಿವೃದ್ಧಿಗಾಗಿರುವ ಲ್ಯಾಂಪ್ಸ್ ಸೊಸೈಟಿಗಳು ಎಷ್ಟರ ಮಟ್ಟಿಗೆ ಈ ಸಮುದಾಯಗಳ ಅಭಿವೃದ್ಧಿಗೆ ಸಹಕಾರಿಯಾಗಿವೆ ಎಂಬುದನ್ನು ಗಮನಿಸಬೇಕು. ಪ್ರತಿ ತಾಲೂಕುಗಳಲ್ಲಿ ಲ್ಯಾಂಪ್ಸ್ ಸೊಸೈಟಿಗಳಿವೆ.

ತಾಲೂಕುಗಳ ಪರಿಧಿಯೊಳಗಿರುವ ಅರಣ್ಯಗಳಿಂದ ಕಿರು ಉತ್ಪನ್ನಗಳನ್ನು ಟೆಂಡರ್ ಮೂಲಕ ಸಂಗ್ರಹಿಸುತ್ತದೆ. ಇಲ್ಲಿ ಹೆಸರಿಗೆ ಮಾತ್ರ ಮರಾಟಿಗಳು ಅಥವಾ ಮಲೆಕುಡಿಯರಿರುತ್ತಾರೆ. ಇತರ ಸಮುದಾಯದ ಧನಿಕರು ಲಾಭ ಪಡೆಯುತ್ತಾರೆ. ಕಷ್ಟ ಪಟ್ಟು ಸಂಗ್ರಹಿಸುವವರು ಬಡ ಮರಾಟಿ ಯುವಕರಾದರೆ ಅದರಲ್ಲಿ ಲಾಭ ಪಡೆಯುವವರು ಬುಡಕಟ್ಟೇತರರು.

ಇಂದಿನ ಪ್ರಜಾಪ್ರಭುತ್ವ ವ್ಯವಸ್ಥೆಯನ್ನೇ ನೋಡಿದರೆ ನಮಗೆ ಅರಿವಾಗುತ್ತದೆ. ಪ್ರಜೆಗಳೇ ಪ್ರಭುಗಳೆಂಬುದು ಬರೀ ಘೋಷಣೆ ಮಾತ್ರ ಎಂಬುದು ಜನಸಾಮಾನ್ಯರಿಗೂ ತಿಳಿದಿದೆ. ಭಾರತದ ಪ್ರಜಾಪ್ರಭುತ್ವ ವ್ಯವಸ್ಥೆಯಡಿಯಲ್ಲಿ 'ಸರಕಾರ' ಎಂದರೆ 'ಶಕ್ತಿ ರಾಜಕಾರಣ'ವಾಗಿದೆ. ಎಲ್ಲವೂ ಬಂಡವಾಳ ಶಾಹಿಗಳ ಹಿಡಿತದಲ್ಲಿದೆ. ಅಧಿಕಾರಸ್ಥ ಸಂಸ್ಥೆಗಳು ಎಲ್ಲಿಯವರೆಗೆ ರಾಷ್ಟ್ರದ ವರಮಾನದ ಕಡೆಗೆ ಗಮನ ಹರಿಸುತ್ತಾ, ಆರ್ಥಿಕಾಭಿವೃದ್ಧಿಯ ಹೆಸರಲ್ಲಿ ಬಂಡವಾಳಶಾಹಿಗಳಿಗೆ ಒತ್ತು ನೀಡುವರೋ ಅಲ್ಲಿಯವರೆಗೆ ಅಭಿವೃದ್ಧಿ ಸಾಧಿಸಲು ಕಷ್ಟಸಾಧ್ಯ.

ರಾಜ್ಯದಲ್ಲಿ ಅರಣ್ಯ ಅಭಿವೃದ್ಧಿಗಾಗಿ ಒಂದು ಅರಣ್ಯ ಇಲಾಖೆಯೇ ಇದೆ. ಇದ್ದ ಅರಣ್ಯವನ್ನು ಸಂರಕ್ಷಿಸುವುದು ಮತ್ತು ಕಾಡು ಇಲ್ಲದ ಪ್ರದೇಶಗಳಲ್ಲಿ ಗಿಡ ನೆಟ್ಟು ಬೆಳೆಸುವುದು ಇದರ ಪ್ರಮುಖ ಕಾರ್ಯಗಳು. ಆದರೆ ಅಭಿವೃದ್ಧಿ ಸರಕಾರಿ ಲೆಕ್ಕಾಚಾರಗಳಲ್ಲಿ ಕಡತಗಳಲ್ಲಿ ಮಾತ್ರ ಆಗಿದೆ. ದಕ್ಷಿಣ ಕನ್ನಡ ಜಿಲ್ಲೆ ಮತ್ತು ಒಟ್ಟು ಮಲೆನಾಡು, ಪಶ್ಚಿಮ ಘಟ್ಟಗಳಲ್ಲಿ ಇಂದಿಗೂ ಅವ್ಯಾಹತವಾಗಿ ಬೃಹತ್ ಮರಗಳ ಮಾರಣ ಹೋಮವೇ ನಡೆಯುತ್ತಿದೆ. ಅರಣ್ಯಾಧಿಕಾರಿಗಳೇ ಅದರ ರೂವಾರಿಗಳೆಂದು ಬೇರೆ ಹೇಳಬೇಕಾಗಿಲ್ಲ. ಹೀಗೆ ಇದ್ದ ಅರಣ್ಯ ಒಂದು ಕಡೆ ನಾಶವಾಗುತ್ತಿದ್ದರೆ, ಇನ್ನೊಂದು ಕಡೆ ಗಿಡ ನಾಟಿಮಾಡುವ ಕೆಲಸ ಅರಣ್ಯ ಇಲಾಖೆಯದು. ಕರಾವಳಿ ಪ್ರದೇಶದಲ್ಲಿ ಮತ್ತು ಪಶ್ಚಿಮ ಘಟ್ಟ ಸೂಕ್ಷ್ಮ ಪ್ರದೇಶಗಳಲ್ಲಿ ಒಂದು. ಈ ಪರಿಸರಕ್ಕೆ ಹೊಂದಾಣಿಕೆಯಾಗದಿರುವ ಗಿಡಗಳನ್ನು ನಾಟಿ ಮಾಡಲಾಗುತ್ತದೆ. ಆಕೇಶಿಯಾ, ಗಾಳಿ, ನೀಲಗಿರಿ ಯಂತಹ ತನ್ನ ಬುಡದಲ್ಲಿ ಇನ್ನಾವ ಸಸಿಗೂ ಬದುಕಲು ಬಿಡದ ಗಿಡಗಳನ್ನು ನೆಡಲಾಗುತ್ತಿದೆ. ಆ ಮೂಲಕ ಪರಿಸರ ನಾಶಕ್ಕೆ ಅರಣ್ಯ ಇಲಾಖೆಯೇ ಮುಂದೆ ಬಂದಿದೆ. ಪರಿಸರವನ್ನು ತಮ್ಮ ಬದುಕಿನ ಸಹಜ ಒಡನಾಡಿಗಳಂತೆ ಕಾಪಾಡಿಕೊಂಡು ಬಂದಂಥ ಬುಡಕಟ್ಟುಗಳಿಗೆ ಅರಣ್ಯ ಪ್ರದೇಶವನ್ನು ನಿರಾಕರಿಸಲಾಗುತ್ತದೆ. ಕಾಡನ್ನು ಅವಲಂಬಿಸಿ ಬದುಕುತ್ತಿದ್ದ ಗಿರಿಜನರು ಭೂಮಾಲೀಕರ ತೊತ್ತುಗಳಾಗಿ ಹೋದ ಅವಸ್ಥೆಯ ಹಿಂದೆಯೇ ಸ್ವತಂತ್ರ ಭಾರತ ಅವರಿಗೆ ನೀಡಿದ ಕೊಡುಗೆ ತುಂಬಾ ಮಹತ್ವದ್ದು. ಅರಣ್ಯ ಸಂರಕ್ಷಣೆಯ ಘೋಷಣೆಯೊಂದಿಗೆ ಹುಟ್ಟಿಕೊಂಡ ಅರಣ್ಯ ಇಲಾಖೆಯ ಕ್ರೂರ ದೃಷ್ಟಿಗೆ ಮೊದಲು ಬಲಿಯಾದವರು ಗಿರಿಜನರು. ಭೂಮಾಲಿಕರ ತೋಟ ತುಡಿಕೆಗಳೂ ವಿಸ್ತರಣೆಯಾಗುತ್ತಾ ಹೋದ ಹಾಗೆ ಇವರ ಗುಡಿಸಲುಗಳು ಅಥವಾ ಹಾಡಿಗಳು ಹಿಂದೆ ಸರಿಯುತ್ತಾ ಹೋಗುತ್ತಿದ್ದವು. ಭೂಮಾಲಿಕರ ತೋಟಗಳು ವಿಸ್ತರಣೆ ಆಗುವುದನ್ನು ಅಥವಾ ಹೊಸ ತೋಟಗಳ ಉದಯವನ್ನು ಅರಣ್ಯ ಇಲಾಖೆ ಸಹಿಸಿತಾದರೂ ಗಿರಿಜನರು ವಾಸದ ಹಾಡಿಗಳನ್ನು ಕಟ್ಟಿಕೊಳ್ಳುವುದನ್ನು ಸಹಿಸಲಿಲ್ಲ. ಕೆಲವು ಕಡೆಯಂತೂ ಭಾಮಾಲಿಕರ ಪರವಾಗಿಲ್ಲದ ಗಿರಿಜನರನ್ನು ಅರಣ್ಯ ಇಲಾಖೆಯ ಮೂಲಕವೇ ಒಕ್ಕಲೆಬ್ಬಿಸಲಾಯಿತು'' (ಹಿ.ಚಿ.ಬೋರಲಿಂಗಯ್ಯ, ಕಾಡು ಕಾಂಕ್ರೀಟ್ ಮತ್ತು ಜಾನಪದ, ಪು. ೨೩)

ದಕ್ಷಿಣ ಕನ್ನಡ ಜಿಲ್ಲೆಯ ಬುಡಕಟ್ಟುಗಳಲ್ಲಿ ಮರಾಟಿ ಬುಡಕಟ್ಟು ಪರಿವರ್ತನೆಯ ಹಾದಿಯಲ್ಲಿದೆ, ಎಂದೆನಿಸಿದರೂ ಗ್ರಾಮೀಣ ಪ್ರದೇಶದ ಮರಾಟಿ ಕುಟುಂಬಗಳು ಆರಕ್ಕೆ ಏರದೇ ಮೂರಕ್ಕೆ ಇಳಿಯದ ಸ್ಥಿತಿಯಲ್ಲಿವೆ. ಶಿಕ್ಷಣ ಜಾಗೃತಿ ಮೂಡಿದುದರಿಂದ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಉನ್ನತ ಶಿಕ್ಷಣವನ್ನು ಬೆರಳೆಣಿಕೆಯ ಮರಾಟಿಗರು ಪಡೆಯುತ್ತಿದ್ದಾರೆ. ಹೆಣ್ಣು ಮಕ್ಕಳು ಎಸ್.ಎಸ್.ಎಲ್.ಸಿ ಅಥವಾ ಪಿಯುಸಿ ವರೆಗೆ ಮಾತ್ರ ಶಿಕ್ಷಣವನ್ನು ಪಡೆಯುವುದು ಕಾಣಬರುತ್ತದೆ. ಪದವಿ ವ್ಯಾಸಾಂಗ ಮಾಡಿದ ಯುವಕರು ನೂರಾರು. ಆದರೆ ಉದ್ಯೋಗ ಮಾತ್ರ ಇಲ್ಲ. ಸ್ವಂತ ಉದ್ಯೋಗ ಮಾಡಲು ಬಂಡವಾಳ ಇಲ್ಲ. ''ಮೀಸಲಾತಿ ಇದೆ. ನಿಮಗೆ ಸರ್ಕಾರಿ ಉದ್ಯೋಗ ಸಿಗುತ್ತದೆ.'' ಎಂದು ಇತರೆ ಸಮುದಾಯದವರು ಹೆಜ್ಜೆ ಹೆಜ್ಜೆಗೂ ಹೇಳುವರಿದ್ದಾರೆ. ಆದರೆ ಶೇ೩ ರಷ್ಟು ಮೀಸಲಾತಿಯಿಂದ ಇಂದು ಮರಾಟಿಗರಿಗೆ ಯಾವ ಸಹಾಯವೂ ಆಗುತ್ತಿಲ್ಲ ಎನ್ನುವುದು ಕಟು ಸತ್ಯ. ಕೂಲಿಕಾರರು, ಸಣ್ಣ ಗಾತ್ರದ ಮತ್ತು ಮಧ್ಯಮವರ್ಗದ ಕೃಷಿಕರಾಗಿರುವ ಮರಾಟಿಗಳಿಗೆ ವೃತ್ತಿ ಶಿಕ್ಷಣವಂತೂ ಗಗನ ಕುಸುಮವಾಗಿದೆ. ಲಕ್ಷಾಂತರ ಸುರಿದು ಮಕ್ಕಳನ್ನು ಓದಿಸಲು ಅಸಹಾಯಕರಾಗಿದ್ದಾರೆ. ಸರಕಾರ ಮೀಸಲಾತಿ ಶೇಕಡವನ್ನು ಏರಿಸುವ ಪ್ರಾಮಾಣಿಕ ಪ್ರಯತ್ನ ಮಾಡಿದರೆ ಜಿಲ್ಲೆಯ ಬುಡಕಟ್ಟುಗಳ ಜೀವನ ಸ್ವಲ್ಪ ಮಟ್ಟಿಗೆ ಸುಧಾರಿಸಬಹುದು ಎಂಬ ಅಭಿಪ್ರಾಯ ನನ್ನದು. ಶೇ ೩ರ ಮೀಸಲಾತಿಯಲ್ಲಿ ಶಿಕ್ಷಣ, ಉದ್ಯೋಗ ಪಡೆಯುವುದು ಮರಾಟಿಗರ ಪಾಲಿಗೆ ಒಂದು ದೊಡ್ಡ ಸವಾಲೇ ಸರಿ.

ಮೊದಲಿಗೆ ಬಹುತೇಕ ಕೃಷಿಕರು ಸಾಲಗಾರರ ಪ್ರತಿವರ್ಷ ಹಳೆಸಾಲವನ್ನು ಹೊಸತು ಸಾಲವನ್ನಾಗಿ ಮಾಡುವುದರಲ್ಲಿಯೇ ತೃಪ್ತಿಪಟ್ಟುಕೊಳ್ಳುವ ಕುಟುಂಬಗಳು ಜಿಲ್ಲೆಯಲ್ಲಿ ಸಾಕಷ್ಟಿವೆ. ಕಷ್ಟಪಟ್ಟು ದುಡಿದು ಸಾಹಸದ ಜೀವನ ಮಾಡುವ ಮರಾಟಿಗರಿಗೆ ಸರಕಾರದ ಯೋಜನೆಗಳು, ಸವಲತ್ತುಗಳು ಸಮರ್ಪಕವಾಗಿ ಇನ್ನೂ ತಲುಪಿಲ್ಲ. ಲ್ಯಾಂಪ್ಸ್ ಸೊಸೈಟಿಯಿಂದ ಸಮರ್ಪಕವಾಗಿ ಪಡಿತರ ದವಸ-ಧಾನ್ಯಗಳ ವಿತರಣೆಯಾಗುತ್ತಿಲ್ಲ. ಲ್ಯಾಂಪ್ಸ್ ಸೊಸೈಟಿಯಲ್ಲಿ ಅಧ್ಯಕ್ಷರು ಮರಾಟಿ ನಾಯ್ಕರು ಅಥವಾ ಮಲೆಕುಡಿಯರು ಆಗಿದ್ದರೆ ಇಲ್ಲಿ ಕಾರ್ಯದರ್ಶಿ, ಗುಮಾಸ್ತರೆಲ್ಲಾ ಇತರೆ ಸಮುದಾಯಕ್ಕೆ ಸೇರಿದವರು. ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗಾಗಿರುವ ಸಹಕಾರಿ ಸಂಘಗಳಲ್ಲಿ ಶಿಕ್ಷಣ ಪಡೆದ ಬುಡಕಟ್ಟು ಯುವಕ-ಯುವತಿಯರನ್ನೇ ಉದ್ಯೋಗಕ್ಕೆ ನೇಮಕಮಾಡಿಕೊಳ್ಳಬೇಕು. ಈಗ ಸಂಘಗಳಲ್ಲಿರುವವರು ಅವರಿಗೆ ಇಷ್ಟ ಬಂದವರಿಗೆ ಸಾಲ ಸೌಲಭ್ಯಗಳನ್ನು ನೀಡುತ್ತಾ ಬಂದಿರುವುದನ್ನು ಕಾಣಬಹುದು. ಈ ನಿಟ್ಟಿನಲ್ಲಿ ಸರ್ಕಾರ ಗಮನಿಸಿ ಸೂಕ್ತ ಕ್ರಮ ಕೈಗೊಳ್ಳಬೇಕಾಗಿದೆ.

ಜಿಲ್ಲೆ ಬುಡಕಟ್ಟುಗಳ ಆರೋಗ್ಯದ ಸಲುವಾಗಿ ಸಂಚಾರಿ ಆರೋಗ್ಯ ಘಟಕಗಳಿವೆ. ಗ್ರಾಮೀಣ ಪ್ರದೇಶದಲ್ಲಿ ಸಂಚರಿಸಿ ಬುಡಕಟ್ಟು ಮನೆಗಳಿರುವಲ್ಲಿಗೆ ಹೋಗಿ ಪರಿಕ್ಷಿಸಿ ಔಷಧಿ ವಿತರಿಸುವುದು ಘಟಕದ ಮುಖ್ಯ ಕೆಲಸ. ಆದರೆ ಎಷ್ಟರ ಮಟ್ಟಿಗೆ ತಮ್ಮ ಕರ್ತವ್ಯವನ್ನು ಮಾಡುತ್ತಿದೆ ಎಂಬುದನ್ನು ಗಮನಿಸಬೇಕಾಗಿದೆ. ಇಂತಹ ಘಟಕ ಇದೆ ಎನ್ನುವುದು ಇತ್ತೀಚೆಗೆ (ಸುಳ್ಯ ಪರಿಸರದ ಏವರ್ನಾಡು ಗ್ರಾಮದ ನಿವಾಸಿಗಳಿಗೆ) ತಿಳಿದು ಬಂತು. ವಾಹನದಲ್ಲಿ ಬಂದು ಯಾವುದೇ ರೀತಿಯ ಪರೀಕ್ಷೆ (ಸ್ಟೆತಸ್ಕೋಪ್ ಬಳಸಿರುವುದು ಕಂಡು ಬಂದಿಲ್ಲ) ಇಲ್ಲದೆ ಕೆಲವೊಂದು ಮಾತ್ರೆಗಳನ್ನು ನೀಡಿ ಅದೃಶ್ಯರಾಗುತ್ತಾರೆ. ಇಂದಿಗೂ ನೂರಾರು ಕುಟುಂಬಗಳು ಅಪೌಷ್ಟಿಕತೆಯಿಂದ, ಅಶಕ್ತತೆಯಿಂದ

ಒಳಲುತ್ತಿದ್ದಾರೆ. ದುಡಿದ ಹಣವನ್ನು ಖಾಸಗಿ ಆಸ್ಪತ್ರೆಗಳ ಪಾಲಾದರೆ ಜೀವನ ಯಾವ ರೀತಿ ಅಭಿವೃದ್ಧಿ ಹೊಂದಬೇಕು.?

ಹೀಗೆ ಸಮಸ್ಯೆ-ಸವಾಲುಗಳು ಜಿಲ್ಲೆಯ ಮರಾಟಿಗರ ಮುಂದಿದೆ. ಮೊದಲು ಬುಡಕಟ್ಟು ಜನರೇ ಜಾಗೃತರಾಗಬೇಕು. ಸಂಘಟಿತರಾಗಬೇಕು. ಎಲ್ಲಾ ರೀತಿಯ ತಿಳುವಳಿಕೆಗಳನ್ನು ಪಡೆದರೆ ತಮ್ಮ ಅಸಹಾಯಕತೆಗಳನ್ನು ಮೆಟ್ಟಿ ನಿಲ್ಲಲ್ಲು ಸಾಧ್ಯವಾಗುತ್ತದೆ. ಅವರಿಗೆ ಮಾರ್ಗದರ್ಶನದ ಅಗತ್ಯವೂ ಇದೆ.

**ಸಂಘಟನೆಗಳು**

ವರ್ತಮಾನದಲ್ಲಿ ಅನೇಕ ಸಮುದಾಯಗಳು ತಮ್ಮ ತಮ್ಮ ಕಲ್ಯಾಣಕ್ಕಾಗಿ, ಸುಧಾರಣೆಗಾಗಿ ಸಂಘಟನೆಗಳನ್ನು ಕಟ್ಟಿಕೊಳ್ಳುತ್ತವೆ. 'ಒಗ್ಗಟ್ಟಿನಲ್ಲಿ ಬಲವಿದೆ' ಎಂಬಂತೆ ಒಗ್ಗಟ್ಟಿನಿಂದಲೇ ತಮ್ಮ ಅಭಿವೃದ್ಧಿಯತ್ತ ಹೆಜ್ಜೆ ಹಾಕಲು ಸಾಧ್ಯ ಎಂಬುದು ಪುರಾತನ ಕಾಲದಲ್ಲಿಯೇ ಮನುಷ್ಯ ವರ್ಗ ಅನುಭವದಿಂದಲೇ ತಿಳಿದಿದ್ದರು. ಸಮಾಜದ ಉನ್ನತಿಗೆ ಜನರನ್ನು ಜಾಗೃತಗೊಳಿಸಿ ಸಮಾಜದತ್ತ ದುಡಿಯುವಂತೆ ಪ್ರೇರೇಪಿಸುವ ಕಾರ್ಯ ಸಂಘಟನೆಯದದ್ದಾದರೆ ಸಮಾಜ ಅಭಿವೃದ್ಧಿಯನ್ನು ಹೊಂದುವುದು. ಮರಾಟಿಗರು ತಡವಾಗಿಯಾದರೂ ಸಂಘಟನೆಗಳನ್ನು ಹುಟ್ಟಿಹಾಕಿ ತಮ್ಮ ಸಮುದಾಯದ ಅಭಿವೃದ್ಧಿಯನ್ನು ಕಾಣುವ ತವಕದಲ್ಲಿದ್ದಾರೆ.

೧೯೩೫ ರಲ್ಲಿ ಪುತ್ತೂರಿನಲ್ಲಿ ಪ್ರಥಮವಾಗಿ ದಕ್ಷಿಣ ಕನ್ನಡ ಜಿಲ್ಲಾ ಶಾರದಾ ಮರಾಟಿ ಸಂಘ ಅಸ್ತಿತ್ವಕ್ಕೆ ಬಂದಿತು. ಪುತ್ತೂರಿನ ಕೆ. ವೆಂಕಪ್ಪ ಅವರ ದೂರದೃಷ್ಟಿಯಿಂದ ಈ ಸಂಘ ಅಸ್ತಿತ್ವಕ್ಕೆ ಬಂತು. ವೆಂಕಪ್ಪ ಅವರು ತಹಶೀಲ್ದಾರ್ ಆದ ನಂತರ ಮರಾಟಿ ಸಮುದಾಯದ ವಿಧ್ಯಾರ್ಜನೆಗೆ ಮತ್ತು ಸರಕಾರದಿಂದ ದೊರಕುವ ದರ್ಕಾಸ್ತು ಯೋಜನೆಯನ್ನು ಮಾಡಿಕೊಳ್ಳಲು ಪ್ರೋತ್ಸಾಹ ನೀಡಿದರು. ಸಂಘದ ಮೂಲಕ ಮರಾಟಿಗರಲ್ಲಿ ಜಾಗೃತಿಯನ್ನು ಮೂಡಿಸಿದರು.

೧೯೫೮ ರಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಗುಡ್ಡಗಾಡು ಜನರ ಸುಧಾರಣ ಸಂಘ ಪುತ್ತೂರಲ್ಲಿ ಅಸ್ತಿತ್ವಕ್ಕೆ ಬಂತು. ಸಂಘದ ಘಟನಾ ಪತ್ರ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ದೊರತಿದೆ.

ನಂತರದಲ್ಲಿ ಜಿಲ್ಲೆಯಲ್ಲಿ ಅನೇಕ ಸಂಘಗಳು ಅಸ್ತಿತ್ವಕ್ಕೆ ಬಂದವು ಅಲ್ಲದೆ ಉಡುಪಿ, ಕಾಸರಗೊಡು, ಕೊಡಗು, ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಮತ್ತು ಮೈಸೂರು, ಬೆಂಗಳೂರು ನಗರಗಳಲ್ಲಿ ಮರಾಟಿ ಸಮಾಜ ಸೇವಾ ಸಂಘಗಳು ಸ್ಥಾಪನೆಯಾದವು. ದಕ್ಷಿಣ ಕನ್ನಡದಲ್ಲಿರುವ ಸಂಚುಗಳು ಈ ಕೆಳಗಿನಂತಿವೆ.

೦೧. ಮರಾಟಿ ಸಮಾಜ ಸೇವಾ ಸಂಘ (ರಿ) ಸುಳ್ಯ ತಾಲೂಕು

೦೨. ಮರಾಟಿ ಸಮಾಜ ಸೇವಾ ಸಂಘ (ರಿ) ಪುತ್ತೂರು, ತಾಲೂಕು

೦೩. ಮರಾಟಿ ಸಮಾಜ ಸೇವಾ ಸಂಘ (ರಿ) ನರಿಮೊಗರು, ಪುತ್ತೂರು ತಾಲೂಕು

೦೪. ಮರಾಟಿ ಸಮಾಜ ಸೇವಾ ಸಂಘ (ರಿ) ಸರ್ವೆ,ಪುತ್ತೂರು ತಾಲೂಕು

೦೫. ಶಿವಾಜಿ ಮರಾಟಿ ಸಮಾಜ ಸೇವಾ ಸಂಘ (ರಿ) ಆಲಂಕಾರು, ಪುತ್ತೂರು ತಾಲೂಕು

೦೬. ಮರಾಟಿ ಸಮಾಜ ಸೇವಾ ಸಂಘ (ರಿ) ಉಜಿರೆ, ಬೆಳ್ತಂಗಡಿ ತಾಲೂಕು

೦೭. ಮರಾಟಿ ಸಮಾಜ ಸೇವಾ ಸಂಘ (ರಿ) ತನ್ನೀರುಪಂಥ, ಬೆಳ್ತಂಗಡಿ ತಾಲೂಕು

೨೮. ಮರಾಟಿ ಸಮಾಜ ಸೇವಾ ಸಂಘ (ರಿ) ಶಿರಾಲು, ಬೆಳ್ತಂಗಡಿ ತಾಲೂಕು
೦೯. ಶ್ರೀ ಮಹಮ್ಮಾಯಿ ಮರಾಟಿ ಸಮಾಜ ಸೇವಾ ಸಂಘ (ರಿ) ಅಡ್ಯನಡ್ಕ, ಬಂಟ್ವಾಳ, ತಾಲೂಕು
೧೦. ಮರಾಟಿ ಸಮಾಜ ಸೇವಾ ಸಂಘ (ರಿ) ಬಿ.ಸಿ.ರೋಡು, ಬಂಟ್ವಾಳ ತಾಲೂಕು
೧೧. ಜೈ ಭಾರತಿ ಮರಾಟಿ ಸಮಾಜ ಸೇವಾ ಸಂಘ (ರಿ) ಪುಣಚ, ಬಂಟ್ವಾಳ ತಾಲೂಕು
೧೨. ಬಂಟ್ವಾಳ ತಾಲೂಕು ಗಿರಿಜನರ ಸೇವಾ ಸಂಘ (ರಿ) ವಿಟ್ಲ, ಬಂಟ್ವಾಳ ತಾಲೂಕು
೧೩. ಶ್ರೀ ದುರ್ಗಾ ಮರಾಟಿ ಸಮಾಜ ಸೇವಾ ಸಂಘ (ರಿ) ಕನ್ಯಾನ, ಬಂಟ್ವಾಳ ತಾಲೂಕು
೧೪. ಶ್ರೀ ದೇವಿ ಮರಾಟಿ ಸಮಾಜ ಸೇವಾ ಸಂಘ (ರಿ) ಕೇಪು, ಬಂಟ್ವಾಳ ತಾಲೂಕು
೧೫. ಶ್ರೀ ಶಿವಾಜಿ ಮರಾಟಿ ಸಮಾಜ ಸೇವಾ ಸಂಘ (ರಿ) ನೇರಳಕಟ್ಟೆ, ಬಂಟ್ವಾಳ ತಾಲೂಕು
೧೬. ಶ್ರೀ ಶಿವಾಜಿ ಮರಾಟಿ ಸಮಾಜ ಸೇವಾ ಸಂಘ (ರಿ) ಆನೆಪದವು, ಅಳಿಕೆ, ಬಂಟ್ವಾಳ ತಾಲೂಕು
೧೭. ಶ್ರೀ ಮಹಮ್ಮಾಯಿ ಮರಾಟಿ ಸಮಾಜ ಸೇವಾ ಸಂಘ (ರಿ) ಕರೋಪಾಡಿ, ಬಂಟ್ವಾಳ, ತಾಲೂಕು
೧೮. ಶ್ರೀ ಮಹಮ್ಮಾಯಿ ಮರಾಟಿ ಸಮಾಜ ಸೇವಾ ಸಂಘ (ರಿ) ಕಳಸಬೈಲು, ಕಲ್ಲಮುಂಡ್ಕೂರು ಮಂಗಳೂರು ತಾಲೂಕು
೧೯. ಶ್ರೀ ಮಹಮ್ಮಾಯಿ ಮರಾಟಿ ಸಮಾಜ ಸೇವಾ ಸಂಘ (ರಿ) ಬೆಳುವಾಯಿ, ಮಂಗಳೂರು ತಾಲೂಕು
೨೦. ಮರಾಟಿ ಸಮಾಜ ಸೇವಾ ಸಂಘ (ರಿ) ಗಂಜಿಮಠ, ಮಂಗಳೂರು
೨೧. ಮರಾಟಿ ಸಮಾಜ ಸೇವಾ ಸಂಘ (ರಿ) ಮಂಗಳೂರು

ಫೆಬ್ರವರಿ ೧೬ ೨೦೦೨ ರಂದು ಮಂಗಳೂರಿನಲ್ಲಿ ರಾಜ್ಯ ಮಟ್ಟದ ಮರಾಟಿ ಸಮುದಾಯದ ಪ್ರಥಮ ಸಮಾವೇಶ ಜರುಗಿತು. ಮಂಗಳೂರು ವಿಶ್ವವಿದ್ಯಾಲಯದ ಕುಲಸಚಿವರು, ಜಿಲ್ಲೆಯ ಮರಾಟಿ ಸಮುದಾಯದ ಮುಖಂಡರೂ ಆದ ಶ್ರೀ ಕೆ. ಸುಂದರ ನಾಯ್ಕ ಅವರು ಅಧ್ಯಕ್ಷರಾಗಿದ್ದರು.ಹಾಗೆಯೇ ಮಂಗಳೂರಿನಲ್ಲಿ ಕರ್ನಾಟಕ ಮರಾಟಿ ಫೆಡರೇಶನ್, ಮಂಗಳೂರು ಸ್ಥಾಪಿಸಲಾಗಿದ್ದು, ಶ್ರೀ ಕೆ. ಸುಂದರ ನಾಯ್ಕರ ಸಂಪಾದಕೀಯದ ಮರಾಟಿ ಸಂಪರ್ಕವಾಹಿನಿ ಮಾಸ ಪತ್ರಿಕೆ ಪ್ರಕಟವಾಗುತ್ತದೆ.

ಮರಾಟಿ ಸಮಾಜದ ಎಲ್ಲಾ ಸಂಘಟನೆಗಳು ಉತ್ತಮ ರೀತಿಯಲ್ಲಿ ಕಾರ್ಯನಿರ್ವಹಿಸಿದ್ದೆ ಆದರೆ ಅಭಿವೃದ್ಧಿ ಸಾದಿಸಲು ಸುಲಭವಾಗುತ್ತದೆ. ಇಂದಿನ ಜಾಗತೀಕರಣ, ಖಾಸಗೀಕರಣ ವಿರುದ್ಧ ದನಿ ಎತ್ತಿ ಎದುರಿಸಬಹುದಾಗಿದೆ. ಸಂಘಟನೆಗಳ ಮೂಲಕ ಮರಾಟಿ ಬುಡಕಟ್ಟಿಗಿರುವ ಸರ್ಕಾರದ ಸವಲತ್ತುಗಳನ್ನು ಪಡೆಯಲು ಪ್ರಯತ್ನ ನಡೆಸಬೇಕಾಗಿದೆ.

* * * * *

## ಉಪ ಸಂಹಾರ

ಭಾರತೀಯ ಸಮಾಜ-ಸಂಸ್ಕೃತಿಗಳ ಬಹುದೊಡ್ಡ ಹಿರಿಮೆಯೆಂದರೆ ಅವುಗಳ ವೈವಿಧ್ಯತೆ ಮತ್ತು ಸಂಕೀರ್ಣತೆಯಿಂದ ಕೂಡಿದ ಒಳಪದರಗಳು. ಸಾವಿರಾರು ಜಾತಿ-ಉಪಜಾತಿಗಳೊಂದಿಗೆ ಧರ್ಮಗಳು ಭಾರತವನ್ನು ಬಹುಜನಾಂಗೀಯ, ಬಹುಸಂಸ್ಕತಿಯ ದೇಶವನ್ನಾಗಿ ಮಾರ್ಪಡಿಸಿವೆ. ದೇಶದ ಭವ್ಯ ಚರಿತ್ರೆಗೆ ಸಾಂಸ್ಕೃತಿಕ ಶ್ರೀಮಂತಿಕೆಗೆ ವೈವಿಧ್ಯತೆ ಅನನ್ಯತೆಗೆ ಇಲ್ಲಿ ನೆಲೆಸಿರುವ ಸಮಸ್ತ ಜನ ಸಮುದಾಯಗಳ ದೇಣಿಗೆ ಇದೆ. ಆದರೆ ದೇಶದ ಮೂಲೆ ಮೂಲೆಗಳಲ್ಲಿರುವ ನೂರಾರು ಬುಡಕಟ್ಟು ಸಮುದಾಯಗಳಿಗೆ ದೇಣಿಗೆ, ಬೆಳವಣಿಗೆ ವಿಚಾರ ಬಂದಾಗ ಸ್ಥಾನವೇ ಇಲ್ಲ. ಬುಡಕಟ್ಟುಗಳನ್ನು ತಮ್ಮ ಸಹಜ ಸರಳ ಜೀವನದಿಂದ ಗುರುತಿಸಿದರೇ ವಿನಃ ಅವರ ಕೊಡುಗೆ, ದೇಣಿಗೆಯನ್ನು ಪರಿಗಣಿಸಲಿಲ್ಲ.

ಭಾರತದಲ್ಲಿ ಬುಡಕಟ್ಟುಗಳ ಪರಿಸ್ಥಿತಿ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಬಂದಿರುವುದು ದಿಟ. ಮುಸಲ್ಮಾನರ ಆಳ್ವಿಕೆಯ ಗಾಲದಲ್ಲಿ ಸ್ವತಂತ್ರವಾಗಿದ್ದರೆ, ಆಂಗ್ಲರ ಆಳ್ವಿಕೆಯಲ್ಲಿ ತಮ್ಮ ನೆಲೆಯೇ ಅಲುಗಾಡಿದ ಅನುಭವಕ್ಕೆ ತುತ್ತಾದರು. ನಂತರ ಕೈಗಾರಿಕೆ, ರಸ್ತೆ, ರೈಲ್ವೆ ಇತ್ಯಾದಿಗಳು ಅಭಿವೃದ್ಧಿಯ ಹೆಸರಲ್ಲಿ ಬುಡಕಟ್ಟು ಜನರ ನೆಲೆಯನ್ನೇ ಬುಡಮೇಲಾಗಿಸಿತು. ಅರಣ್ಯಗಳಲ್ಲಿ ನೆಮ್ಮದಿಯಾಗಿದ್ದ ಬುಡಕಟ್ಟು ಜನ ಆಂಗ್ಲರ ಹಾಗೂ ಇತರ ಹಿಂದೂಗಳ ಸಂಪರ್ಕಕ್ಕೆ ಬಂದರು, ಕೂಲಿಗಳಾದರು, ಗುಲಾಮರಾದರು. ಭೂಮಿ, ಸಂಸ್ಕೃತಿಯನ್ನು ಕಳೆದುಕೊಂಡು ಅನಾಥ ಸ್ಥಿತಿಗಿಳಿದರು.

''ದೇಶದ ಬುಡಕಟ್ಟು ಸಮುದಾಯಗಳನ್ನು ದುಡಿಯುವವರು ಅಥವಾ ಕೂಲಿಕಾರರು ಎಂದು ಪರಿಗಣಿಸಲಾಯಿತೇ ವಿನಃ ಅವರು ಕೂಡ ಉತ್ಪಾದಕರು ಎಂಬ ದೃಷ್ಟಿಯಿಂದ ನೋಡಲೇ ಇಲ್ಲ ಎಂಬುದು ವಿಪರ್ಯಾಸ. ಅವರ ಉತ್ಪಾದನಾ ಚಟುವಟಿಕೆಗಳನ್ನು ನಿರ್ಲಕ್ಷಿಸಿದ್ದಲ್ಲದೇ ಆಧುನಿಕ ಅಭಿವೃದ್ಧಿ ಪರಂಪರೆಯಲ್ಲಿ ಅವರು ಒಂದು 'ಹೊರೆ'ಯಾಗಿ ಪರಿಣಮಿಸಿದುದು ಇನ್ನೊಂದು ದುರಂತ. ನಮ್ಮ ಸ್ವಾತಂತ್ರ್ಯೋತ್ತರ ಆಡಳಿತ ಅರಣ್ಯವನ್ನು ಒಂದು ಉತ್ಪಾದನಾ ಕ್ಷೇತ್ರ ಎಂದು ಪರಿಗಣಿಸಿತು. ಆದರೆ ಅದನ್ನು ಸಾವಿರಾರು ವರ್ಷಗಳಿಂದ ಕಾಪಾಡಿಕೊಂಡು ಬಂದಿದ್ದ ಅದರೊಳಗಿನ ಬುಡಕಟ್ಟು ಸಮುದಾಯಗಳನ್ನು ಅರಣ್ಯಕ್ಕೆ ಮಾರಕ ಎಂದು ಭಾವಿಸಿತಲ್ಲದೆ, ಅವರನ್ನು ಅರಣ್ಯದಿಂದ

ಓಡಿಸುವ ಪ್ರಯತ್ನಗಳನ್ನು ಕೂಡ ಮಾಡಿತು" (ಹಿ.ಚಿ ಬೋರಲಿಂಗಯ್ಯ ೨೦೦೪, ಪು.೧೦) ಇದು ಬುಡಕಟ್ಟುಗಳ ಹಿಂದಿನ, ಇಂದಿನ ಸ್ಥಿತಿಗೂ ಹೌದು. ಏಕ ಸಂಸ್ಕೃತಿ ಮತ್ತು ಮೇಲು ಸಂಸ್ಕೃತಿ ಎಂದು ನಿರ್ದಿಷ್ಟವಾದ ಒಂದು ಸಂಸ್ಕೃತಿಯನ್ನು ಪರಿಗಣಿಸಿ, ಉಳಿದ ಎಲ್ಲಾ ಸಂಸ್ಕೃತಿಗಳನ್ನು 'ಕೆಳ ಸಂಸ್ಕೃತಿ' ಎಂದು ಪರಿಗಣಿಸಿ ಅವಗಣನೆ ಮಾಡಲಾಯಿತು.

ಪ್ರಸಕ್ತ ಕಾಲ, ಒಂದು ಕಡೆ ಜಗತ್ತು ಆಧುನಿಕವಾಗಿ ಮಾರ್ಪಾಡಾಗುತ್ತಾ ವೇಗದ ಯುಗವಾಗಿ, ಮಾಹಿತಿಯ ಯುಗವಾಗಿ, ಸ್ಪರ್ಧೆಯ ಯುಗವಾಗಿ ಹಾಗೂ ವ್ಯಾಪಾರೀ ಮನೋಧರ್ಮದ ಯುಗವಾಗಿ ಮಾರ್ಪಾಡು ಹೊಂದುತ್ತಿದೆ. ಇನ್ನೊಂದು ಕಡೆ ಲಕ್ಷಾಂತರ ಜನರು ಕಾಡಿನ ಮರೆಯಲ್ಲಿ, ಬೆಟ್ಟ ಗುಡ್ಡಗಳ ತಪ್ಪಲಿನ ನೆಲೆಯನ್ನು ಕಳೆದುಕೊಳ್ಳುವ ಸಂದಿಗ್ಧ ಸ್ಥಿತಿಯಲ್ಲಿರುವ ಬುಡಕಟ್ಟು ಸಮುದಾಯದ ಜನರಿದ್ದಾರೆ. ಅತಂತ್ರ ಸ್ಥಿತಿ ಬಲತ್ಕಾರದ ಬದಲಾವಣೆಯತ್ತ ದೂಡುತ್ತಿದೆ. ಅನಿವಾರ್ಯವಾಗಿ ತಮ್ಮ ಸರಳ ಜೀವನಕ್ಕೆ ಸಂಸ್ಕೃತಿಗೆ ಇತಿಶ್ರೀ ಹಾಡುವ ತವಕದಲ್ಲಿದ್ದಾರೆ. ಈ ದಾರಿಯಲ್ಲಿ ಈಗಾಗಲೇ ಅನೇಕ ಬುಡಕಟ್ಟುಗಳು ಹೆಜ್ಜೆ ಹಾಕತೊಡಗಿವೆ.

ನನ್ನ ಈ ಅಧ್ಯಯನದಲ್ಲಿ ಮರಾಟಿಗರ ಬದುಕನ್ನು ಸಾಧ್ಯವಾದಷ್ಟು ಮಟ್ಟಿಗೆ ತೆರೆದಿಟ್ಟಿದ್ದೇನೆ. ಇಂದಿನ ಮಹಾರಾಷ್ಟ್ರ ರಾಜ್ಯದಿಂದ ವಲಸೆ ಬಂದ ಮರಾಟಿಗರು ಕರಾವಳಿ ಕರ್ನಾಟಕದಲ್ಲಿ ನೆಲೆ ಕಂಡುಕೊಂಡರು. ಸ್ವಾತಂತ್ರ್ಯ ಬಂದು ೫೦ವರ್ಷಗಳು ಕಳೆದರೂ ಸರಕಾರದ ಅಭಿವೃದ್ಧಿ ಯೋಜನೆಗಳು ಸಮರ್ಪಕವಾಗಿ ತಲುಪಿಲ್ಲ. ಅಖಂಡ ಭಾರತದ ಎಲ್ಲಾ ಪ್ರದೇಶಗಳು ಒಂದಲ್ಲ ಒಂದು ಸಮಸ್ಯೆಯಿಂದ ಬಳಲುತ್ತಿರುವ ಈ ಸಂದರ್ಭದಲ್ಲಿ ಬುಡಕಟ್ಟು, ಆದಿವಾಸಿಗಳ ಸ್ವಾಯತ್ತ ಜೀವನದ ಕನಸುಗಳು ಇನ್ನೂ ಕನಸಾಗಿಯೇ ಉಳಿದಿದೆ. ಇಂದಿನ ಜಾಗತೀಕರಣವು ಅಭಿವೃದ್ಧಿ ನೀತಿಯನ್ನು ತನ್ನ ತೆಕ್ಕೆಯಲ್ಲಿಯೇ ರೂಪುಗೊಳ್ಳುವಂತೆ ಮಾಡಿದೆ.

ಈ ಅಧ್ಯಯನದಲ್ಲಿ ಮರಾಟಿಗರ ಬದುಕಿನ ಚಿತ್ರಣವಿದೆ. ಬುಹುತೇಕ ಮಾಹಿತಿಗಳು ಕ್ಷೇತ್ರಕಾರ್ಯ ಮುಖೇನ ಪಡೆದವುಗಳು. ನಾನು ಕೂಡ ಅದೇ ಸಮುದಾಯದಿಂದ ಬಂದವನಾದುದರಿಂದ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಧಾರ್ಮಿಕ ಚಟುವಟಿಕೆಗಳನ್ನು ನೋಡುತ್ತಾ ಅದರಲ್ಲಿ ತೊಡಗಿಸಿಕೊಂಡು ಬಂದವನಾದುದರಿಂದ ಮಾಹಿತಿಗಳು ಅಧಿಕೃತವಾಗಿವೆ. ಮೊದಲ ಬಾರಿಗೆ ಮರಾಟಿ ಸಮುದಾಯವನ್ನು ಅಧ್ಯಯನಕ್ಕೆ ಒಳಪಡಿಸಿ, ಸಮುದಾಯದ ಏಳು ಬೀಳುಗಳನ್ನು, ಅಭಿವೃದ್ಧಿ ತೊಡಕುಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯ ಮರಾಟಿಗರ ಜಾನಪದ ಎಂಬ ಶೀರ್ಷಿಕೆಯಡಿಯಲ್ಲಿ ರೂಪುಗೊಂಡಿರುವ ಈ ಮಹಾಪ್ರಬಂಧವು ಏಳು ಅಧ್ಯಾಯಗಳನ್ನು ಹೊಂದಿದೆ.

ಮೊದಲ ಅಧ್ಯಯದಲ್ಲಿ ಅಧ್ಯಯನದ ಉದ್ದೇಶ ವ್ಯಾಪ್ತಿ ಮತ್ತು ಅಧ್ಯಯನದ ಮಹತ್ವವನ್ನು ನೀಡಲಾಗಿದೆ. ಭಾರತದ ಬುಡಕಟ್ಟುಗಳು ಕರ್ನಾಟಕದ ಬುಡಕಟ್ಟುಗಳು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಬುಡಕಟ್ಟುಗಳ ಬಗ್ಗೆ ಕ್ಲುಪ್ತವಾಗಿ ವಿವರಣೆ ನೀಡಲಾಗಿದೆ.

ಎರಡನೇ ಅಧ್ಯಾಯ ಮರಾಟಿ ಸಮುದಾಯದ ಮೂಲ, ಭೌತಿಕ ನೆಲೆ, ವಲಸೆ, ವಿಕಾಸ ಕಾರಣಗಳನ್ನು ಒಳಗೊಂಡಿದೆ. ಜಾನಪದೀಯ ಅಂಶಗಳಿಗೆ ಹೆಚ್ಚು ಒತ್ತು ಕೊಟ್ಟಿರುವ ಅಧ್ಯಯನದಲ್ಲಿ, ಕ್ಷೇತ್ರಕಾರ್ಯ ಮುಖೇನ

ದೊರೆತ ಮೌಖಿಕ ಮತ್ತು ಲಿಖಿತ ಆಧಾರಗಳನ್ನು ಇಟ್ಟುಕೊಂಡು ಮೂಲವನ್ನು ವಿಶ್ಲೇಷಿಸಲಾಗಿದೆ. ಸುಮಾರು ೧೪ ೧೬ ಶತಮಾನದ ಕಾಲಘಟ್ಟದಲ್ಲಿ ಇಂದಿನ ಮಹಾರಾಷ್ಟ್ರದಿಂದ ವಲಸೆ ಬಂದ ಮರಾಟಿಗರು ಕರ್ನಾಟಕದ ಕರಾವಳಿ ಪ್ರದೇಶದಲ್ಲಿ ನೆಲೆ ನಿಂತರು ಎಂಬ ಅಭಿಪ್ರಾಯವನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಅವರ ಮೂಲವನ್ನು ತದಕಿದಾಗ ಭಾಷೆ, ಸಂಸ್ಕೃತಿ, ಆಚರಣೆಗಳು ಮಹಾರಾಷ್ಟ್ರದ ಸಂಸ್ಕೃತಿಯತ್ತ ಬೆರಳು ಮಾಡುತ್ತದೆ. ಜಾತಿ ಸೂಚಕ ಪದವಾದ ಮರಾಟಿಯು ಮಹಾರಾಷ್ಟ್ರದ ಮೂಲವಾಗಿದ್ದು, ಮರಹಾಟಿ ಪದದಿಂದ ಸಂಸ್ಕೃತೀಕರಣಗೊಂಡಿದೆ. ಮೂಲದಲ್ಲಿ ಅಲೆಮಾರಿಗಳಾಗಿ ಕಂಡು ಬಂದ ಮರಾಟಿಗರು ವಲಸೆ ಸಂಸ್ಕೃತಿಯ ಪ್ರಸರಣ ಪ್ರಕ್ರಿಯೆಗೆ ಆಧಾರವಾದರು. ಈಗಾಗಲೇ ಬುಡಕಟ್ಟಿನಿಂದ ಜಾತಿಗೆ ಪರಿವರ್ತನೆಗೊಳಪಟ್ಟ ಮರಾಟಿಗರು ಮೂಲದಲ್ಲಿ ಬುಡಕಟ್ಟುಗಳಾಗಿದ್ದರು ಎಂಬುದನ್ನು ಅಧ್ಯಯನದ ಮೂಲಕ ತಿಳಿಯಲಾಗಿದೆ. ಅವರ ಭಾಷೆ, ಆಚರಣೆ, ವೃತ್ತಿ, ಸಂಪ್ರದಾಯ, ಆಹಾರ ಪದ್ಧತಿ, ಉಡುಗೆ ತೊಡುಗೆಗಳು ಈ ಎಲ್ಲ ಲಕ್ಷಣಗಳ ಹಿನ್ನೆಲೆಯಲ್ಲಿ ಬುಡಕಟ್ಟು ಸಮುದಾಯದವರು ಎಂಬುದನ್ನು ಖಚಿತಪಡಿಸಿಬಹುದು. ಹಾಗೆಯೇ ಸದಾ ಪರಿವರ್ತನೆಗೆ ತೆರೆದುಕೊಂಡು ಬಂದ ಒಂದು ಸಮುದಾಯ ಇದಾಗಿದೆ.

ಮರಾಟಿಗರ ಸಾಮಾಜಿಕ ಜೀವನ ಮೂರನೇ ಅಧ್ಯಾಯದಲ್ಲಿದೆ. ಇಲ್ಲಿ ಬಳಿ ಪದ್ಧತಿ, ಕೌಟುಂಬಿಕ ವ್ಯವಸ್ಥೆ, ಜನನ ಸಂಬಂಧಿ ಆಚರಣೆ, ಋತುಮತಿ, ಮದುವೆ, ಸೀಮಂತ, ಮರಣ - ಹೀಗೆ ಇವರ ಸಾಮಾಜಿಕ ಜೀವನದಲ್ಲಿ ಜರುಗುವ ಸಂಪ್ರದಾಯಾಚರಣೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇವರ ವೈವಾಹಿಕ ಸಂಬಂಧಕ್ಕೆ ಮೂಲವಾಗಿರುವುದು ಬಳಿ ಪದ್ಧತಿ. ಬಳಿಗಳ ಹೊಂದಾಣಿಕೆ ಇಲ್ಲದೇ ವಿವಾಹ ಸಂಬಂಧ ನಡೆಯುವುದಿಲ್ಲ. ಅಧ್ಯಯನದಲ್ಲಿ ಸುಮಾರು ಎಪ್ಪತ್ತು ಬಳಿಗಳ ಹೆಸರುಗಳನ್ನು ಸಂಗ್ರಹಿಸಲಾಗಿದೆ. ಒಂದು ಅಂದಾಜಿನ ಪ್ರಕಾರ ಒಟ್ಟು ಕರಾವಳಿ ಕರ್ನಾಟಕದಲ್ಲಿ ೧೦೦-೧೨೦ ಬಳಿಗಳು ಕಂಡುಬರಬಹುದು. ಬಹುತೇಕ ಬಳಿಗಳು ಸಸ್ಯ, ಪ್ರಾಣಿ, ಮತ್ತು ಕುಲದೇವರುಗಳಿಂದ ಉತ್ಪತ್ತಿಯಾಗಿವೆ. ಆರಂಭದಲ್ಲಿ ಏಳೆಯ ದಿನಗಳವರೆಗೆ ಒಂದು ವಿವಾಹ ಕಾರ್ಯಕ್ರಮಗಳು ನಡೆದರೆ ಇಂದು ಬದಲಾಗುತ್ತಾ ಒಂದೆರಡು ದಿನಗಳಿಗೆ ಸೀಮಿತವಾಗಿದೆ. ವಲಸೆ ಬಂದ ಆರಂಭದಲ್ಲಿ ಮರಾಟಿಗರಲ್ಲಿಯೂ ಪ್ರಚಲಿತದಲ್ಲಿದ್ದ ಬಾಲ್ಯವಿವಾಹ ಇಂದು ಕಾಣಬರುವುದಿಲ್ಲ. ಕಟ್ಟುನಿಟ್ಟಾಗಿ ಪಾಲಿತವಾಗುತ್ತಿದ್ದ ಕೆಲವೊಂದು ಸಂಪ್ರದಾಯಗಳು ಕಣ್ಮರೆಯಾಗುತ್ತಿದೆ. ಅಂತರ್ ಜಾತಿ ವಿವಾಹಗಳೂ ಇಂದು ನಡೆಯುತ್ತಿವೆ. ಬುಡಕಟ್ಟು ಸಮುದಾಯದಲ್ಲಿ ಕಂಡು ಬಾರದ ವರದಕ್ಷಿಣೆ ಇಂದು ಮರಾಟಿಗರು ಅಪೇಕ್ಷಿಸುವುದನ್ನು ಕಾಣಬಹುದು. ಮೂಲ ಸಂಪ್ರದಾಯದಂತೆ ಮರಾಟಿಗರಲ್ಲಿ ವಧುದಕ್ಷಿಣೆ ಪದ್ಧತಿ ಇಂದೂ ಜಾರಿಯಲ್ಲಿರುವುದು ಉಲ್ಲೇಖನೀಯ ವಿವಾಹ ಸಂದರ್ಭದಲ್ಲಿನ ತೆರವು ಹಣವನ್ನು ಶೃಂಗೇರಿ ಮಠಕ್ಕೆ ಸಂದಾಯವಾಗುತ್ತಿದ್ದು ಇಂದು ತೆರೆಮರೆಗೆ ಸರಿದಿದೆ.

ಮರಾಟಿಗರ ಜನನ ಸಂಬಂಧಿ ಆಚರಣೆಗಳು ಇಂದಿಗೂ ಕಟ್ಟುನಿಟ್ಟಾಗಿ ಪಾಲಿಸಲ್ಪಡುತ್ತಿವೆ. ತಮ್ಮ ತಮ್ಮ ಮನೆಗಳಲ್ಲಿಯೇ ಹೆರಿಗೆಯಾಗುತ್ತಿದ್ದ ಸಂದರ್ಭಗಳು ಕಡಿಮೆಯಾಗಿ ಇಂದು ಆಸ್ಪತ್ರೆಯ ಸಹಕಾರ ಪಡೆಯುತ್ತಿದ್ದಾರೆ. ಆದರೂ ಮನೆಗಳಲ್ಲಿ ಜರುಗತಕ್ಕಂತಹ ವಿಧಿ-ವಿಧಾನಗಳಿಗೆ, ಸಂಪ್ರದಾಯಗಳಿಗೆ ಕಡಿವಾಣ ಬಿದ್ದಿಲ್ಲ. ಕಾಡಿನ ಜೊತೆ ಅವಿನಾಭಾವ ಸಂಬಂಧವಿರಿಸಿಕೊಂಡ ಮರಾಟಿಗರು ಅಲ್ಲಿ ದೊರಕುವ ಪ್ರಕೃತಿ ಜನ್ಯ ಔಷಧಗಳನ್ನು

ಬಳಸಿಕೊಂಡೇ ಬರುತ್ತಿದ್ದಾರೆ. ಇದನ್ನು ಜನಪದ ಸಂದರ್ಭ ಮತ್ತು ಬಾಣಂತಿ ಮಗುವಿನ ಆರೈಕೆ ಸಂದರ್ಭಗಳಲ್ಲಿ ಕಾಣಬಹುದು. ಜನನ, ಮರಣ, ಋತುಮತಿ ಇಂಥ ಜೀವನಾವರ್ತನ ಸಂದರ್ಭಗಳಲ್ಲಿ ಮಡಿ ಮೈಲಿಗೆ, ಆಚರಣೆಗಳನ್ನು ಗ್ರಾಮೀಣ ಪ್ರದೇಶದ ಜನರು ಪಾಲಿಸಿಕೊಂಡೇ ಬುರತ್ತಿದ್ದಾರೆ. ಇವುಗಳಲ್ಲಿ ಬದಲಾವಣೆಯಾಗಿದೆಯೆಂದರೆ ನಗರ ಪಟ್ಟಣ ಪ್ರದೇಶದಲ್ಲಿರುವ ಮರಾಟಿಗರು ಮಾತ್ರ. ಫಲವಂತಿಕೆ, ಸಮೃದ್ಧಿ ಮತ್ತು ಒಪ್ಪಂದಗಳ ಸಂಕೇತಗಳಾದ, ಹಿಂಗಾರ, ಅಡಿಕೆ, ಹಾಲು, ಹಾಲು ಒಸರುವ ಮರಗಳು, ವೀಳ್ಯದೆಲೆ, ಬಾಳೆಗೊನೆ, ಭತ್ತ, ಅಕ್ಕಿ ಹೀಗೆ ಪ್ರಕೃತಿಯ ವರದಾನಗಳನ್ನು ಮರಾಟಿಗರು ಅತ್ಯಂತ ನಂಬಿಕೆ ಗೌರವಗಳಿಂದ ಕಾಣುತ್ತಿದ್ದಾರೆ. ಒಟ್ಟು ಮರಾಟಿಗರ ಸಾಮಾಜಿಕ ಜೀವನ ಇತರ ಸಮುದಾಯಗಳಿಗಿಂತ ಯಾವ ರೀತಿಯಲ್ಲಿ ಭಿನ್ನವಾಗಿದೆ, ಇತರ ಸಮುದಾಯಗಳ ಪ್ರಭಾವಗಳೇನು ಎಂಬುದನ್ನು ಈ ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ವಾರ್ಷಿಕಾವರ್ತನದ ಆಚರಣೆಗಳು, ಆರಾಧನೆಗಳನ್ನು ಪರಿಚಯಿಸಲಾಗಿದೆ. ಮರಾಟಿಗರು ಧಾರ್ಮಿಕವಾಗಿ ಅತೀ ನಂಬಿಕೆಯುಳ್ಳವರಾಗಿದ್ದು. ಹಿಂದಿನ ಕಾಲದಿಂದಲೂ ದೈವ ದೇವರುಗಳನ್ನು ಪೂಜಿಸುತ್ತಾ, ಆರಾಧಿಸುತ್ತಾ ಬಂದಿದ್ದಾರೆ. ಇಂದಿನ ವೇಗದ ಯುಗದಲ್ಲಿ ಸಮುದಾಯಗಳ ಭಿನ್ನತೆಯನ್ನು ಕಂಡುಕೊಳ್ಳಲು ಆಚರಣೆ, ಆರಾಧನೆಗಳು ಒಂದು ಪ್ರಮುಖ ಅಂಶ. ಒಂದು ಸಮುದಾಯದ ಮೂಲ ಆರಾಧನೆಗಳು ಇನ್ನೊಂದು ಸಮುದಾಯದಲ್ಲಿ ಬೇರೆಯದೇ ಆಗಿರುತ್ತದೆ. ಒಂದೇ ಆಗಿದ್ದರೂ ಆಚರಿಸುವುದರಲ್ಲಿ ಭಿನ್ನತೆ ಕಂಡು ಬರುತ್ತದೆ. ಮರಾಟಿಗರ ಅನನ್ಯತೆಯ ಸಂಕೇತಗಳಲ್ಲಿ ಒಂದಾದ ಗೋಂದೋಳು ಪೂಜೆಯನ್ನು ಈ ಅಧ್ಯಾಯದಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ. ಶಕ್ತಿಯಾರಾಧನೆಯಾದ ಗೋಂದೋಳು ಪೂಜೆಯ ಮೂಲಕ ಮರಾಟಿಗರು ಸ್ತ್ರೀದೇವತೆಗಳನ್ನು ಆರಾಧಿಸುತ್ತಲೇ ಬಂದಿದ್ದಾರೆ. ಜಿಲ್ಲೆಯ ಮತ್ತು ಒಟ್ಟು ಕರಾವಳಿ ಕರ್ನಾಟಕದ ಮರಾಟಿ ಕುಟುಂಬಗಳೆಲ್ಲಾ ಗೋಂದೋಳು ಪೂಜೆಯನ್ನು ಸಂಪ್ರದಾಯವೆಂಬಂತೆ ಆರಾಧಿಸುತ್ತಾ ಬಂದಿರುವುದು ಕಂಡುಬರುತ್ತದೆ. ಆ ಮೂಲಕ ತಮ್ಮ ಅಸ್ಮಿತೆಯನ್ನು ಉಳಿಸಿಕೊಂಡಿದ್ದಾರೆ. ಗೋಂದೋಳು ಪೂಜೆಯು ಜಿಲ್ಲೆಯ ಇತರ ಸಮುದಾಯಗಳ ಮೇಲೂ ಪ್ರಭಾವ ಬೀರಿರುವುದು ಗಮನಾರ್ಹ ವಿಚಾರವಾಗಿದೆ. ತಮ್ಮ ಮೂಲ ಸಂಸ್ಕೃತಿಯ ಜೊತೆಗೆ ತೌಳವ ಸಂಸ್ಕೃತಿಯನ್ನು ತಮ್ಮದಾಗಿಸಿಕೊಂಡು ತುಳುವರಾಗಿದ್ದಾರೆ. ಮಹಮ್ಮಾಯಿ, ದೇವಿಯನ್ನು, ಭೈರವನನ್ನು ಎಷ್ಟು ಭಯ ಭಕ್ತಿಯಿಂದ ಆರಾಧಿಸುತ್ತಾ ಬಂದಿದ್ದಾರೋ ಅಷ್ಟೇ ಭಯ ಭಕ್ತಿಯನ್ನು ದೈವಾರಾಧನೆಗೂ, ನಾಗಾರಾಧನೆಗೂ ನೀಡಿದ್ದಾರೆ ಎನ್ನುವುದು ಅಧ್ಯಯನದ ಮೂಲಕ ಖಚಿತಪಡಿಸಿಕೊಳ್ಳಲಾಗಿದೆ. ತೌಳವ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾದ ಮರಾಟಿಗರು ಬ್ರಾಹ್ಮಣೀಕರಣಕ್ಕೂ ಒಳಗಾಗುತ್ತಿದ್ದಾರೆ. ತಮ್ಮದೇ ದೈವ ದೇವರುಗಳನ್ನು ಪೂಜಿಸಿಕೊಂಡು ಮದ್ಯ ಮಾಂಸಾಹಾರ ಸೇವನೆಯನ್ನು ಮಾಡಿಕೊಂಡು ಬಂದವರು ಇದೀಗ ಶಿಷ್ಟ, ವೈದಿಕ ಪೂಜೆಗಳೆಂದು ಕರೆಯಲ್ಪಡುವ ಸತ್ಯನಾರಾಯಣ ಪೂಜೆಯನ್ನು ಬ್ರಾಹ್ಮಣ ಪುರೋಹಿತರಿಂದ ಮಾಡಿಸುತ್ತಾರೆ. ಊರಿನ ದೇವಸ್ಥಾನಗಳ ಪೂಜೆ ಪುನಸ್ಕಾರಗಳಲ್ಲಿ ಭಾಗವಹಿಸಿ ಮಾಂಸಾಹಾರ ತ್ಯಜಿಸಿ ವೈದಿಕ ಸಂಸ್ಕೃತಿಗೆ ಒಳಗಾಗುತ್ತಿದ್ದಾರೆ.

ಮೂಲತಃ ಪ್ರಕೃತಿಯಾರಾಧಕರಾದ ಮರಾಟಿಗರು ತಮ್ಮ ಪರಿಸರದಲ್ಲಿಯೇ ದೈವ ದೇವರುಗಳನ್ನು ಕಂಡವರು. ಗೋಂದೋಳು ಪೂಜೆ, ಭೈರವಾರಾಧನೆ, ಬಾಲೆಸಾತು, ಗುಮ್ಮಟೆ ಕುಣಿತ ಈ ಎಲ್ಲಾ ಪೂಜೆ, ಕುಣಿತಗಳಲ್ಲಿ ಪ್ರಕೃತಿ

ಕೃಷಿ, ಜಾನುವಾರು, ಮತ್ತು ಕುಟುಂಬಗಳ ಉದ್ಧಾರಗಳ ಮೂಲಕ ಜನಪದರವಾದ ಲೋಕದೃಷ್ಟಿಯನ್ನು ಅನಾವರಣಗೊಳಿಸುತ್ತಿದ್ದಾರೆ. ಜಿಲ್ಲೆಯಲ್ಲಿ ಆಚರಿಸಲ್ಪಡುವ ಎಲ್ಲಾ ಹಬ್ಬ ಹರಿದಿನಗಳನ್ನು ಎಲ್ಲರಂತೆ ಆಚರಿಸಿಕೊಂಡು ಬಂದ ಮರಾಟಿಗರು ಶೃಂಗೇರಿ ಗುರುಮಠದ ಪರಂಪರೆಯ ಜೊತೆ ಹೊಂದಿರುವ ಸಂಬಂಧ ಉಲ್ಲೇಖನೀಯ.

ಅಧ್ಯಾಯ ಐದು ಭೌತಿಕ ಮತ್ತು ಮೌಖಿಕ ಜಾನಪದ. ಇಲ್ಲಿ ಮರಾಟಿಗರ ಮನೆ ರಚನೆ, ಪರಿಸರ, ಆಹಾರ ಪದ್ಧತಿ, ಉಡುಗೆ-ತೊಡುಗೆ, ಜನಪದ ವೈದ್ಯ ಪದ್ಧತಿ, ಜನಪದ ಆಟಗಳು, ಕೃಷಿ, ಭಾಷೆಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ವಲಸೆ ಬಂದ ಆರಂಭದಲ್ಲಿದ್ದ ಮನೆ ವಾತಾವರಣ ಬದಲಾವಣೆಯನ್ನು ಕಂಡಿದೆ. ಗುಡ್ಡ-ಕಾಡುಗಳ ಅಂಚಿನಲ್ಲಿ ಇನ್ನೂ ಗುಡಿಸಲುಗಳಲ್ಲಿ ವಾಸಿಸುತ್ತರುವ ಮರಾಟಿಗರು ಇಂದೂ ಇದ್ದಾರೆ. ಜಿಲ್ಲೆಯ ಇತರ ಬುಡಕಟ್ಟುಗಳಿಗೆ ಹೋಲಿಸಿದರೆ ಮರಾಟಿ ಬುಡಕಟ್ಟು ಜನರು ತಕ್ಕ ಮಟ್ಟಿಗೆ ಅನೂಕೂಲದಲ್ಲಿದ್ದಾರೆಂದು ಹೇಳಬಹುದು. ರಾಗಿ ಗಂಜಿ, ಹಲಸು ಇತರೆ ಹಣ್ಣುಗಳನ್ನು ತಿಂದು ಜೀವನ ಮಾಡಿದ ಮರಾಟಿಗರ ಆಹಾರ ಪದ್ಧತಿ ಸಂಪೂರ್ಣವಾಗಿ ಪರಿವರ್ತನೆಯಾಗಿದೆ. ತಂತ್ರಜ್ಞಾನ ಯುಗದಲ್ಲಿಯೂ ಪ್ರಕೃತಿಯಾಧಾರಿತ ಜನಪದ ವೈದ್ಯ ಪದ್ಧತಿಯನ್ನು ಈಗಲೂ ಗ್ರಾಮೀಣ ಮರಾಟಿಗರು ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ. ಆ ಮೂಲಕ ಜನಪದ ವೈದ್ಯ ಪದ್ಧತಿ ನಿರಂತರವಾಗಿರುವುದನ್ನು ತಿಳಿಯಬಹುದಾಗಿದೆ. ಕೃಷಿ ಕ್ಷೇತ್ರದಲ್ಲಿ ಸೈದ್ಧಾಂತಿಕವಾಗಿಲ್ಲದಿದ್ದರೂ ತಮ್ಮ ಸಹಜ ಜೀವನಕ್ಕೆ ಬದುಕಿಗೆ ಆಧಾರವಾಗಿರುವಂತೆ ಮುಂದುವರಿಯುತ್ತಿದ್ದಾರೆ. ಜಿಲ್ಲೆಯ ಬಹುತೇಕ ಮರಾಟಿ ಸ್ತ್ರೀಯರು ಬೀಡಿಕಟ್ಟುವ ಗೃಹ ಕೈಗಾರಿಕೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಆ ಮೂಲಕ ತಮ್ಮ ಕುಟುಂಬಕ್ಕೆ ಆಧಾರವಾಗಿದ್ದಾರೆ. ತಂಬಾಕು ಸೇವನೆ ಮತ್ತು ಅವುಗಳ ನಿರ್ವಹಣೆ ಆರೋಗ್ಯಕ್ಕೆ ಹಾನಿಕಾರಕವೆಂದು ತಿಳಿದಿದ್ದರೂ ಅನಿವಾರ್ಯವಾಗಿ ಆ ಕಾಯಕದಲ್ಲಿ ಮುಂದುವರಿಯುತ್ತಿದ್ದಾರೆ. ಧಾರ್ಮಿಕವಾಗಿ ಮರಾಟಿ ಸ್ತ್ರೀ ಉನ್ನತ, ಗೌರವದ ಸ್ಥಾನಪಡೆದಿದ್ದು ಕುಟುಂಬ ನಿರ್ವಹಣೆಯಲ್ಲಿ ಪುರುಷನಿಗೆ ಸಮಾನವಾಗಿದ್ದಾಳೆ, ಕುಟುಂಬದ ವರಮಾನ ಹೆಚ್ಚಳಕ್ಕೆ ಪುರುಷನಷ್ಟೇ ಸ್ತ್ರೀ ಕೂಡ ಕಾರಣವಾಗಿದ್ದಾಳೆ.

ಜಿಲ್ಲೆಯಲ್ಲಿರುವ ಜನಪದ ಆಟಗಳನ್ನೆಲ್ಲಾ ಮರಾಟಿ ಕುಟುಂಬದ ಮಕ್ಕಳು, ವಯಸ್ಕರು ಆಡುವುದು ಕಂಡುಬರುತ್ತದೆ. ತಮ್ಮದೇ ಜನಪದ ಆಟ ಕಂಡುಬಂದಿಲ್ಲ. ತುಳು ಭಾಷೆಯ ಗಾದೆ, ಒಗಟು, ಕತೆಗಳೆಲ್ಲಾ ಮರಾಟಿಗರ ಉಪಭಾಷೆ ಮರಾಟಿಗೆ ಭಾಷಾಂತರಗೊಂಡಿರುವುದನ್ನು ಕಾಣಬಹುದು. ವಲಸೆ ಬಂದ ಆರಂಭದಲ್ಲಿಯೇ ತುಳು ಭಾಷೆಯನ್ನು ನೆಚ್ಚಿಕೊಂಡ ಮರಾಟಿಗರು ತುಳುವರಾಗಿದ್ದಾರೆ. ಇದಕ್ಕೆ ಅತ್ಯುತ್ತಮ ಉದಾಹರಣೆ ಬೆಳ್ತಂಗಡಿಯ ಮಾಚಾರು ಗೋಪಾಲ ನಾಯ್ಕರು. ಸುಮಾರು ಹದಿನಾಲ್ಕು ಸಾವಿರ ಸಾಲುಗಳಿರುವ ಸಿರಿ ಪಾಡ್ದನದ ಮುಖ್ಯಗಾಯಕ ಅವರಾಗಿದ್ದಾರೆ. ಮಾತೃಭಾಷೆ ಮರಾಠಿಯಾಗಿದ್ದರೂ ನಿರರ್ಗಳವಾಗಿ ತುಳು ಭಾಷೆಯ, ಸಂಸ್ಕೃತಿಯ ಮಹಾಕಾವ್ಯದ ಗಾಯಕ ಅವರು.

ಒಂದು ಜಾತಿಯನ್ನು ನಿರ್ನಾಮ ಮಾಡಬೇಕಿದ್ದರೆ ಮೊದಲು ಆ ಜಾತಿಯ ಭಾಷೆಯನ್ನು ನಾಶ ಮಾಡಬೇಕು ಎಂಬ ಯೋಚನೆ ಮಾಡಿದ್ದು ನೆಪೋಲಿಯನ್. ಇಲ್ಲಿ ಮರಾಟಿಗರು ತಾವಾಗಿಯೇ ನಾಶ ಹೊಂದುತ್ತಿದ್ದಾರೆಯೇ ಎಂಬ ಊಹೆ ಮಾಡಬೇಕಾಗಿದೆ. ಕಾರಣ ಜಿಲ್ಲೆಯ ಬಹುತೇಕ ಮರಾಟಿಗರೆಲ್ಲರೂ ತಮ್ಮ ಮಾತೃಭಾಷೆಯಾದ ಮರಾಠಿಯನ್ನು ಮರೆಯುತ್ತಿದ್ದಾರೆ. ಯುವ ಪೀಳಿಗೆಯಲ್ಲಿ ಎಲ್ಲರೂ ತುಳು, ಕನ್ನಡ ಮಾತೃಭಾಷಿಕರೇ ಇರುವುದು. ಪಟ್ಟಣ ನಗರದಲ್ಲಿ ಉದ್ಯೋಗ ಹಾಗೂ ಇನ್ನಿತರ ಜೀವನಕ್ಕೆ ಹೋದವರು ಸಂಪೂರ್ಣವಾಗಿ ಮರಾಠಿ ಭಾಷೆಯ ಜೊತೆಗೆ ಸಮುದಾಯ ಆಚರಣೆಗಳನ್ನು ಮರೆತುಬಿಡುವ ಹಂತದಲ್ಲಿದ್ದಾರೆ. ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿಯೂ ಉಪಭಾಷೆ ಮರಾಟಿ ನಾಶದ ಅಂಚಿಗೆ ಬಂದು ತಲುಪಿರುವುದು ವಿಪರ್ಯಾಸ. ಅನನ್ಯತೆಯ ಸಂಕೇತಗಳಲ್ಲಿ ಒಂದಾದ ಭಾಷೆಯನ್ನು ದೂರೀಕರಿಸುವುದು ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲಿ ಕಂಡುಬರುತ್ತಿದೆ. ಮರಾಠಿ ಭಾಷೆಯ ಮೇಲೆ ತುಳು, ಕನ್ನಡ, ಮಲಯಾಳಂ ಭಾಷೆಗಳ ಪ್ರಭಾವವಾಗಿರುವುದನ್ನು ಕಾಣಬಹುದಾಗಿದೆ.

ಆರನೇ ಅಧ್ಯಾಯದಲ್ಲಿ ವರ್ತಮಾನದಲ್ಲಿ ಮರಾಟಿಗರ ಸ್ಥಿತಿಗತಿಯನ್ನು ಅವಲೋಕನ ಮಾಡಲಾಗಿದೆ. ಪ್ರಸ್ತುತ ಶಿಕ್ಷಣ, ಉದ್ಯೋಗ ಮೀಸಲಾತಿ, ರಾಜಕೀಯ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಪರಿವರ್ತನೆಯಾಗುವ ಹಂತದಲ್ಲಿದ್ದಾರೆ, ಮುಖ್ಯವಾಗಿ ಬುಡಕಟ್ಟುಗಳಿರುವ ಕೀಳರಿಮೆಯ ಪ್ರಜ್ಞೆ ಮರಾಟಿಗಳಲ್ಲಿಯೂ ಕಂಡುಬರುತ್ತಿದೆ. ಅವರ ಭಾಷೆಯ ಅವನತಿಗೆ ಇದೂ ಒಂದು ಕಾರಣವಾಗಿದೆ. ಇತ್ತೀಚೆಗೆ ಜಿಲ್ಲೆಯಾದ್ಯಂತ ಶಿಕ್ಷಣವನ್ನು ಪಡೆದು ಆರ್ಥಿಕವಾಗಿ ಅಭಿವೃದ್ಧಿಯತ್ತ ಹೆಜ್ಜೆ ಹಾಕುತ್ತಿದ್ದಾರೆ. ಅಭಿವೃದ್ಧಿಗೆ ಪೂರಕವಾಗುವಂಥ ಸಂಘಟನೆಗಳನ್ನು ಸ್ಥಾಪಿಸಿಕೊಂಡಿದ್ದಾರೆ. ರಾಜಕೀಯವಾಗಿ ಇನ್ನು ಮುಂದುವರೆಯಬೇಕಾಗಿದೆ. ಈ ಬುಡಕಟ್ಟು ಸಮುದಾಯದ ಸ್ಥಿತ್ಯಂತರಗಳನ್ನು ಶಿಕ್ಷಣ ಉದ್ಯೋಗ, ಆದಾಯ, ಉಳಿತಾಯಗಳ ಮೂಲಗಳ ಆಧಾರದಲ್ಲಿ ಕಂಡುಕೊಳ್ಳಬಹುದಾಗಿದೆ.

ಕೊನೆಯ ಅಧ್ಯಾಯ ಉಪಸಂಹಾರ. ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ನೀಡಿಲಾಗಿದೆ.

ಅನುಬಂಧದಲ್ಲಿ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂದರ್ಶಿಸಿದ ಮುಖ್ಯ ವಕ್ತೃಗಳ ವಿವರಗಳನ್ನು, ಗ್ರಂಥಋಣದಲ್ಲಿ ಅಧ್ಯಯನಕ್ಕೆ ಪೂರಕವಾದ ಆಕರ ಸಾಮಗ್ರಿಗಳನ್ನು ನೀಡಲಾಗಿದೆ. ಮರಾಟಿಗರ ಮರಾಠಿ ಉಪಭಾಷೆ, ತುಳು, ಕನ್ನಡದಲ್ಲಿರುವ ಸಾಂಸ್ಕೃತಿಕ ಪದಕೋಶಗಳನ್ನು ನೀಡಲಾಗಿದೆ. ವಾರ್ಷಿಕಾವರ್ತನ ಮತ್ತು ಜೀವನಾವರ್ತನ ಆಚರಣೆಗಳ ಕೆಲವು ಛಾಯಾಚಿತ್ರಗಳನ್ನು ಸಂಬಂಧಿಸಿದ ವಿಷಯಗಳಿಗೆ ತಕ್ಕಂತೆ ಮಹಾಪ್ರಬಂಧದಲ್ಲಿ ನೀಡಲಾಗಿದೆ.

ಬುಡಕಟ್ಟುಸಮುದಾಯಕ್ಕೆ ಸೇರಿದ ಮರಾಟಿಗರ ಜಾನಪದೀಯ ಬದುಕನ್ನು ಕುರಿತ ಅಧ್ಯಯನ ಇದಾಗಿದ್ದು ಒಟ್ಟು ಏಳು ಅಧ್ಯಾಯಗಳಲ್ಲಿ ಕೊಡಲು ಪ್ರಯತ್ನಿಸಲಾಗಿದೆ. ಈ ಅಧ್ಯಯನದಲ್ಲಿ ನನ್ನ ಗಮನಕ್ಕೆ ಬಾರದ ಹಾಗೂ ವ್ಯಕ್ತಪಡಿಸಲಾಗದ ಅನೇಕ ವಿಷಯಗಳು ಇನ್ನೂ ಇವೆ. ಇದೇ ಸಮುದಾಯವನ್ನು ಕುರಿತ ಮುಂದಿನ ಸಂಶೋಧನೆಗಳಿಗೆ, ಅಧ್ಯಯನಗಳಿಗೆ ಇದು ಸಹಕಾರಿಯಾಗಬಲ್ಲದೆಂಬ ಅಪೇಕ್ಷೆ ಈ ಅಧ್ಯಯನಕ್ಕಿದೆ.

ಅಧ್ಯಯನದ ಫಲಿತಗಳು

೦೧. ಮರಾಟಿಗರು 'ಬುಡಕಟ್ಟು ಸಮುದಾಯ' ಎಂಬುದಕ್ಕೆ ಅವರ ವೃತ್ತಿಗಳಾದ ಕುಮೇರಿ ಬೇಸಾಯ, ಕಾಡುತ್ಪತ್ತಿ ಸಂಗ್ರಹಣೆ, ಹಬ್ಬ ಹರಿದಿನಗಳು ಆಚರಣೆಗಳಲ್ಲಿ ಕಂಡುಬರುವ ಮಧ್ಯ ಮಾಂಸಹಾರ ಮತ್ತು ಬಲಿ ಪದ್ಧತಿಗಳು ಸಾಕ್ಷಿಗಳಾಗಿವೆ.

೦೨. ಮರಾಟಿಗರು ಮೂಲತಃ ಇಂದಿನ ಮಹಾರಾಷ್ಟ್ರ ರಾಜ್ಯದಿಂದ ವಲಸೆ ಬಂದವರು. ಉಪಭಾಷೆ ಮರಾಠಿ ಮತ್ತು ಸಂಪ್ರದಾಯಾಚರಣೆಗಳು ಅದಕ್ಕೆ ಪುಷ್ಟಿ ನೀಡುತ್ತವೆ.

೦೩. ಜಿಲ್ಲೆಯ ಗ್ರಾಮೀಣ ಪ್ರದೇಶಗಳಲ್ಲಿ ಮರಾಠಿ ಭಾಷೆಯನ್ನೇ ಬಳಸುತ್ತಿದ್ದಾರೆ.

೦೪. ಮರಾಠಿ ಭಾಷೆ, ಗೋಂದೋಳು ಪೂಜೆ, ಭೈರವ ಪೂಜೆ ಗುಮ್ಮಟೆ ಕುಣಿತ, ಬಾಲೆ ಸಾಂತು ಕುಣಿತಗಳು ಮರಾಟಿಗರ ಸಾಂಸ್ಕೃತಿಕ ಅನನ್ಯತೆಯ ಸಂಕೇತಗಳಾಗಿವೆ.

೦೫. ಕಾಸರಗೋಡು ಪ್ರದೇಶದಲ್ಲಿ ವಾಸವಾಗಿರುವ ಕರ್ಹಾಡ ಬ್ರಾಹ್ಮಣರು ಮೂಲತಃ ಮಹಾರಾಷ್ಟ್ರದಿಂದ ವಲಸೆ ಬಂದವರೆಂದು ಸಂಶೋಧನೆಯಿಂದ ದೃಢಪಟ್ಟಿದೆ. ಕರಾಡ ಬ್ರಾಹ್ಮಣರು ಮರಾಟಿಗರಿಗೆ ಪುರೋಹಿತರಾಗಿರುವುದರಿಂದ ಮರಾಟಿಗರೂ ಕೂಡ ಮಹಾರಾಷ್ಟ್ರದಿಂದ ಬಂದವರೆಂದು ಖಚಿತವಾಗಿ ಹೇಳಬಹುದಾಗಿದೆ.

೦೬. ಬುಡಕಟ್ಟುಗಳು ಯಾವುದೇ ನಿರ್ದಿಷ್ಟವಾದ ವೃತ್ತಿಯನ್ನು ಹೊಂದಿದವರಲ್ಲ. ಮಾರಾಟಿ ಬುಡಕಟ್ಟು ಕೂಡ ಯಾವುದೇ ವೃತ್ತಿಯನ್ನು ಹೊಂದದೇ ಎಲ್ಲಾ ರೀತಿಯ ವೃತ್ತಿಗಲ್ಲಿ ತಮ್ಮನ್ನು ತೊಡಗಿಸಿಕೊಂಡವರಾಗಿದ್ದಾರೆ.

೦೭. ಮರಾಟಿಗರ ಗೋಂದೋಳು, ಭೈರವ ಆರಾಧನೆಗಳು ಕೃಷಿಗೆ ಸಂಬಂಧಿಸಿದ ಜನಪದೀಯ ಆಚರಣೆಗಳಾಗಿವೆ.

೦೮. ಭೈರವನು ಓರ್ವ ಜನಪದ ದೈವ, ಆತ ಶೈವಾರಾಧನೆಯ ಪ್ರಾಕ್ ರೂಪ. ಭೈರವಾರಾಧನೆಯಿಂದ ದುಷ್ಟಶಕ್ತಿಗಳ ನಿಗ್ರಹ ಮತ್ತು ಸಂಮೃದ್ಧಿಯ ಪರಿಕಲ್ಪನೆಯ ಆಶಯವಿದೆ.

೦೯. ದಕ್ಷಿ ಕನ್ನಡ ಜಿಲ್ಲೆಯ ಮರಾಟಿಗರಿಗೆ ಕೊಡಗು, ಕಾಸರಗೋಡು ಉಡುಪಿ ಜಿಲ್ಲೆಗಳು ಮರಾಟಿ ಸಮುದಾಯದ ಕುಟುಂಬಗಳ ನಡುವೆ ಆಂತರಿಕ ಹಾಗೂ ಬಾಹ್ಯ ಸಂಬಂಧವಿದೆ.

೧೦. ಮರಾಟಿಗರಿಗೂ ಉತ್ತರ ಕರ್ನಾಟಕದಲ್ಲಿರುವ ಗೊಂದಲಿಗರಿಗೂ ಯಾವುದೇ ಸಂಬಂಧವಿಲ್ಲ.

೧೧. ಸದಾ ಪರಿವರ್ತನೆಗೆ ಮುಖ ಮಾಡಿರುವ ಮರಾಟಿಗರು ವಲಸೆ ಹೋದ ಪರಿಸರಕ್ಕೆ ಹೊಂದಿಕೊಳ್ಳುವವರಾಗಿದ್ದಾರೆ. ಆದಾಗ್ಯೂ ತಮ್ಮ ಸಾಂಸ್ಕೃತಿಕ ಅನನ್ಯತೆಗಳನ್ನು ಉಳಿಸಿಕೊಂಡೇ ಬಂದಿದ್ದಾರೆ.

೧೨. ಮೀಸಲಾತಿ ಸೌಲಭ್ಯವಿದ್ದರೂ ಅದು ಶೇ ೩ ಕ್ಕಿಂತ ಹೆಚ್ಚಾಗಬೇಕಿದೆ. ಕರ್ನಾಟದ ಬುಡಕಟ್ಟುಗಳ ಸಂಖ್ಯೆ ಬೆರಳೆಣಿಕೆಯಿಂದ ಸುಮಾರು ೫೦ ರವರೆಗೆ ಆಗಿರುವುದರಿಂದ ಮೀಸಲಾತಿ ಶೇಕಡವನ್ನು ಹೆಚ್ಚಿಸುವಲ್ಲಿ ಸರ್ಕಾರ ಮುತುವರ್ಜಿ ವಹಿಸಬೇಕಾಗಿದೆ. ೨೦೦೧ರ ಜನಗಣತಿ ಪ್ರಕಾರ ೧೯೯೧ರ ಜನಗಣತಿಗೆ ಹೋಲಿಸಿದಾಗ ಬುಡಕಟ್ಟು ಜನಸಂಖ್ಯೆಯಲ್ಲಿ ೮೦.೨೧ ಶೇ ಏರಿಕೆಯಾಗಿದೆ.

೧೩. ಜಿಲ್ಲೆಯಲ್ಲಿರುವ ಲ್ಯಾಂಪ್ಸ್ ಸೊಸೈಟಿಗಳ ಕಾರ್ಯನಿರ್ವಹಣೆಯಲ್ಲಿ ಪಾರದರ್ಶಕತೆ ಇಲ್ಲ. ಲಾಭಾಂಶಗಳೆಲ್ಲಾ ಮರಾಟಿ, ಮಲೆಕುಡಿಯರಿಗಿಲ್ಲದೆ ಇತರ ಸಮುದಾಯದ ಧನಿಕ ಪಾಲಾಗುತ್ತಿವೆ.

೧೪. ಜಿಲ್ಲೆಯ ಬಹು ಸಂಖ್ಯಾತ ಮರಾಟಿಗರು ಮಧ್ಯಮ ವರ್ಗ ಅಥವಾ ಅತೀ ಸಣ್ಣ ಕೃಷಿಕರಾಗಿದ್ದಾರೆ. ಅಥವಾ ಕೂಲಿಕಾರರಾಗಿದ್ದಾರೆ.

೧೫. ಬುಡಕಟ್ಟು ಜನರಿಗಾಗಿರುವ ಸಂಚಾರಿ ಆರೋಗ್ಯ ಘಟಕಗಳು ಸಮರ್ಪಕವಾಗಿ ಕಾರ್ಯನಿರ್ವಹಿಸುತ್ತಿಲ್ಲ.

೧೬. ಮರಾಟಿಗರಲ್ಲಿರುವ ಬಳಿಗಳ ಸಂಖ್ಯೆಯ ವಿಚಾರದಲ್ಲಿ ಸರ್ವಸಮ್ಮತವಾದ ಅಭಿಪ್ರಾಯವಿಲ್ಲ ಬಳಿಗಳ ಸಂಖ್ಯೆ ಊರಿಂದೂರಿಗೆ ಬದಲಾಗುತ್ತಾ ಹೋಗುವುದು ಕಂಡುಬರುತ್ತಿದೆ.

* * * * *

# ದಕ್ಷಿಣ ಕನ್ನಡ ಜಿಲ್ಲೆ



## ಸಾಂಸ್ಕೃತಿಕ ಪದಕೋಶ

ಅಟ್ಟ - ಮನೆಯ ಅಂತಸ್ತು, ಮಹಡಿ

ಈಡು - ಗುಂಡು, ಕೋವಿಗೆ ತುಂಬುವ ಮದ್ದುಗುಂಡು

ಎಡೆ - ದೈವಗಳಿಗೆ ಊಟ ಹಾಕುವುದು, ನೈವೇದ್ಯ ಬಡಿಸುವುದು

ಒಂಟಿ - ಗಂಡಸರು ಧರಿಸುವ ಒಂದು ಬಗೆಯ ಕಿವಿಯಾಭರಣ

ಓಕುಳಿ- ಮೈಮೇಲೆ ಎರಚುವ ಬಣ್ಣದ ನೀರು

ಕುಮೇರಿ (ಕುಂಬ್ರಿ) -ಗುಡ್ಡಗಳ ಬದಿಯಲ್ಲಿ ಏರು ತಗ್ಗಾಗಿರುವ ಹಿತ್ತಲು ಪ್ರದೇಶ

ಕೆತ್ತೆ ಹುಳಿ - ಒಂದು ಜಾತಿಯ ಮರದ ಹುಳಿ

ಕೆಸ (ಕೆಸುವು) - ಮಲೆನಾಡು ಮತ್ತು ಕರಾವಳಿ ಪ್ರದೇಶದಲ್ಲಿ ಬೆಳೆಯುವ ತರಕಾರಿ ಸಸ್ಯ.

ಗಾಳ - ಕೈಯಲ್ಲಿ ಹಿಡಿದು ಹಾಕುವ ಗಾಳ

ಕೊಟ್ಟಿಗೆ - ಸಣ್ಣ ಹಟ್ಟಿ, ಸೌದೆ ಸಂಗ್ರಹಿಸಿಡಲು ಮತ್ತು ಕರುಗಳನ್ನು ಕಟ್ಟಲು ಕೊಟ್ಟಿಗೆ ಸಹಕಾರಿ.

ಜಗಲಿ - ಕಟ್ಟೆ, ವೇದಿಕ

ಟಿಕ್ಕಿ - ಒಂದು ಬಗೆಯ ಕರ್ಣಾಭರಣ

ದೊಂದಿ - ಉರಿಯುವ ಕೊಳ್ಳಿ, ಪಂಜು

ಕಜಂಬು - ಗಂಡು ಮಕ್ಕಳಿಗೆ ಮುಖ ಕ್ಷೌರ ಮಾಡುವ ಆಚರಣೆ

ಗುರಿಕಾರ - ಸಮಾಜದ ಮುಖಂಡ

ಸೇಸೆ (ದೇಸೆ) - ಆಶೀರ್ವಾದ ಸೂಚಕವಾಗಿ ತಳಿಯುವ ಅಕ್ಕಿ ಕಾಳು.

ಕರ ಪತ್ತಪುಸಿ - ಮಣ್ಣಿನ ಮಡಕೆಯನ್ನು ಕೈಯಲ್ಲಿ ಹಿಡಿಸುವುದು.

ಮಂಡಲ - ದೇವರ ಕಲಶ ಸ್ಥಾಪಿಸಲು ಚೌಕಾಕಾರದಲ್ಲಿ ರಂಗೋಲಿ

ಮದಿಮೆ - ಮದುವೆ

ಕಂಚಿ ದೀಪಿನಿ - ಉಡುಗೊರೆ ನೀಡಲು ಕಂಚಿನ ಬಟ್ಟಲಿಡುವುದು.

ದರ್ಶನ - ದೈವದ ಆದೇಶ

ಬಯಕೆ - ಸೀಮಂತ

ಬಯಕೆ ಬಳಸಿನಿ - ಬಯಕೆ ಬಡಿಸುವುದು

ಕೊದಿ - ದೃಷ್ಟಿ ಬೀಳುವುದು

ಚೇರೆದ ಕತ್ತೆ (ತೇರೆದ ಕತ್ತೆ) - ಒಂದು ಜಾತಿಯ ಮರದ ತೊಗಟೆ

ಬಜಿಲ್ - ಅವಲಕ್ಕಿ

ಕಾಲೆ - ಪ್ರಾಣವಾಯು

ಶುದ್ಧ (ಸುದ್ಧ) - ತೀರಿಕೊಂಡವರಿಗೆ ಮಾಡುವ ಅಪರ ಕ್ರಿಯೆಯ ಒಂದು ವಿಧಾನ

ಏಣೆಲ್/ಕಾರ್ತಿ - ಮಳೆಗಾಲದಲ್ಲಿ ಬೆಳೆಯುವ ಭತ್ತದ ಬೆಳೆ

ಸುಗ್ಗಿ - ಚಳಿಗಾಲದಲ್ಲಿ ಬೆಳೆಯುವ ಭತ್ತದ ಬೆಳೆ

ಕೊಳಕೆ - ಬೇಸಿಗೆ ಕಾಲದ ಭತ್ತದ ಬೆಳೆ

ಪನೆ - ಏತ

ಬೆರ್ಮರ - ಏತಕ್ಕೆ ಉಪಯೋಗಿಸುವ ಉದ್ದನೆಯ ಅಡ್ಡಮರ

ಮರಾಯಿ - ನೀರು ಮೊಗೆಯಲು ಉಪಯೋಗಿಸುವ ಮರಿಗೆ

ಮುಟ್ಟಾಳೆ - ಅಡಿಕೆ ಮರದ ಹಾಳೆಯ ಟೋಪಿ

ಆಗೆಲ್ - ದೈವಗಳಿಗೆ ಬಡಿಸುವುದು

ದರ್ಶನ ಪಾತ್ರಿ - ದೈವದ ಆವೇಶದ ಪಾತ್ರಿ

ಚೆನ್ನಮಣೆ - ತುಳುನಾಡಿನ ಒಂದು ಆಟದ ಮಣೆ

ಚೆನ್ನೆಕಾಯಿ - ಚೆನ್ನೆ ಆಡಲು ಉಪಯೋಗಿಸುವ ಕಾಯಿ

ಆಟಿ ಕುಲ್ಲುಸಿ - ಆಟಿ ತಿಂಗಳಲ್ಲಿ ಮದುವೆಯಾದ ಹೆಣ್ಣು ತವರಿಗೆ ಬಂದಿರುವುದು (ಆಷಾಡಮಾಸ)

ಕುರಲ್ ಪರ್ಬ - ಕದಿರು ಹಬ್ಬ

ಇಲ್ಲೇ ದಿಂಜಾವುನಿ - ಮನೆ ತುಂಬಿಸುವುದು

ಅಮೆ - ಹೆತ್ತ ಸೂತಕ ಕಳೆಯುವ ದಿನದ ಆಚರಣೆ

ಪಾಂದೌಳು - ತೆಂಗಿನ ಗರಿಯ ನಾರು

ಅಂಬಡೆ - ಅಮಟೆ ಕಾಯಿ

ಪುದ್ವಾರ್ (ಪುದ್ದಾರ್) - ಹೊಸ ಊಟ ದಿನಾಚರಣೆ

ಪೊಲಿಮಣೆ - ನೆಲ ಸಮತಟ್ಟು ಮಾಡುವ ಮರದ ದಪ್ಪನೆಯ ಮಣೆ

ಮಣ್ಣಿ - ಅಕ್ಕಿ ಅರೆದು ಕಾಯಿ ಬೆಲ್ಲ ಸೇರಿಸಿ ತಯಾರಿಸಿದ ತಿಂಡಿ

ಕುಲೆ - ಸತ್ತವರ ರೂಪಾಂತರ:ಪ್ರೇತ

ತುಡಾರ್ ತೋಜಾವುನಿ - ದೀಪ ಬೆಳಗುವುದು, ಆರತಿ ಮಾಡುವುದು.

ತಪ್ಪಂಗಾಯಿ - ತೆಂಗಿನ ಕಾಯಿ ಆಟ

ಕೆಡ್ಡಸ - ತುಳುನಾಡಿನ ಒಂದು ಹಬ್ಬ

ಪತ್ತನಾಜೆ - ತುಳುನಾಡಿನಲ್ಲಿ ಆಚರಣೆಯಲ್ಲಿರುವ ಹಬ್ಬ

ನಾಯಿಕರುಂಬು - ಒಂದು ಜಾತಿ ಗಿಡ (ನಾಯಿ ಸೊನಂಗ್ Mucuna pruriens)

ಕೇಪುಳ ಹೂ - ಕಿಸ್ಕರ ಹೂವು.

ಕೊರಂಬಿಲ್ - ಮಲೆನಾಡಿನ ಒಂದು ಸಸ್ಯ (Securinega leucopyres)

ದಡ್ಡಲ - ಕಾವಲು ಮರ

ಪೇರಳೆ - ಸೀಬೆ

ಬಂದನಾರು - ಒಂದು ಜಾತಿ ಮರ

ಚೆನ್ನೆರೆ ಬಳ್ಳಿ - ಚೆನ್ನೆಬೂರು (Smilax Zeyanica)

ಅರಿಕೆ - ವಿನಂತಿ, ಭಿನ್ನಹ.

* * * * *

## ವಕ್ತೃ ಮಾಹಿತಿ

೦೧. ಅಣ್ಣು ನಾಯ್ಕ ಮಲಾರ್‌ಕೋಡಿ (೬೮ ವ)

ಸಾಲೆತ್ತೂರು, ಬಂಟ್ವಾಳ ತಾಲೂಕು.

೦೨. ಈಶ್ವರ ನಾಯ್ಕ (೬೦ ವರ್ಷ)

ಬೆಳ್ತಂಗಡಿ, ತಾಲೂಕು

೦೩. ಉಷಾ.ಬಿ.(೩೦ ವರ್ಷ)

ನೆಹರೂ ನಗರ, ಪುತ್ತೂರು.

೦೪. ಊವಪ್ಪ ನಾಯ್ಕ (೬೬ ವರ್ಷ)

ಬಾಬುಮೂಲೆ ಮನೆ, ಬಂಟ್ವಾಳ ತಾಲೂಕು

೦೫. ಐತಪ್ಪ ನಾಯ್ಕ (೬೫ ವರ್ಷ)

ದೇರಳ ಕಟ್ಟೆ, ಬಂಟ್ವಾಳ.

೦೬. ಐತಪ್ಪ ನಾಯ್ಕ.ಬಿ (೫೨ ವರ್ಷ)

ರಾಷ್ಟ್ರಪ್ರಶಸ್ತಿ ಪುರಸ್ಕೃತ ಶಿಕ್ಷಕರು, ನೆಹರೂ ನಗರ, ಪುತ್ತೂರು.

೦೭. ಕಮಲ ಹೆಂಗ್ಸು (೨೦ ವರ್ಷ)

ಪಡ್ನೂರು, ಪುತ್ತೂರು ತಾಲೂಕು ತಾ.

೦೮. ಕೊರಗ ನಾಯ್ಕ (೬೨ ವರ್ಷ)

ಕಟ್ಟೆಮನೆ ಪುತ್ತೂರು.

೦೯. ಕೃಷ್ಣನಾಯ್ಕ.ಎ (೬೫ ವ)

ಅಡ್ಯನಡ್ಕ, ಬಂಟ್ವಾಳ ತಾಲೂಕು.

೧೦. ಕೃಷ್ಣ ನಾಯ್ಕ (೬೦ ವರ್ಷ)

ಸುಳ್ಯ.

೧೧. ಕೃಷ್ಣನಾಯ್ಕ (೫೪ ವರ್ಷ)

ಬಪ್ಪಳಿಗೆ ಪುತ್ತೂರು

೧೨. ಕೃಷ್ಣನಾಯ್ಕ (೪೪ ವ)

ಚಂದ್ರಗಿರಿ, ಪಾಣಾಜೆ, ಪುತ್ತೂರು ತಾಲೂಕು.

೧೩. ಗಿರಿಯಪ್ಪ ನಾಯ್ಕ (೫೦ ವರ್ಷ)

ಕೊಪ್ಪಳ ಮನೆ ನೆಕ್ಕಿಲಾಡಿ, ಪುತ್ತೂರು

೧೪. ಗೋಪಾಲ ನಾಯ್ಕ (೨೦ ವರ್ಷ)

ಮಾಚಾರು ಮನೆ ಬೆಳ್ತಂಗಡಿ ತಾಲೂಕು

೧೫. ಚಂದ್ರಶೇಖರ (೩೫ ವರ್ಷ), ಕರೋಪಾಡಿ

ಬಂಟ್ವಾಳ ತಾ.

೧೬. ಚೋಮನಾಯ್ಕ

ಪಂಜಿಗುಡ್ಡೆ, ಪಡ್ನೂರು, ಪುತ್ತೂರು ತಾಲೂಕು.

೧೭. ಜಾನಕಿ (೩೮ ವರ್ಷ)

ನಿಡ್ಯಮಲೆ, ಮಡಿಕೇರಿ

೧೮. ಡೊಂಬ ನ್ಯಾಕ (೮೦ ವ)

ಮಾಪಲ ಮನೆ, ಬೆಳ್ತಂಗಡಿ.

೧೯. ತಿಮ್ಮಪ್ಪ ಗೌಡ (೬೦ ವರ್ಷ)

ಕಲ್ಲಗದ್ದೆ, ಸುಳ್ಯ

೨೦. ದಾಮೋದರ ನಾಯ್ಕ (೪೫ ವರ್ಷ)

ನಿಡ್ಯಮಲೆ, ಮಡಿಕೇರಿ ತಾಲೂಕು

೨೧. ದಾಮೋದರ ಮಂಚಿ (೪೨ ವರ್ಷ)

ಸುಳ್ಯ, ಸುಳ್ಯ ತಾಲೂಕು.

೨೨. ದೇವಕಿ (೯೩ ವರ್ಷ) (ಜಾನಪದ ವೈದ್ಯೆ)

ನೆಹರು ನಗರ, ಪುತ್ತೂರು

೨೩. ದೇವಕಿ (೩೮ ವರ್ಷ)

ನಿಡ್ಯಮಲೆ, ಮಡಿಕೇರಿ

೨೪. ದೇವಕಿ (೬೦ ವರ್ಷ)

ಬಾಬುಮೂಲೆ, ಮನೆ ಬಂಟ್ವಾಳ ತಾಲೂಕು

೨೫. ದೇವಣ್ಣ ನಾಯ್ಕ (೩೦ ವ)

ಅಡ್ಯನಡ್ಕ, ಕಾಸರಗೋಡು ತಾಲೂಕು.

೨೬. ದೇವಯ್ಯ ನಾಯ್ಕ (೮೦ ವರ್ಷ)

ಮೂಡಂಬೈಲ್, ಬಂಟ್ವಾಳ

೨೭. ನಾರಾಯಣ ನಾಯ್ಕ (೫೮ ವರ್ಷ)

ಕಾರ್ಕಳ ತಾಲೂಕು (ಉಡುಪಿ ಜಿಲ್ಲೆ)

೨೮. ನಾರಾಯಣ ನಾಯ್ಕ (೫೩ ವ)

ಎಣ್ಮಕಜೆ ಕಾಸರಗೋಡು ತಾಲೂಕು (ಕೇರಳ)

೨೯. ನಾರಾಯಣ ನಾಯ್ಕ (೨೫ ವರ್ಷ)

ಉಪ್ಪಿನಂಗಡಿ, ಪುತ್ತೂರು

೩೦. ನಾರಾಯಣ ನಾಯ್ಕ (೫೬ ವ)

ಸಾಲೆತ್ತೂರು, ಬಂಟ್ವಾಳ ತಾಲೂಕು

೩೧. ನಾರ್ಣಪ್ಪ ನಾಯ್ಕ (೫೪ ವ)

ಸರ್ವೆ, ಪುತ್ತೂರು ತಾಲೂಕು.

೩೨. ನೀಲಮ್ಮ (೬೮ ವ)

ಬೆಳ್ತಂಗಡಿ, ತಾಲೂಕು.

೩೩. ಪಕೀರ ನಾಯ್ಕ (ನಿವೃತ್ತ ಮುಖ್ಯೋಪಾಧ್ಯಾಯರು)

ಕೈಕಾರ, ಪುತ್ತೂರು

೩೪. ಪರಮೇಶ್ವರ ನಾಯ್ಕ (೫೦ ವರ್ಷ)

ನಿಡ್ಯಮಲೆ, ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ.

೩೫. ಪದ್ಮಯ್ಯ ನಾಯ್ಕ (೫೦ ವ)

ಸರ್ವೆ, ಪುತ್ತೂರು ತಾಲೂಕು.

೩೬. ಪುರಂದರ ಎಸ್ (೩೫ ವರ್ಷ)

ಶಾಂತಿಮೂಲೆ, ಐವರ್ನಾಡು, ಸುಳ್ಯ

೩೭. ಪುಷ್ಪಾವತಿ (೫೬ ವ)
ಐವರ್ನಾಡು, ಸುಳ್ಯ ತಾಲೂಕು.

೩೮. ಪೂವಪ್ಪ ನಾಯ್ಕ (೨೮ ವ)
ಅಡ್ಯನಡ್ಕ, ಬಂಟ್ವಾಳ ತಾಲೂಕು.

೩೯. ಬಾಬು ನಾಯ್ಕ (೯೦ ವ)
ಅಡ್ಯನಡ್ಕ, ಬಂಟ್ವಾಳ ತಾಲೂಕು.

೪೦. ಮನೋರಮ (೩೫ ವರ್ಷ)
ಕೋಡಿಂಬಾಡಿ, ಪುತ್ತೂರು.

೪೧. ಮೊನಪ್ಪ ನಾಯ್ಕ (೪೦ ವರ್ಷ)
ಮಂಗಳೂರು.

೪೨. ಯತೀಂದ್ರ ಎಸ್ (೩೪ ವರ್ಷ)
ಶಾಂತಿಮೂಲೆ, ಐವರ್ನಾಡು, ಸುಳ್ಯ

೪೩. ರಾಮಕೃಷ್ಣ ನಾಯ್ಕ ಪಿ. (೬೧ ವ)
ಕಯ್ಯಾರ, ಕಾಸಗೋಡು.

೪೪. ರಾಮಚಂದ್ರ (೪೦ ವರ್ಷ)
ಮಾಣಿ, ಬಂಟ್ವಾಳ ತಾ.

೪೫. ರಾಮ ನಾಯ್ಕ (೪೩ ವರ್ಷ)
ಕೊಡಿಪ್ಪಾಡಿ ಪುತ್ತೂರು.

೪೬. ರಾಮ ನಾಯ್ಕ (೪೮ ವ)
ಎಣ್ಮಕಜೆ ಕಾಸರಗೋಡು, ತಾಲೂಕು (ಕೇರಳ)

೪೭. ರಾಮಣ್ಣ ನಾಯ್ಕ (೬೪ ವ)
ಐವರ್ನಾಡು, ಸುಳ್ಯ ತಾಲೂಕು.

೪೮. ರಾಮಣ್ಣ ನಾಯ್ಕ (೨೨ ವರ್ಷ)
ಪೆರ್ನೋಡಿ, ಪುತ್ತೂರು ತಾಲೂಕು.

೪೯. ಲಕ್ಷ್ಮಣ ನಾಯ್ಕ (೬೦ ವ)
ಶಾಂತಿಮೂಲೆ, ಐವರ್ನಾಡು, ಸುಳ್ಯ ತಾಲೂಕು.

೫೦. ವಸಂತಕುಮಾರ್ (೩೦ ವರ್ಷ)
ಉತ್ತರ ಬೀರಮಂಗಲ ಮನೆ, ಸುಳ್ಯ ಕಟ್ಟಾಗ್ರಾಮ, ಸುಳ್ಯ ತಾಲೂಕು.

೫೧. ವಾಸುನಾಯ್ಕ (೨೬ ವರ್ಷ)

ಮುಂಡಾಜೆ, ಪುತ್ತೂರು ತಾಲೂಕು.

೫೨. ವೆಂಕಪ್ಪ ನಾಯ್ಕ (೬೫ ವ)

ಕೋಡಿಂಬಾಡಿ ಪುತ್ತೂರು, ತಾಲೂಕು.

೫೩. ವಿಶ್ವನಾಥ (೩೮ ವರ್ಷ)

ಜೊಕಟ್ಟೆ, ಮಂಗಳೂರು ತಾಲೂಕು.

೫೪. ವೀರಪ್ಪ ನಾಯ್ಕ (೪೫ ವರ್ಷ)

ಕೋಡಿಂಬಾಡಿ, ಪುತ್ತೂರು.

೫೫. ಶಂಕರಿ (೭೦ ವರ್ಷ)

ಮೂಡಂಬೈಲ್, ಬಂಟ್ವಾಳ

೫೬. ಶಿವಮ್ಮ (೫೮ ವರ್ಷ)

ಗೃಹಿಣಿ, ಕೈಕಾರ - ಪುತ್ತೂರು

೫೭. ಶ್ರೀಧರ (೩೫ ವರ್ಷ)

ಕಾಸರಗೋಡು

೫೮. ಶೇಷಪ್ಪ ನಾಯ್ಕ (೫೫ ವ)

ಐವರ್ನಾಡು, ಸುಳ್ಯ ತಾಲೂಕು.

೫೯. ಡಾ ಸದಾಶಿವ ಭಟ್, (ವಿದ್ವಾನ್) (೭೨ ವರ್ಷ)

ನಿಡ್ಪಳ್ಳಿ, ಪುತ್ತೂರು ತಾಲೂಕು.

೬೦. ಸರಸ್ವತಿ (೫೮ ವರ್ಷ)

ಬಾಬುಮೂಲೆ, ಅಡ್ಯನಡ್ಕ ಬಂಟ್ವಾಳ

೬೧. ಸರಸ್ವತಿ (೫೪ ವರ್ಷ)

ಬಪ್ಪಳಿಗೆ ಪುತ್ತೂರು

೬೨. ಸಾಂತಪ್ಪ ನಾಯ್ಕ (೪೦ ವರ್ಷ)

ಬೆಳಾಲು ಬೆಳ್ತಂಗಡಿ ತಾಲೂಕು.

೬೩. ಸೀತಾರಾಮ ಬಿ. ಎಸ್. (೩೫ ವರ್ಷ)

ಬೆಳಾಲು ಮನೆ, ಬೆಳ್ತಂಗಡಿ ತಾಲೂಕು.

೬೪. ಸುಂದರ ನಿಡ್ಯಮಲೆ (೩೫ವರ್ಷ)

ವಿದ್ಯಮಲೆ, ಮಡಿಕೇರಿ

೬೫. ಸುವೀತ (೪೦ ವರ್ಷ)

ಕೋಡಿಂಬಾಡಿ, ಪುತ್ತೂರು

೬೬. ಸುಬ್ಬನಾಯ್ಕ (೬೧ ವರ್ಷ) (ಮಾಜಿ ಶಾಸಕರು)

ಜಟ್ಟಿಪಳ್ಳ ಸುಳ್ಯ.

೬೭. ಸುಬ್ರಹ್ಮಣ್ಯ ನಾಯ್ಕ ಕೆ. (೪೩ ವರ್ಷ)

ಬದಿಯಡ್ಕ, ಕಾಸಗೋಡು.

೬೮. ಸುಬ್ರಮಣ್ಯ ಭಟ್ಟ (೩೩ ವರ್ಷ)

ಕರ್ಾಡ ಬ್ರಾಹ್ಮಣರು, ಪುರೋಹಿತರು, ಪಳ್ಳು ಪುತ್ತೂರು.

* * * * *

## ಪರಾಮರ್ಶನ ಗ್ರಂಥಗಳು


೦೧. ಅಭಯ ಕುಮಾರ್ ಕೌಕ್ರಾಡಿ, ೧೯೯೭, 'ಮುಗೇರರು-ಜನಾಂಗ ಜಾನಪದ ಅಧ್ಯಯನ' ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಮತ್ತು ತುಳು ಸಾಹಿತ್ಯ ಅಕಾಡೆಮಿ ಬೆಂಗಳೂರು.

೦೨. ಅಮೃತ ಸೋಮೇಶ್ವರ (ಸಂ) ೧೯೯೭, 'ತುಳು ಪಾಡ್ದನ ಸಂಪುಟ' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

೦೩. ಅಂಬಳಿಕೆ ಹಿರಿಯಣ್ಣ ೧೯೯೨ 'ಸೈದ್ಧಾಂತಿಕ ಜಾನಪದ', ಪ್ರಜ್ವಲ ಪ್ರಕಾಶನ ಮೈಸೂರು

೦೪. ಆನಂದಮೂರ್ತಿ ಜಿ.ವಿ. (ಸಂ) ೨೦೦೦, 'ಗಂಧರ್ವಲೋಕದ ಗೆಣೆಕಾರರು' ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೦೫. ಇಂದಿರಾ ಹೆಗ್ಗಡೆ ೨೦೦೪ 'ಬಂಟರು ಒಂದು ಸಮಾಜೋ-ಸಾಂಸ್ಕೃತಿಕ ಅಧ್ಯಯನ' ಪುಸ್ತಕ ಪ್ರಾಧಿಕಾರ ಬೆಂಗಳೂರು.

೦೬. ಉಪಾಧ್ಯಾಯ ಯು.ಪಿ (ಡಾ) ಸಂ, ೧೯೯೫ 'ತುಳು ನಿಘಂಟು' ಸಂ ೩ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ ಉಡುಪಿ.

೦೭. ಉಪ್ಪಂಗಳ ರಾಮಭಟ್ಟ ೧೯೯೪, 'ಗಡಿನಾಡು ಕಾಸರಗೋಡು' ಅಕಲಂಕ ಪ್ರಕಾಶನ ಉಡುಪಿ.

೦೮. ಕಲಬುರ್ಗಿ ಎಂ.ಎಂ. (ಸಂ) ೧೯೯೪, 'ಕರ್ನಾಟಕದ ಕೈಪಿಯತ್ತುಗಳು' ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ.

೦೯. ಗುರುರಾಜ ಭಟ್ ಪಿ. ೧೯೬೩, 'ತುಳುನಾಡು (ಸಾಮಾಜಿಕ ಚರಿತ್ರೆಯಲ್ಲಿ ಒಂದು ಸಂಶೋಧನಾತ್ಮಕ ವಿವೇಚನೆ) ಲಕ್ಷ್ಮಿನಾರಾಯಣ ಭಟ್ಟ ಉಡುಪಿ.

೧೦. ಕಮಲಾಕ್ಷ. ಪಿ. ೧೯೯೪ 'ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ' ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು

೧೧. ಕ್ಯಾತನಹಳ್ಳಿ ರಾಮಣ್ಣ ೧೯೮೨, ''ಗೊಂದಲಿಗರು: ಒಂದು ಅಧ್ಯಯನ' ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ.

೧೨. ಗಣಪತಿ ರಾವ್ ಐಗಳ ಮಂಜೇಶ್ವರ (೧೯೨೩) ೨೦೦೪, 'ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ' ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ ಉಡುಪಿ.

೧೩. ಗೋವಿಂದ ರಾಜು ಟಿ. (ಸಂ) ೨೦೦೩ 'ಜನಪದ ವೈದ್ಯ' ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ

೧೪. ಚೆನ್ನಬಸಪ್ಪ ಗೊ.ರು. ಸಂ. ೧೯೭೭, 'ಕರ್ನಾಟಕ ಜನಪದ ಕಲೆಗಳು', ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೧೫. ಜವರೇಗೌಡ ದೇ. ೨೦೦೧, 'ಜಾನಪದ ಅಧ್ಯಯನ' ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು.

೧೬. ಚಿದಾನಂದ ಮೂರ್ತಿ ಎಂ, ೨೦೦೨, 'ಜನ-ಜನಪದ-ಜಾನಪದ' ಸತ್ಯ ಬುಕ್‌ಹೌಸ್ ಬೆಂಗಳೂರು.

೧೭. ಚಿದಾನಂದ ಮೂರ್ತಿ ಎಂ, ೧೯೬೬, 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' (ಕ್ರಿ.ಶ. ೪೫೦-೧೧೫೦) ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ

೧೮. ಚಿನ್ನಪ್ಪಗೌಡ ಪಿ. (ಸಂ) ೨೦೦೩, 'ಗೌಡ ಜನಾಂಗದ ಇತಿಹಾಸ ಮತ್ತು ಸಂಸ್ಕೃತಿ' ಬೆಳ್ಳಿಹಬ್ಬ ಆಚರಣಾ ಸಮಿತಿ ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘ ಮಂಗಳೂರು.

೧೯. ಚಿನ್ನಪ್ಪ ಗೌಡ ಕೆ. (ಸಂ), ೨೦೦೩, 'ಸಂಸ್ಕೃತಿ ಸಿರಿ' ಮದಿಪು ಪ್ರಕಾಶನ ಮಂಗಳಗಂಗೋತ್ರಿ, ಮಂಗಳೂರು.

೨೦. ಚೆನ್ನಣ್ಣ ವಾಲೀಕಾರ, ೧೯೯೮, 'ಹೈದರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಜಾನಪದೀಯ ಅಧ್ಯಯನ' ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ ಗುಲ್ಬರ್ಗಾ.

೨೧. ಚಂದ್ರಶೇಖರ ಕಂಬಾರ (ಸಂ) ೧೯೮೫, 'ಕನ್ನಡ ಜಾನಪದ ವಿಶ್ವಕೋಶ' (ಸಂ ೧) ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೨೨. ಚಂದ್ರಶೇಖರ ಕಂಬಾರ, ೨೦೦೪, 'ದೇಶಿಯ ಚಿಂತನ' ಅಂಕಿತ ಪ್ರಕಾಶನ ಬೆಂಗಳೂರು.

೨೩. ಚಂದ್ರಶೇಖರ ದಾಮ್ಲೆ, ೧೯೯೫, 'ಜಾತ್ರೆಗಳ ಒಂದು ಜಾನಪದೀಯ ಅಧ್ಯಯನ' ಆರ್.ಆರ್.ಸಿ. ಉಡುಪಿ.

೨೪. ತಿಪ್ಪೇಸ್ವಾಮಿ ಜಿ.ಆರ್ ೧೯೯೯ "ಪ್ರಶಸ್ತಿ ಪಡೆದ ಮಹನೀಯರು ೧೯೮೭-೯೭" ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೨೫. ನಲ್ಲೂರು ಪ್ರಸಾದ ೨೦೦೧, 'ಗಂಗಡಿಕಾರ ಒಕ್ಕಲಿಗರು', ಅಪ್ರದೀನ ಪ್ರಕಾಶನ ಬೆಂಗಳೂರು.

೨೬. ನರಸಿಂಹ ಭಟ್ಟ ಕೈಂತಜೆ ೧೯೭೭, 'ಸುದರ್ಶನ' (ಡಾ ಟಿ.ಎಂ.ಎ. ಪೈ ಅಭಿನಂದನ ಗ್ರಂಥ) ವಿಜಯಾ ಕಾಲೇಜು ಟ್ರಸ್ಟ್ ಮೂಲ್ಕಿ ದ.ಕ.

೨೭. ನಾಗೇಗೌಡ ಎಚ್. ಎಲ್. (ಪ್ರ.ಸಂ) ೧೯೯೮, 'ಕನ್ನಡ ಜಾನಪದ ಕೋಶ' ಕರ್ನಾಟಕ ಜಾನಪದ ಪರಿಷತ್ತು ಬೆಂಗಳೂರು.

೨೮. ನಾಯಕ ಎನ್.ಆರ್. ೧೯೯೮, 'ಕರಾವಳಿ ಸೋಗುಗಳ ಬಹುರೂಪ' ಜಾನಪದ ಪ್ರಕಾಶನ ಹೊನ್ನಾವರ.

೨೯. ನಾರಾಯಣರಾವ್ ಎಂ.ಪಿ. (ಸಂ), ೨೦೦೪, 'ಕರಾವಳಿ ಜಾನಪದ ಕಲೆಗೆ ಕಮಲಾದೇವಿಯವರ ಕೊಡುಗೆ' ಕ್ರಾಫ್ಟ್ಸ್ ಕೌನ್ಸಿಲ್ ಆಫ್ ಕರ್ನಾಟಕ, ಬೆಂಗಳೂರು.

೩೦. ನಾಯಕ ಡಿ.ಬಿ. (ಪ್ರ ಸಂ) ೨೦೦೩, 'ಗಿರಿಜನ ಸಿರಿ' (ಪ್ರೊ. ಪಿ.ಕೆ. ಖಂಡೋಬಾ ಅಭಿನಂದನ ಸಂಪುಟ) ಅಭಿನಂದನಾ ಸಮಿತಿ, ಗುಲ್ಬರ್ಗಾ ವಿಶ್ವವಿದ್ಯಾಲಯ.

೩೧. ಪಾದೆಕಲ್ಲು ವಿಷ್ಣು ಭಟ್ಟ, ೧೯೯೭, 'ತುಳುವರಿವರು' ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ ಉಡುಪಿ.

೩೨. ಪಾಲ್ತಾಡಿ ರಾಮಕೃಷ್ಣ ಆಚಾರ್, ೧೯೯೭, 'ಜಾನಪದ ಮಿನದನ' ಸುಪ್ರಿಯಾ ಪ್ರಕಾಶನ ಪುತ್ತೂರು ದ.ಕ.

೩೩. ನಾವಡ ಎಂ.ವಿ. ಶುಭಾಶ್ಚಂದ್ರ (ಅನು) ೧೯೮೭, 'ತುಳುವ ದರ್ಶನ' ಪ್ರಾದೇಶಿಕ ವ್ಯಾಸಂಗ, ಕುಂದಾಪುರ.

೩೪. ಪುರುಷೋತ್ತಮ ಬಿಳಿಮಲೆ ೧೯೯೦, 'ಕರಾವಳಿ ಜಾನಪದ' ಮಂಗಳಗಂಗೋತ್ರಿ ಮಂಗಳೂರು.

೩೫. ಪುರುಷೋತ್ತಮ ಬಿಳಿಮಲೆ ೧೯೯೩, 'ಕೊರಗರ ಸಂಸ್ಕೃತಿ' ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು.

೩೬. ಪುರುಷೋತ್ತಮ ಬಿಳಿಮಲೆ (ಡಾ) ೧೯೯೨, 'ಶಿಷ್ಟ ಪರಿಶಿಷ್ಟ' ಮದಿಪು ಪ್ರಕಾಶನ ಮಂಗಳಗಂಗೋತ್ರಿ, ಮಂಗಳೂರು.

೩೭. ನಾವಡ ಎ.ವಿ. ೧೯೯೩, 'ಜಾನಪದ ಸಮಾಲೋಚನೆ' ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು

೩೮. ಡಾ. ಕೆ. ಪ್ರಭಾಕರ ಆಚಾರ್, ವಿದ್ಯಾ ಎಸ್.ನಾಯಕ್, ೨೦೦೬, 'ದಕ್ಷಿಣ ಕನ್ನಡದ ದೇವರ ಕಾಡುಗಳು, ನಾಗಬನಗಳು ಮತ್ತು ಭೂತಸ್ಥಾನಗಳು' ನಾಗರಿಕ ಸೇವಾ ಟ್ರಸ್ಟ್ (ರಿ) ಗುರುವಾಯನ ಕೆರೆ (ದ.ಕ.)

೩೯. ಪ್ರಭಾಕರ ಎ.ಎಸ್. (ಸಂ) ೨೦೦೪ 'ಬುಡಕಟ್ಟು ಅಭಿವೃದ್ಧಿ ಮೀಮಾಂಸೆ' ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೦. ಪ್ರಶಾಂತ್ ಎಚ್.ಡಿ. (ಸಂ) ೨೦೦೦, 'ಕರ್ನಾಟಕ ರಾಜ್ಯ ಕೋಶ-೪', ಜನಸಮುದಾಯ ಸಂಪುಟ, ಪ್ರ. ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ.

೪೧. ಪಾಂಡುರಂಗ ಡಿ. ಆರ್. ೧೯೯೦, 'ದಕ್ಷಿಣ ಕನ್ನಡ ಜಿಲ್ಲೆಯ ಭೈರರು' ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

೪೨. ಬೈರೇಗೌಡ ಎಂ, ೨೦೦, 'ಇರುಳಿಗರು ಜಾನಪದ ಅಧ್ಯಯನ' ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು.

೪೩. ಬೋರಲಿಂಗಯ್ಯ ಹಿ. ಚಿ. ೨೦೦೦, 'ಬುಡಕಟ್ಟು ದೈವಾರಾಧನೆ' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ.

